ನೆಮ್ಮದಿಯ ನಾಳೆ ನಮ್ಮದು




# ಹೊಸತು

ಮಾರ್ಚ್ ೨೦೦೧
ಬೆಲೆ : ರೂ. ೧೦

ಭೂಮಿ ಬಿರಿಯಿತು
ಬಾಳು ನಂದಿತು
ಶೋಕ ತಂದಿತು ಜನತೆಗೆ







# ೨೦೦೧ ಏಪ್ರಿಲ್ ೧೫ರಂದು ನಾಲ್ಕು ಮಹತ್ವದ ಕೃತಿಗಳ ಬಿಡುಗಡೆ

## ನವಕರ್ನಾಟಕ ವಿಜ್ಞಾನ ಪದವಿವರಣ ಕೋಶ



ಡೆಮಿ ಚತುರ್ಥಾಕಾರ
ಸುಮಾರು ೪೬೮ ಪುಟಗಳು

**ಸಲಹಾ ಮಂಡಲಿ**
ಎಸ್. ರಾಮರಾವ್, ಅಡ್ಯನಡ್ಕ ಕೃಷ್ಣಭಟ್
ಕೆ. ಬಿ. ಸದಾನಂದ, ಎಚ್. ಜಿ. ಸುಬ್ಬರಾವ್

**ಪ್ರಧಾನ ಸಂಪಾದಕ**
ಜಿ. ಟಿ. ನಾರಾಯಣ ರಾವ್

**ಸಂಪಾದಕರು**
ಸಿ. ಆರ್. ಕೃಷ್ಣ ರಾವ್
ಕೆ. ಎಲ್. ಗೋಪಾಲಕೃಷ್ಣ ರಾವ್

**ಸಂಪಾದಕ ಮಂಡಲಿ**
ಟಿ. ಆರ್. ಅನಂತರಾಮು, ಜಿ. ಕೆ. ರಂಗನಾಥ್
ಎಂ. ಕೆ. ರಾಜಗೋಪಾಲ್, ಎನ್. ಎಸ್. ಲೀಲಾ

ಬೆಲೆ : ರೂ. ೫೦೦/-
ಪ್ರಕಟಣಪೂರ್ವ
ಬೆಲೆ : ರೂ. ೩೫೦/-

**ವಿಜ್ಞಾನ ಪದವಿವರಣ ಕೋಶ** ಅನೇಕ ರೀತಿಯಲ್ಲಿ ಅದ್ವಿತೀಯ, ಅತ್ಯುಪಯುಕ್ತ. ಇದುವರೆವಿಗೂ ಕನ್ನಡದಲ್ಲಿ ಇಂಥ ನಿಘಂಟು ಬಂದುದಿಲ್ಲ. ಸುಮಾರು ೧೨,೦೦೦ ವೈಜ್ಞಾನಿಕ ಹಾಗೂ ದಿನಬಳಕೆಯ ತಾಂತ್ರಿಕ ಪದಗಳನ್ನೊಳಗೊಂಡಿರುವ ಈ ನಿಘಂಟಿನಲ್ಲಿ ವಿಜ್ಞಾನದ ಎಲ್ಲ ಶಾಖೆಗಳ ಪದಗಳೂ ಸೇರ್ಪಡೆ ಯಾಗಿವೆ. ಪಠ್ಯ ಭಾಗದಲ್ಲಿ ಅಕಾರಾದಿಯಾಗಿ ಕನ್ನಡ ಪದಗಳನ್ನೂ, ಪಕ್ಕದಲ್ಲಿ ಸಮಾನ ಇಂಗ್ಲಿಷ್ ಪದಗಳನ್ನೂ, ಅವು ಯಾವ ವಿಜ್ಞಾನ ವಿಭಾಗಕ್ಕೆ ಸೇರಿವೆ ಎಂಬುದನ್ನೂ, ಅನಂತರ ವಿವರಣೆಯನ್ನೂ, ಅವಶ್ಯವಿದ್ದೆಡೆ ಚಿತ್ರಗಳನ್ನೂ ಕೊಡಲಾಗಿದೆ. **ನವಕರ್ನಾಟಕ ಜ್ಞಾನ - ವಿಜ್ಞಾನ ಕೋಶದಂತೆಯೇ** ಇದೂ ಸಂಗ್ರಹಯೋಗ್ಯ.

## ಇಗೋ ಕನ್ನಡ

ಇದೊಂದು ಸಾಮಾಜಿಕ ನಿಘಂಟು. ಓದಿದಾಗ ಮುದ ನೀಡುವ ಇದರ ವ್ಯಾಪಕತೆ ಒಂದು ಪದಕ್ಕೆ ಅರ್ಥ ನೀಡುವಷ್ಟಕ್ಕೇ ಸೀಮಿತವಾಗಿಲ್ಲ. ಪದದ ಬೇರು, ಕಾಂಡ, ರಂಬೆ-ಕೊಂಬೆ ಇತ್ಯಾದಿಗಳ ಮೂಲ ಶೋಧಿಸಿ, ಬಳಕೆಯಲ್ಲಿ ಅದು ಹೇಗೆಲ್ಲ ಬದಲಾವಣೆ ಗೊಳಗಾಗಿದೆ ಎಂಬುದನ್ನು ಪತ್ತೆ ಮಾಡುವ, ಅಂತೆಯೇ ಭಾಷೆಯ ಬೆಳವಣಿಗೆಯ ದೃಷ್ಟಿಯಿಂದ ಅತ್ಯಂತ ಕ್ರಿಯಾಶೀಲವಾದ ಪರಿಶ್ರಮದ ಹಿನ್ನೆಲೆಯ ಕೃತಿ.



ಇಗೋ ಕನ್ನಡ
ಸಂಪುಟ ೨

ಬೆಲೆ : ರೂ. ೨೦೦/-
ಪ್ರಕಟಣ ಪೂರ್ವ ಬೆಲೆ : ರೂ. ೧೫೦/-

ಲೇಖಕ : **ಪ್ರೊ॥ ಜಿ. ವೆಂಕಟಸುಬ್ಬಯ್ಯ**
ಡೆಮಿ ಅಷ್ಟಾಕಾರ ೩೬೨ ಪುಟಗಳು

## ಬೇಡಿ ಕಳಚಿತು ದೇಶ ಒಡೆಯಿತು



ಬೆಲೆ : ರೂ. ೬೦೦/-
ಪ್ರಕಟಣ ಪೂರ್ವ ಬೆಲೆ : ರೂ. ೪೫೦/-

ಲೇಖಕ : **ಕೋ. ಚೆನ್ನಬಸಪ್ಪ**

*ಭಾರತ ಸ್ವಾತಂತ್ರ್ಯ ಸಂಗ್ರಾಮ ಕುರಿತ*
*ಸುಮಾರು ಸಾವಿರ ಪುಟಗಳ ಬೃಹತ್ ಕಾದಂಬರಿ*

ಡೆಮಿ ಅಷ್ಟಾಕಾರ ೧೦೦ಕ್ಕೂ ಹೆಚ್ಚು ಚಿತ್ರಗಳು

೧೮೫೭ರಿಂದ ೧೯೪೭ರವರೆಗಿನ ಸ್ವಾತಂತ್ರ್ಯ ಸಮರದ, 'ಸಿಪಾಯಿ ದಂಗೆ'ಯಿಂದ ಸುಭಾಸ ಬೋಸರ ಐಎನ್‌ಎ ಸೈನ್ಯದ ಸಶಸ್ತ್ರ ಹೋರಾಟ ದವರೆಗೆ ನಡೆದ, ಲಕ್ಷಾಂತರ ಭಾರತೀಯ ಯುವಕರು, ಯುವತಿಯರು, ಬಾಲಕ - ಬಾಲಕಿಯರು ಭಾಗವಹಿಸಿ ಲಾಠಿ ಏಟು, ಗುಂಡಿನೇಟು, ನೇಣುಗಂಬ, ದ್ವೀಪಾಂತರ ವಾಸ, ಉಪವಾಸ ಅನುಭವಿಸಿದ ಎದೆ ನಡುಗುವ ರೋಮಾಂಚನಕಾರಿ ಇತಿಹಾಸವನ್ನು ಕಥೆಯಾಗಿ ಮೂಡಿಸಿದ ಕಾದಂಬರಿ !

ಛಾಪೇಕರ್ ಬಂಧುಗಳಿಂದ ಹಿಡಿದು ಭಗತ್ ಸಿಂಗ್ ಬಳಗದವರವರೆಗೆ ಹೂಡಿದ ಬಾಂಬ್ ಕಾಯಕದ ಕಥೆ; ಗಾಂಧೀಜಿಯವರ ಅಹಿಂಸಾತ್ಮಕ ಚಳವಳಿ, ವಿವೇಕಾನಂದ, ಅರವಿಂದರಂಥ ಯೋಗಿಗಳ ಪಾಂಚಜನ್ಯ ನಿನಾದ ! ಅಮೆರಿಕೆಯಿಂದ ಗದ್ದರ್ ಪಾರ್ಟಿ, ಜಪಾನಿನಿಂದ ರಾಸ್ ಬಿಹಾರಿ ಬೋಸ್, ಬ್ರಿಟನ್ ಹಾಗೂ ಫ್ರಾನ್ಸ್‌ನ ಬುದ್ಧಿಜೀವಿಗಳು ಭಾರತ ಸ್ವಾತಂತ್ರ್ಯ ಹೋರಾಟಕ್ಕೆ ನೀಡಿದ ಅಪ್ರತಿಮ ಸೇವೆಯ ಇತಿಹಾಸ. ಅಜ್ಞಾತವಾಗಿ ಕಮ್ಯುನಿಸ್ಟ್ ಪಕ್ಷ ಹಾಗೂ ಕ್ರಾಂತಿಕಾರಿ ರಷ್ಯಾ ಬ್ರಿಟಿಷ್ ಸಾಮ್ರಾಜ್ಯವನ್ನು ಅಲ್ಲಾಡಿಸಿದ ಸಾಹಸ ಗಾಥೆ !

## ನವಕರ್ನಾಟಕ ಕೈಪಿಡಿ ರಂಗಭೂಮಿ

*ಪ್ರಾಯೋಗಿಕ ಮಾರ್ಗದರ್ಶಿ*

ಬೆಲೆ : ರೂ. ೨೫೦/-
ಪ್ರಕಟಣಪೂರ್ವ
ಬೆಲೆ : ರೂ. ೧೭೫/-



ಡೆಮಿ ಚತುರ್ಥಾಕಾರ
೨೦೮ ಪುಟಗಳು

ಲೇಖಕ
**ಎನ್. ಎಸ್. ವೆಂಕಟರಾಮ್**

- ೧೫೦ಕ್ಕೂ ಹೆಚ್ಚು ಆಕರ್ಷಕ ರೇಖಾಚಿತ್ರ ಗಳು, ಛಾಯಾಚಿತ್ರಗಳು
- ರಂಗಭೂಮಿಯ ಹುಟ್ಟು, ಬೆಳವಣಿಗೆ ಕುರಿತ ವಿವರಗಳು
- ರಂಗವಿಕಾಸ ✩ ಪಾಶ್ಚಾತ್ಯ ರಂಗಪರಂಪರೆ ✩ ರಂಗ ಶೈಲಿಗಳು ✩ ಭಾರತೀಯ ರಂಗ ಪರಂಪರೆ ✩ ಪ್ರಯೋಗಾಂಗಗಳು ✩ ನಾಟಕ ಕೃತಿ ✩ ಪೂರ್ವಸಿದ್ಧತೆ ✩ ಸಂಯೋಜನೆ ಮತ್ತು ರಂಗಚಿತ್ರಣ ✩ ರಂಗಕೃತಿ ನಿರ್ಮಾಣ - ಈ ವಿಷಯ ಗಳನ್ನೊಳಗೊಂಡಿದೆ
- ರಂಗಾಸಕ್ತರಿಗೆ, ನಾಟಕ ನಿರ್ದೇಶಕರಿಗೆ ಉಪಯುಕ್ತವಾದ ಕೈಪಿಡಿ.




## ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್

ಅಂ. ಪೆ. ೫೧೫೯, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧. ☎ : ೨೨೦೩೫೮೦/೮೧/೮೨

ಶಾಖೆಗಳು

| | | | | |
|---|---|---|---|---|
| ಕೆಂಪೇಗೌಡ ವೃತ್ತ ಬೆಂಗಳೂರು - ೯ ☎ : ೨೮೭೨೩೮೫ | ಗಾಂಧಿನಗರ ಬೆಂಗಳೂರು-೯ ☎ : ೨೨೫೧೩೮೨ | ಕೆ.ಎಸ್.ಆರ್. ರಸ್ತೆ ಮಂಗಳೂರು-೧ ☎ : ೪೪೧೦೦೧೬ | ರಾಮಸ್ವಾಮಿ ವೃತ್ತ ಮೈಸೂರು-೨೪ ☎ : ೪೨೪೮೯೪ | ಸ್ಟೇಷನ್ ರಸ್ತೆ ಗುಲ್ಬರ್ಗಾ-೨ ☎ : ೨೪೩೦೨ |

E-mail : nkp@bgl.vsnl.net.in
Website : www.navakarnatakabooks.com


ಒಟ್ಟು ರೂ.೧೫೫೦ ಬೆಲೆಯ
ನಾಲ್ಕು ಪುಸ್ತಕಗಳು ರೂ.೧೧೨೫ ಕ್ಕೆ ಲಭ್ಯ!
ಅಂಚೆ ವೆಚ್ಚ ರೂ.೨೫ ಪ್ರತ್ಯೇಕ
ಜೊತೆಗೆ ಅನಿರೀಕ್ಷಿತ ಕೊಡುಗೆ!

# ಹೊಸತು

## ಒಳಗೇನಿದೆ.....




*ಚಿತ್ರಗಳು : ಗುಜ್ಜಾರ್, ಮಕಾಳಿ, ಸತೀಶ್ ಯಲ್ಲಾಪುರ*
*ಶ್ರೀಹರಿ, ರವಿಕುಮಾರ್ ಅಜ್ಜೀಪುರ*
*ಮುಖಪುಟ : ಗುಜರಾತ್ ಭೂಕಂಪನ (ವಿವಿಧ ಮೂಲಗಳಿಂದ)*
*ವಿನ್ಯಾಸ : ನವಕರ್ನಾಟಕ ವಿನ್ಯಾಸ*
*ಕಚೇರಿ ಸಹಕಾರ : ಜಿ. ವಿ. ತೇಜೋವತಿ*


**ಭಾ**ರತವನ್ನು ಭೂಕಂಪವು ನಡುಗಿಸಿದ ತಿಂಗಳು ತಂದುಕೊಟ್ಟ ಅಗಾಧ ಹಾನಿಯನ್ನು ಸರಿಪಡಿಸಿಕೊಳ್ಳಲು ಕೆಲವು ವರ್ಷಗಳೇ ಬೇಕಾಗಬಹುದು. ಸತ್ತವರ ಸಂಖ್ಯೆಯ ಬಗ್ಗೆ ಭಿನ್ನಾಭಿಪ್ರಾಯಗಳಿವೆ. ಅದೆಷ್ಟೇ ಆದರೂ ಹೀಗೆ ಹಠಾತ್ತನೆ ಇಲ್ಲವಾದವರಿಗೆ 'ಹೊಸತು' ಕಂಬನಿಗರೆಯುತ್ತದೆ, ಉಳಿದು ಹಲವು ವಿಧದ ಕಷ್ಟಗಳನ್ನೆದುರಿಸುತ್ತಿರುವವರಿಗೆ ತನ್ನ ಸಾಂತ್ವನ ವ್ಯಕ್ತಪಡಿಸುತ್ತದೆ. ನವಕರ್ನಾಟಕ ಪ್ರಕಾಶನದ ಎಲ್ಲ ಬಂಧುಗಳೂ ಗುಜರಾತ್ ನಿಧಿಗೆ ತಮ್ಮ ಕೊಡುಗೆಯನ್ನು ನೀಡಿದ್ದಾರೆ. ಅದು ಒಂದು ಹನಿ ಮಾತ್ರ ಎನಿಸಿದರೂ ಭಾವನಾತ್ಮಕ ಸಂಬಂಧಕ್ಕೆ ಅದೊಂದು ಅರ್ಥಪೂರ್ಣ ಕುರುಹಾಗಿದೆ.

ಇತ್ತೀಚೆಗೆ ಬಂದ ಒಂದು ಸುದ್ದಿಯು ಉತ್ತರ ಪ್ರದೇಶ ಸರ್ಕಾರದ ಕೆಟ್ಟ ಬುದ್ಧಿವಂತಿಕೆಯನ್ನು ಬಯಲುಮಾಡಿದೆ. ಮಸೀದಿ ಉರುಳಿಸಿದ ಅಪರಾಧದಲ್ಲಿ ಭಾಗಿಗಳಾಗಿದ್ದರೆಂದು ಹೇಳಲಾದ ಅದ್ವಾನಿ, ಮುರಳಿ ಜೋಶಿ, ಉಮಾ ಭಾರತಿ, ಮುಂತಾದ ಮೇಲ್ಮಟ್ಟದ ನಾಯಕರ ವಿರುದ್ಧ ದೂರು ಸಲ್ಲಿಸುವಾಗ ಏನೋ ತಾಂತ್ರಿಕ ನ್ಯೂನತೆಗಳಿಂದ ಕೂಡಿದ ಯಾದಿ ಸಲ್ಲಿಸಲಾಗಿತ್ತೆಂದು ನ್ಯಾಯಾಲಯ ನುಡಿದಿದೆ. ಅದನ್ನು ಕಂಡುಕೊಳ್ಳಲು ಎಂಟು ವರ್ಷಗಳು ಬೇಕಾಯಿತು ! ತಮ್ಮದೇ ಸರ್ಕಾರ ತಮ್ಮ ವಿರುದ್ಧ ದೂರು ದಾಖಲು ಮಾಡುವಾಗ ಇಷ್ಟಾದರೂ ಅಚಾತುರ್ಯ ತೋರದಿದ್ದರೆ ಹೇಗೆ ! ಆದರೆ ಆಗ್ಗೆ ಮುಖ್ಯಮಂತ್ರಿಯಾಗಿದ್ದ ವ್ಯಕ್ತಿಯ ಮೇಲೆ ದೂರು ನೀಡುವಾಗ ಅಕ್ರಮವಿರಲಿಲ್ಲವಂತೆ. ಆತ ತನ್ನ ಹಿಂದಿನ ಪಕ್ಷವನ್ನು ತೊರೆದಿರುವುದರಿಂದ ದೂರಿನಲ್ಲಿ ನ್ಯೂನತೆ ಕಾಣಬರಲಿಲ್ಲವೆಂಬುದು ಇದರರ್ಥವಲ್ಲ. ಆದರೆ ರಾಜಕೀಯ ತಿಮಿಂಗಿಲಗಳು ಕಾನೂನಿನ ಕಕ್ಷೆಯಿಂದ ಹೊರಗುಳಿಯಲು ಬೇಕಾದಷ್ಟು ಹಾದಿಗಳಿವೆ ಎಂಬುದನ್ನು ಇದು ಸೂಚಿಸುತ್ತದೆ. ಭಾರತೀಯ ಸಂಸ್ಕೃತಿಯ ಉದಾತ್ತ ವಕ್ತಾರರು ತಾವೆಂದು ಭ್ರಮಿಸುವ ಅದ್ವಾನಿ ಕೂಟ ನೇರವಾಗಿ ಉತ್ತರ ಪ್ರದೇಶ ಸರ್ಕಾರಕ್ಕೆ ತಿಳಿಸಬೇಕು: ನ್ಯೂನತೆಗಳಿಲ್ಲದಂತಹ ಆಪಾದನೆಗಳ ಪಟ್ಟಿಯನ್ನು ನ್ಯಾಯಾಲಯಕ್ಕೆ ಸಲ್ಲಿಸಬೇಕೆಂದು. ಹಾಗೆ ಮಾಡದಿದ್ದರೆ ಕೇಂದ್ರ ಗೃಹಮಂತ್ರಿಯಾಗಿರಲು ಅದ್ವಾನಿಯವರಿಗೆ ಯಾವ ನೈತಿಕ ಹಕ್ಕೂ ಇರುವುದಿಲ್ಲ. ಅಂತಹ ಅಪರಾಧಗಳ ಆರೋಪ ಹೊತ್ತುಕೊಂಡು ಸಚಿವರಾಗಿ ಮುಂದುವರಿಯಕೂಡದೆಂದು ಅದ್ವಾನಿ ಮುಂತಾದವರನ್ನು ಆಗ್ರಹಪಡಿಸಿದ್ದಕ್ಕೆ ಈಗ ಉತ್ತರ ಬಂದಿದೆ, ನ್ಯಾಯಾಲಯದ ತೀರ್ಪಿನ ರೂಪದಲ್ಲಿ. ಅಪರಾಧದಿಂದ ಮುಕ್ತರೆಂದೇನೂ ತೀರ್ಪು ನೀಡಲಾಗಿಲ್ಲ; ದೂರು ಕ್ರಮಬದ್ಧವಾಗಿಲ್ಲ ಎಂಬುದಷ್ಟೇ ನ್ಯಾಯಾಲಯ ಹೇಳಿರುವುದು. ಒಂದು ದೂರನ್ನು ಸಹ ಸಕ್ರಮವಾಗಿ ದಾಖಲಿಸದ ಹೇಡಿತನ ಅದ್ವಾನಿಯವರ ಪಕ್ಷದ್ದು, ಅವರ ಪ್ರತಿನಿಧಿಗಳದ್ದು. ಅವರ ವಿರುದ್ಧವೂ ಈಗ ಕಾನೂನುಕ್ರಮ ಜರುಗಿಸಬೇಕು. ಶಿಬು ಸೋರೆನ್ ಮತ್ತು ಇನ್ನಿಬ್ಬರು ಕಾಂಗ್ರೆಸ್ ಸರ್ಕಾರಕ್ಕೆ ಬೆಂಬಲ ನೀಡಲು ಹಣ ಪಡೆದದ್ದರ ವಿರುದ್ಧ ಕ್ರಮ ಜರುಗಿಸುವುದು ಸರಿ ಎನ್ನುವ ನ್ಯಾಯಾಲಯ ಅದ್ವಾನಿ ಬಣದವರ ಕೃತ್ಯವನ್ನು ಖಂಡಿಸುವುದಿಲ್ಲವೆಂದು ಎಲ್ಲೂ ತೀರ್ಮಾನ ಬಂದಿಲ್ಲ. ಆದ್ದರಿಂದ ಉಮಾ ಭಾರತಿ ಆಗಲೆ ಸಂಭ್ರಮದ ನಾಟ್ಯ ಆರಂಭಿಸಿರುವುದು ಹಾಸ್ಯಾಸ್ಪದ. ಇವರೆಲ್ಲರ ವಿರುದ್ಧ ಸಕ್ರಮವಾಗಿ ಬೇರೊಂದು ದೂರು ದಾಖಲಿಸದಿದ್ದರೆ ಅಧಿಕಾರವನ್ನು ಭಾಜಪ ದುರುಪಯೋಗಪಡಿಸಿಕೊಳ್ಳುವುದಕ್ಕೆ ಮತ್ತೊಂದು ನಿದರ್ಶನವಾಗುತ್ತದೆ. ವೀರಪ್ಪನ್ ತಪ್ಪಿಸಿಕೊಳ್ಳುತ್ತಿರುವಂತೆ ಅದ್ವಾನಿ ಕೂಟ ತಪ್ಪಿಸಿಕೊಳ್ಳುವುದು ಬೇಡ.

ಪ್ರಯಾಗದ ಕುಂಭಮೇಳದಲ್ಲಿ ಲೆಕ್ಕವಿಲ್ಲದಷ್ಟು ಕೃತ್ರಿಮ ಪ್ರದರ್ಶನಗಳು ಸಾಲುಸಾಲಾಗಿ ಬಂದವು. ಅಲ್ಲಿ ನೆರೆದಿದ್ದ ''ಧರ್ಮ ಸಂಸತ್ತು'' ನಮ್ಮ ದೇಶದ ಸಂಸ್ಕೃತಿಯ ಪ್ರತಿನಿಧಿಯೆಂದು ಯಾರಾದರೂ ಭಾವಿಸಿದರೆ ಅದೊಂದು ಅಸಹ್ಯ ದುರಂತ. ಬೌದ್ಧಿಕ ಮತ್ತು ಸಾಂಸ್ಕೃತಿಕ ದಿವಾಳಿತನಕ್ಕೆ ಆ ಸಂಸತ್ತಿನ ಬಹುಮಂದಿ ಅರ್ಹ ಸಾಕ್ಷಿಗಳಾಗಬಲ್ಲವರಾಗಿದ್ದರು ! ಅಂಥವರ ಮಾರ್ಗದರ್ಶನದಲ್ಲಿ ವಿಶ್ವ ಹಿಂದೂ ಪರಿಷತ್ತು ನಮ್ಮ ಭವಿಷ್ಯ ರೂಪಿಸಲಿಚ್ಛಿಸುತ್ತದೆಯೆಂದರೆ ಅಶೋಕ ಸಿಂಘಾಲರಂಥವರ ಲೆಕ್ಕಾಚಾರದ ಬಗ್ಗೆ ಸಂಶಯ ಬರುವುದು ಅನಿವಾರ್ಯ. ಅಲ್ಲಿ ನಾಗಾ ಸಾಧುಗಳೂ ಇದ್ದರಂತೆ. ಅವರ ಬೆತ್ತಲೆಯ ಚಿತ್ರಗಳು ಅಲ್ಲಲ್ಲಿ ಪ್ರಕಟವಾಗಿವೆ. ಕರ್ನಾಟಕ ಸರ್ಕಾರವು ಚಂದ್ರಗುತ್ತಿಯ ಪ್ರಕರಣದಲ್ಲಿ ಕೈಗೊಂಡ ತೀರ್ಮಾನವನ್ನು ಉತ್ತರ ಪ್ರದೇಶ ಸರ್ಕಾರ ಈ ''ಸಾಧು''ಗಳಿಗೆ ಅನ್ವಯ ಮಾಡಬೇಕಿತ್ತು. ಈ ಸಾಧುಗಳು ಪರಂಪರೆಯ ಅಧಿಕೃತ ವಕ್ತಾರರೋ ಅಥವಾ ಪರೋಪಜೀವಿಗಳೋ ಎಂಬುದನ್ನು ಪರಿಶೀಲಿಸುವ ಅಗತ್ಯವಿದೆ. ಗೊಡ್ಡುತನದ ವೈಭವೀಕರಣ ಎಂದೂ ಶ್ರೇಯಸ್ಕರವಲ್ಲ. ಇನ್ನೂ ಬಹಿಷ್ಕರಿಸಿಲ್ಲದ ಫ್ಯಾಷನ್ ಟಿ.ವಿ.ಯಲ್ಲಿ ಅಥವಾ ಅದಕ್ಕೆ ಪರ್ಯಾಯವಾದ ಯಾವುದಾದರೂ ಚಾನಲ್‌ನಲ್ಲಿ ಈ ನಾಗಾ ಸಾಧುಗಳ ಪ್ರದರ್ಶನ ಮಾಡಬೇಕೆಂಬ ಉದ್ದೇಶ ನಮ್ಮ ಸರ್ಕಾರಗಳಿಗಿಲ್ಲವೆಂದು ಆಶಿಸಬೇಕಾಗಿದೆ.

ಧಾರ್ಮಿಕ ಜಡ್ಡುತನ ಎಷ್ಟು ಮಾರಕವಾಗಬಲ್ಲದೆಂಬುದಕ್ಕೆ ಇತ್ತೀಚಿನ ಬಾಂಗ್ಲಾದೇಶದ ಅನುಭವ ನಮ್ಮ ಮುಂದಿದೆ. ಮಹಿಳೆಯರ ಮೇಲೆ ಮುಲ್ಲಾಗಳು ಹೇರುವ ಅಬದ್ಧ ಕಟ್ಟಳೆಗಳು ಅವರನ್ನು ಹೀನಾಯದ ಸ್ಥಿತಿಗೆ ತಂದಿವೆಯೆಂದು ಬಾಂಗ್ಲಾದೇಶದ ಸರ್ಕಾರವು ಮುಲ್ಲಾಗಳ

(೩೧ನೇ ಪುಟದಲ್ಲಿ)




ಸಂಪುಟ-೨ ಸಂಚಿಕೆ - ೮ ಮಾರ್ಚ್ ೨೦೦೧

**ಪ್ರಧಾನ ಸಂಪಾದಕ**

ಜಿ. ರಾಮಕೃಷ್ಣ

**ಸಂಪಾದಕ ಮಂಡಲಿ**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಬಿ. ಜಿ. ಗುಜ್ಜಾರಪ್ಪ
ಎಸ್. ಗುರುದತ್
ಮಲ್ಲೇಪುರಂ ಜಿ. ವೆಂಕಟೇಶ್
ಬಿ. ವಿ. ವೀರಭದ್ರಪ್ಪ
ಕೆ. ಪಿ. ಸ್ವಾಮಿ

**ವ್ಯವಸ್ಥಾಪಕರು**

ಎಸ್. ಸುರೇಂದ್ರ
ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

ನವಕರ್ನಾಟಕ ಪ್ರಿಂಟರ್ಸ್
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೪೪೨೬

**ಹೊಸತು ಕಚೇರಿಯ ವಿಳಾಸ**




ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೨೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೦೩೫೮೦ / ೮೧ / ೮೨
e-mail : nkp@bgl.vsnl.net.in


# ಭೂಕಂಪದ ಹಿನ್ನೆಲೆಯಲ್ಲಿ ಅನರ್ಥ ರಾಜಕಾರಣ

**ಗು**ಜರಾತಿನಲ್ಲಿ ಸಂಭವಿಸಿದ ಭೀಕರ ಭೂಕಂಪದ ಕಾರಣಗಳನ್ನು ವಿಜ್ಞಾನಿಗಳು ನಿಷ್ಕೃಷ್ಟವಾಗಿ ವಿವರಿಸುವುದಕ್ಕೆ ಇನ್ನೂ ಯತ್ನಿಸುತ್ತಿರುವಾಗಲೇ ಕರ್ನಾಟಕದ ಒಬ್ಬ ಮಂತ್ರಿಗೆ ಅದ್ಭುತ ಜ್ಞಾನೋದಯವಾಗಿ ಅವನ್ನೆಲ್ಲಾ ನಿರ್ಣಾಯಕವಾಗಿ ತಿಳಿಸಿದ್ದು ಇತ್ತೀಚಿನ ಚರಿತ್ರೆ. ಈ ಮಂತ್ರಿ ಟಿ. ಜಾನ್ ಸಚಿವಸ್ಥಾನದಿಂದ ನಿರ್ಗಮಿಸಿದ್ದು ಖೇದನೀಯ ವಿಷಯವಲ್ಲ. ಕೇರಳದಲ್ಲಿ ವಿಷಪೂರಿತ ಮದ್ಯ ಸೇವಿಸಿ ಹತ್ತಾರು ಜನ ಅಸುನೀಗಿದಾಗಲೇ ಈತನ ನಿರ್ಗಮನವಾಗಬೇಕಿತ್ತೆಂಬ ಅಭಿಪ್ರಾಯ ವ್ಯಾಪಕವಾಗಿದೆ. ಭೂಕಂಪಕ್ಕೆ ಈತ ನೀಡಿದ ಕಾರಣ ದೈವದ ನಿಷ್ಠುರನ್ಯಾಯಕ್ಕೆ ಸಂಬಂಧಿಸಿದ್ದು. ಗುಜರಾತಿನಲ್ಲಿ ಕ್ರೈಸ್ತ ಮತಾನುಯಾಯಿಗಳ ಮೇಲೆ ಹಲ್ಲೆ ನಡೆದಾಗ ನಿಷ್ಕ್ರಿಯವಾಗಿ ಕುಳಿತಿದ್ದ ಜನಪ್ರಾತಿನಿಧಿಕ ಸರ್ಕಾರದ ಪಾಪಕ್ಕೆ ಪ್ರತೀಕಾರ ರೂಪದಲ್ಲಿ ದೇವರು ಗುಜರಾತಿನ ಜನರನ್ನು ಶಿಕ್ಷಿಸಿದ್ದಾನೆ ಎಂಬುದು ಅವರ ಪ್ರತಿಭೆಯ ಸಂಶೋಧನೆ. ಯಾವ ದೇವರು ಕ್ರುದ್ಧನಾಗಿ ಜನರ ಮೇಲೆ ಹಿಂಸಾಚೇಷ್ಟೆಯನ್ನು ಹರಿಯಬಿಟ್ಟನೆಂದು ಅವರು ತಿಳಿಸಿಲ್ಲ. ಜಾನ್‌ರ ದೇವರು ಹಾಗೆ ಮಾಡಿದನೋ ಅಥವಾ ಗುಜರಾತಿನ ಮುಖ್ಯಮಂತ್ರಿಯ ದೇವರು ಹಾಗೆ ಮಾಡಿದನೋ ತಿಳಿಯಬೇಕಾಗಿದೆ. ಕಾರ್ಯ-ಕಾರಣ ಭಾವವನ್ನು ಸ್ಥಾಪಿಸುವಾಗ ಜಾನ್ ಹಲವು ಅಂಶಗಳನ್ನು ಪರಿಗಣಿಸಿಲ್ಲ. ಉದಾಹರಣೆಗೆ, ಸೂರತ್‌ನಲ್ಲಿ ಕ್ರೈಸ್ತರ ಮೇಲೆ ಹಲ್ಲೆ ನಡೆದಿದ್ದರೂ ದೇವರಿಗೆ ಸೂರತ್ತಿನ ಜನರ ಮೇಲೆ ಕೋಪ ಉಕ್ಕಲಿಲ್ಲ. ಎರಡನೆಯದಾಗಿ, ಹಲ್ಲೆ ನಡೆಸಿದ್ದವರನ್ನಷ್ಟೇ ಶಿಕ್ಷಿಸುವಷ್ಟು ಸೌಜನ್ಯವನ್ನೂ ತೋರದ ದೇವರು ಎಂತಹ ದಯಾಮಯ ! ಹಾಗೆ ಹಲ್ಲೆ ನಡೆಸಿದವರನ್ನು ಕೇಶುಭಾಯಿ ಪಟೇಲ್ ಸರ್ಕಾರ ಇನ್ನೂ ಪತ್ತೆ ಹಚ್ಚಿಲ್ಲದಿದ್ದರೂ ಸರ್ವಜ್ಞ- ಸರ್ವಾಂತರ್ಯಾಮಿ ದೇವರಿಗೆ ಅವರನ್ನು ಗುರುತಿಸಲು ಸಾಧ್ಯವಾಗದಿದ್ದುದು ಶೋಚನೀಯ. ಜೊತೆಗೆ, ಹಲ್ಲೆಗೊಳಗಾಗಿದ್ದ ಅನೇಕ ಕ್ರೈಸ್ತಮತೀಯರೂ ಭೂಕಂಪಕ್ಕೆ ತುತ್ತಾಗಿದ್ದಾರೆ. ಸಚಿವರಾಗಿದ್ದ ಜಾನ್‌ರ ದೇವರ ಪ್ರಕಾರ ಇವರೇನು ಪಾಪವೆಸಗಿದ್ದರೋ ತಿಳಿದಿಲ್ಲ.

ಒಂದು ಮೂರ್ಖತನದ ಹೇಳಿಕೆಗೆ ಅಷ್ಟೇ ಮೂರ್ಖತನದ ಪ್ರತಿಕ್ರಿಯೆ ನಮ್ಮ ದೇಶದ ಕೆಲವು ರಾಜಕಾರಣಿಗಳ ಸಂಪ್ರದಾಯ. ಆದ್ದರಿಂದ ಕೇಶುಭಾಯಿ ಪಕ್ಷದ ಕರ್ನಾಟಕ ಧುರೀಣರು ಜಾನ್ ರಾಜಿನಾಮೆಯಿಂದ ತೃಪ್ತರಾಗದೆ ಆತನ ಬಂಧನವಾಗಬೇಕೆಂದು ಪ್ರತಿಭಟನೆ ಸಲ್ಲಿಸಿದರು. ಅದಕ್ಕೆ ಅವರು ಆಯ್ಕೆ ಮಾಡಿಕೊಂಡದ್ದು ಗಾಂಧಿ ಪ್ರತಿಮೆ ಇರುವ ಸ್ಥಳವನ್ನು. ಇದರಲ್ಲಿದ್ದ ಒಂದು ಚಾರಿತ್ರಿಕ ವ್ಯಂಗ್ಯವನ್ನು ಸೇಡಂ ತಂಡದವರು ಗುರುತಿಸಲಿಲ್ಲ. ೧೯೨೦ ರ ದಶಕದಲ್ಲಿ ಬಿಹಾರದ ಭೂಕಂಪದಲ್ಲಿ ಹತ್ತು ಸಾವಿರಕ್ಕೂ ಹೆಚ್ಚು ಮಂದಿ ಮರಣಹೊಂದಿದ್ದರು. 'ಚಂಪಾರಣ್ ಅನುಭವಗಳಿಂದ ಬಿಹಾರದಲ್ಲಿ ಅಸ್ಪೃಶ್ಯತೆ ಎಷ್ಟು ಘೋರವಾಗಿದ್ದಿತೆಂಬ ಪರಿಚಯ ಗಾಂಧೀಜಿಗಿದ್ದಿತು. ರಾಜೇಂದ್ರ ಪ್ರಸಾದರ ಮನೆಗೆ ಮೊದಲಬಾರಿ ಗಾಂಧೀಜಿ ಹೋಗಿದ್ದಾಗ ಅವರಿರಲಿಲ್ಲ. ಅವರ ಅನುಪಸ್ಥಿತಿಯಲ್ಲಿ ಗಾಂಧೀಜಿಯನ್ನು ಮನೆಯ ಹೊರಾಂಗಣದಲ್ಲಿ ಕುಳ್ಳಿರಿಸಿ ಊಟ ಹಾಕಲಾಗಿತ್ತು. ಅವರ ಪಾಡೇ ಹಾಗಾಗಿದ್ದರೆ ಇನ್ನು ಅಸ್ಪೃಶ್ಯರ ಸ್ಥಿತಿ ಏನಾಗಿರಬೇಕು ! ಅಸ್ಪೃಶ್ಯತೆಯ ವಿರುದ್ಧದ ಹೋರಾಟದಲ್ಲಿ ಗಾಂಧೀಜಿ ಬಿಹಾರದಲ್ಲಿ ಸ್ವಲ್ಪ ಹತಾಶರಾಗಿದ್ದರು. ಅಸ್ಪೃಶ್ಯತೆಯಂತಹ ಅಮಾನವೀಯ ಪಾತಕವನ್ನು ಆಚರಿಸುವ ಜನರನ್ನು ಶಿಕ್ಷಿಸಲು ದೇವರು ಬಿಹಾರದಲ್ಲಿ ಭೂಕಂಪ ಮಾಡಿಸಿದನೆಂದು ಗಾಂಧೀಜಿ ಹೇಳಿದರು. ಭೂಕಂಪದ ತರುವಾಯದಲ್ಲಿ ದಕ್ಷಿಣ ಭಾರತದಲ್ಲಿ ಪ್ರಚಾರಕಾರ್ಯದಲ್ಲಿ ತೊಡಗಿದ್ದ ಗಾಂಧೀಜಿ ಈ ಮಾತನ್ನು ಪದೇಪದೇ ಹೇಳಿದರು. ಅವರ ರಾಜಿನಾಮೆಯನ್ನು ಯಾರೂ ಕೇಳಲಿಲ್ಲ. ಕೇಳಿದ್ದರೂ ಯಾವುದರಿಂದ ಎಂಬ ಮರುಪ್ರಶ್ನೆ ಏಳುತ್ತಿತ್ತು. ಅಸ್ಪೃಶ್ಯತೆ ಬಿಹಾರದಲ್ಲಿ ಮಾತ್ರ ಆಚರಣೆಯಲ್ಲಿದ್ದಿತೆ ಎಂಬ ಪ್ರಶ್ನೆಯನ್ನು ಸ್ವತಃ ಗಾಂಧೀಜಿ ಹಾಕಿಕೊಂಡಿದ್ದಿರಬೇಕು.

ಗಾಂಧೀಜಿಯನ್ನು ಆ ಸಂದರ್ಭದಲ್ಲಿ ತರಾಟೆಗೆ ತೆಗೆದುಕೊಂಡವರು ಇಬ್ಬರು : ರವೀಂದ್ರನಾಥ ಟಾಗೋರ್ ಮತ್ತು ಬರ್ಟ್ರಂಡ್ ರಸೆಲ್. ಜನರನ್ನು ಆಂದೋಲನಗಳಲ್ಲಿ ಭಾಗವಹಿಸುವಂತೆ ಮಾಡುವ ನಾಯಕನೊಬ್ಬ ಆ ಜನರಲ್ಲಿ ಮೌಢ್ಯದ ಭಾವನೆಗಳನ್ನು ತುರುಕುವುದು ಅಪಾಯಕರವೆಂದು ನುಡಿದು ರಸೆಲ್ ಗಾಂಧೀಜಿಯವರನ್ನು ಕಟುವಾಗಿ ಟೀಕಿಸಿದರು. ಟಾಗೋರ್ ಸಹ ಅದೇ ಅಭಿಪ್ರಾಯವನ್ನು ನವಿರಾಗಿ ಪ್ರಕಟಿಸಿದರು. ಜಾನ್ ಹೇಳಿಕೆಯನ್ನು ಸಕಾರಣವಾಗಿಯೇ ಟೀಕಿಸಿದ ಭಾಜಪ ನಾಯಕರು ಮುಂದುವರಿದು ಇನ್ನೂ ಒಂದು ಮಾತನ್ನು ಹೇಳಿದರು : ಜಾನ್ ಹೇಳಿಕೆಯಿಂದ ಮತೀಯ ಕಲಹಗಳುಂಟಾಗುವ ಸಂಭವವಿದೆಯಾದ್ದರಿಂದ ಕೂಡಲೆ ಆತನನ್ನು ಬಂಧಿಸಬೇಕು, ಎಂದು. ಯಾರು ಇಂತಹ ಕಲಹಗಳನ್ನು ಹುಟ್ಟುಹಾಕುತ್ತಾರೆಂದು ಹೇಳಲಿಲ್ಲವಾದರೂ ಅದು ನಿಗೂಢವಾದ ವಿಷಯವಲ್ಲ. ಅಂದರೆ ಮತೀಯ ಘರ್ಷಣೆಯು ಒಂದು ರಾಜಕೀಯ ಅಸ್ತ್ರ, ಅದರ ನಿರೀಕ್ಷೆಯಲ್ಲಿರುವುದು ಭಾಜಪದ ಕಾರ್ಯತಂತ್ರಗಳಲ್ಲೊಂದು ಎಂಬುದು ಇದರರ್ಥ.

ಭೂಕಂಪದ ಸಂದರ್ಭದಲ್ಲಿ ದೇವರನ್ನು ಎಳೆದುತಂದಿರುವವರ ಪ್ರಕಾರ ದೇವರಿರಬೇಕು ಮತ್ತು ಅವನಿಗೆ (ಅಥವಾ ಅವಳಿಗೆ, ಇಲ್ಲವೆ ಅದಕ್ಕೆ) ಹಿಂಸೆಯ ಪ್ರವೃತ್ತಿ ಹಾಗೂ ಪ್ರತೀಕಾರ ಬುದ್ಧಿ ಇರಬೇಕು. ಘೋರಮಾನವರು ದೇವರನ್ನು ತಮ್ಮಂತೆಯೇ ಕಲ್ಪಿಸಿಕೊಳ್ಳುತ್ತಾರೆಂಬುದಕ್ಕೆ ಇದೊಂದು ನಿದರ್ಶನ. ಅವನಿಗೆ ಇವರಿಗಿರುವಂತೆ ತನ್ನವರು ಮತ್ತು ಬೇರೆಯವರು ಎಂಬ ಭೇದದ ಭಾವನೆ ಆರೋಪಿಸಲಾಗಿದೆ. ಆದ್ದರಿಂದ ನಮ್ಮ ದೇವರು ನಮ್ಮನ್ನು ರಕ್ಷಿಸುತ್ತಾನೆ, ಬೇಕಾದರೆ ಅವರ ದೇವರು ಅವರನ್ನು ರಕ್ಷಿಸಿಕೊಳ್ಳಲಿ ಎಂಬ ಅಂತರಾರ್ಥವೂ ಇದರಿಂದ ಹೊಮ್ಮುತ್ತದೆ. ಪ್ರಾಚೀನ ಗ್ರೀಸಿನಲ್ಲಿ ದೇವತೆಗಳನ್ನು ಕಲ್ಪಿಸಿಕೊಂಡದ್ದು ಹೀಗೆಯೇ: ಹುಲುಮಾನವರನ್ನು ಮಧ್ಯವರ್ತಿಗಳನ್ನಾಗಿಸಿಕೊಂಡು ದೇವತೆಗಳು ತಮ್ಮ ಪರಸ್ಪರ ಕಾದಾಟಗಳನ್ನು ಬಗೆಹರಿಸಿಕೊಳ್ಳುತ್ತಿದ್ದರು ಮತ್ತು ಶ್ರೇಯಸ್ಸನ್ನು ಸಾಧಿಸಿಕೊಳ್ಳುತ್ತಿದ್ದರು. ಜಾನ್-ಭಾಜಪ ಬೌದ್ಧಿಕ ಬರಡುತನವು ಪ್ರಾಚೀನ ಗ್ರೀಸ್ ಚಿಂತನೆಗಿಂತಲೂ ಹೆಚ್ಚು ಉದಾತ್ತವಾಗಿ ಬೆಳೆಯಲಿಲ್ಲ. ಹೋಗಲಿ ಎಂದರೆ ಆ ಕಾಲದ ಸಾಂಸ್ಕೃತಿಕ ಆಯಾಮಗಳನ್ನು ಕೂಡ ತನ್ನದಾಗಿಸಿಕೊಳ್ಳಲಿಲ್ಲ.

ಜಾನ್-ಭಾಜಪ ಹೇಳಿಕೆ-ಪ್ರತಿಕ್ರಿಯೆಗಳಲ್ಲಿ ಅಸಾಂಸ್ಕೃತಿಕ ಛಾಯೆ ದಟ್ಟವಾಗಿದೆ : ಸಂತ್ರಸ್ತರಿಗೆ ಮಾನವ ಆಶ್ರಯದಾತನಲ್ಲ; ಎಲ್ಲಕ್ಕೂ ಆ 'ನಿಮ್ಮ' ದೇವರು ಹೊಣೆ, ಆದ್ದರಿಂದ ಅವನಲ್ಲಿಗೇ ಹೋಗಿ, ಎಂದು ಹೇಳಿದಂತಾಗಿದೆ. ಈ ಘನಘೋರ ದುರ್ಭಾವನೆಗೆ ವಿರುದ್ಧವಾಗಿ ವಾಸ್ತವದಲ್ಲಿ ಜನ ಒಟ್ಟಿಗೆ ಕಲೆತು ಸತ್ತಿದ್ದಾರೆ ಮತ್ತು ಬದುಕುತ್ತಿದ್ದಾರೆ, ಯಾವ ಮತೀಯ ಲೇಪವೂ ಇಲ್ಲದೆ ಪರಸ್ಪರ ಕೈಜೋಡಿಸಿ ಎಲ್ಲರ ರಕ್ಷಣೆಗೂ ಧಾವಿಸಿದ್ದಾರೆ, ಸೆಣಸಿದ್ದಾರೆ. ತಮ್ಮ ತಮ್ಮ ಮತದವರನ್ನು ಮಾತ್ರ ಉಳಿಸಬೇಕೆಂಬ




**ಲೇಖಕರ ಗಮನಕ್ಕೆ**

ನಿಮ್ಮ ಲೇಖನಗಳಿಗೆ ಸ್ವಾಗತವಿದೆ. ಲೇಖನ ಕಳಿಸುವವರು ದಯವಿಟ್ಟು ಸ್ಫುಟವಾಗಿ ಬರೆದು ಕಳಿಸಬೇಕಾಗಿ ವಿನಂತಿ. ಹಸ್ತಪ್ರತಿಯನ್ನು ಸಹನೆಯಿಂದ ಪರಿಶೀಲಿಸಲು ಇದರಿಂದ ಸಾಧ್ಯವಾಗುತ್ತದೆ. ಇಲ್ಲದಿದ್ದಲ್ಲಿ ನಿಮ್ಮ ಮೌಲಿಕ ಲೇಖನ ಸಹ ಪ್ರಕಟವಾಗದಿರಬಹುದು ಎಂಬ ಆತಂಕ ನಮ್ಮದು. ನಿಮ್ಮ ಸಹಕಾರ ನಮಗೆ ಅತ್ಯಗತ್ಯ. ಅನಗತ್ಯವಾಗಿ ಇಂಗ್ಲಿಷ್ ಪದಗಳನ್ನೂ ವಾಕ್ಯಗಳನ್ನೂ ಬಳಸದಿದ್ದರೆ ಅನುಕೂಲವಾಗುತ್ತದೆ.

*- ಸಂಪಾದಕ, 'ಹೊಸತು'*

ಕೊಳಕು ಕೇಡಿನ ಭ್ರಷ್ಟಮತಿ ಗುಜರಾತಿನಲ್ಲೆಲ್ಲೂ ತಾಂಡವವಾಡಲಿಲ್ಲವೆಂಬುದು ಮಾನವೀಯತೆಗೆ ದೊರೆತ ದೊಡ್ಡ ಮನ್ನಣೆ. ಆದರೆ ಭೂಕಂಪದ ಸನ್ನಿವೇಶವನ್ನು ಕೂಡ ತನ್ನ ರಾಜಕೀಯ ಚದುರಂಗದಾಟಕ್ಕೆ ಬಳಸಿಕೊಳ್ಳಲು ಒಂದು ಮತೀಯ ಪರಿವಾರವು ಹುನ್ನಾರ ನಡೆಸಿದೆಯೆಂಬುದು ವ್ಯಾಪಕವಾಗಿ ವರದಿಯಾಗಿದೆ. ಹೊರ ರಾಜ್ಯಗಳಿಂದ ಬಂದ ವಸ್ತುಗಳನ್ನು ಕಡ್ಡಾಯವಾಗಿ ತನಗೆ ವಹಿಸಿಕೊಡಬೇಕೆಂದು ಪರಿವಾರವು ಆಗ್ರಹಪಡಿಸಿ, ಕೆಲವೊಮ್ಮೆ ಬಲವಂತವಾಗಿ ಕಿತ್ತುಕೊಂಡು, ತಾನೇ ಪರಿಹಾರ ಕೂಡಿಸಿಕೊಡಬಲ್ಲ ಧಣಿ ಎಂಬಂತೆ ನಡೆದುಕೊಂಡಿದೆ. ಪರಿಹಾರ ತಲುಪಿಸುವುದಕ್ಕಿಂತಲೂ ತಾನು ಅದನ್ನು ಸಂಗ್ರಹಿಸಿ ಕೊಟ್ಟಿದ್ದೆಂದು ತೋರಿಸಿಕೊಳ್ಳುವುದಕ್ಕೆ ಆದ್ಯತೆ ದೊರೆತರೆ ಅದು ಹೀನ ನಡತೆಯೇ ಸರಿ. ಆದರೆ ಹೀಗೆ ನಡೆದುದನ್ನು ತಳ್ಳಿಹಾಕಿ, ಪರಿವಾರದ ವಕ್ತಾರರು ನ್ಯಾಯಾಲಯಕ್ಕೆ ಹೋಗಿ ಸತ್ಯವನ್ನು ಸಾಬೀತುಪಡಿಸುವುದಾಗಿ ಹೇಳಿದ್ದಾರೆ. ಮಾನನಷ್ಟ ಮೊಕದ್ದಮೆಗಳ ಬೆದರಿಕೆಯನ್ನೂ ಹಾಕಲಾಗಿದೆ. ಗುಜರಾತ್ ಸರ್ಕಾರವು ಪರಿವಾರದ ಆಣತಿಯಂತೆ ನಡೆದುಕೊಂಡಿತೆಂಬ ದೂರು ಕೇಳಿಬಂದಿರುವುದಂತೂ ನಿಜ. ಭಾರತೀಯ ಸಂಸ್ಕೃತಿಯ ಬಗ್ಗೆ ಸತತವಾಗಿ ಹೆಮ್ಮೆಯ ಮಾತುಗಳನ್ನಾಡುವವರು ಕೃತಿಯಲ್ಲಿ ಆ ಸಂಸ್ಕೃತಿಗೆ ಅಪಚಾರವೆಸಗುತ್ತಿರುವುದು ಒಂದು ಅಕ್ಷಮ್ಯ ದೌರ್ಜನ್ಯ. ಇದಕ್ಕೆ ಪರ್ಯಾಯವಾಗಿ ಕಾರ್ಯತಃ ಉಚ್ಚ ಸಂಸ್ಕೃತಿಯ ಪ್ರತೀಕಗಳಂತೆ ನಡೆದುಕೊಂಡ ಭಾರತದ ಲಕ್ಷಗಟ್ಟಲೆ ಜನ ಅಭಿನಂದನೀಯರು, ವಂದನಾರ್ಹರು. ಅಲ್ಲಲ್ಲಿ ಸಣ್ಣತನ ಪ್ರದರ್ಶನಗೊಳ್ಳಲಿಲ್ಲವೆಂದಲ್ಲ; ಆದರೆ ಅದು ಸಹಾನುಭೂತಿ ಮತ್ತು ಸಹಯೋಗದ ಮಹಾಪೂರದಲ್ಲಿ ಕೊಚ್ಚಿಹೋಯಿತು. ತೃಪ್ತಿ ಇರುವುದು ಇದರಲ್ಲೇ.

ದೇಣಿಗೆಗಳನ್ನು ವಸೂಲು ಮಾಡಿ ನುಂಗಿಹಾಕುವ ಬಣ ಒಂದು ಕಡೆಗಾದರೆ ತಮ್ಮಲ್ಲಿರುವುದನ್ನು ಏನನ್ನೂ ಕೊಡದೆ ಸಾರ್ವಜನಿಕರಿಂದ ಮಾತ್ರವೇ ಸಂಗ್ರಹಿಸುವ ಪ್ರವೃತ್ತಿ ಇನ್ನೊಂದು ಕಡೆ. ಬೆಂಗಳೂರಿನಂತಹ ನಗರದಲ್ಲಿ ರಾಷ್ಟ್ರಧ್ವಜಗಳನ್ನು ಹಿಡಿದು, ಹತ್ತು-ಹನ್ನೆರಡು ಮಂದಿಯ ಕೆಲವು ಗುಂಪುಗಳಲ್ಲಿ ಸಂಗ್ರಹಿಸಿದ ಹಣ ಗುಜರಾತನ್ನು ಮುಟ್ಟುವುದು ತೀರಾ ಅನುಮಾನದ ಸಂಗತಿ. ಇದು ರಾಜ್ಯೋತ್ಸವ ಕಾಲದ ಹಣ ವಸೂಲಿ ಪ್ರಕರಣಗಳನ್ನು ನೆನಪಿಸುತ್ತದೆ. ಸಿನಿಮಾ ತಾರೆಯರು ಹಾಗೂ ಕ್ರಿಕೆಟ್ ಪಟುಗಳ ಒಂದು ಬಣದ ವಿಧಾನ ಬೇರೆ ತೆರನಾದ್ದು. ಅವರಲ್ಲಿರುವ ಬಿಳಿ-ಕಪ್ಪು ಹಣವನ್ನು ಜೋಪಾನವಾಗಿಟ್ಟುಕೊಂಡು ಪಾದಯಾತ್ರೆಗಳಲ್ಲಿ ಅಥವಾ ಆಟವಾಡಿ ಹಣ ಸಂಗ್ರಹಿಸುವುದು ಇವರ ವಿಧಾನ. ತಾರೆಯರು ಬರದಿದ್ದರೆ ಅಥವಾ ಕ್ರಿಕೆಟ್ ಆಟ ನೋಡದಿದ್ದರೆ ನಮ್ಮ ಜನಸಾಮಾನ್ಯರು ಗುಜರಾತಿನ ಸಂತ್ರಸ್ತರ ನೆರವಿಗೆ ಬರುವುದಿಲ್ಲವೆ? ಈ ಪ್ರಕ್ರಿಯೆಯು ಪ್ರದರ್ಶನವಾಗಿ ಮುಕ್ತಾಯವಾಗುತ್ತದೆಯೇ ಹೊರತು ಸಕ್ರಿಯ ಭಾಗವಹಿಸುವಿಕೆ ಆಗುವುದಿಲ್ಲ. ಆದರೆ ಭಾರತದ ಜನ ನೇರವಾಗಿ, ಸಕ್ರಿಯವಾಗಿ ಭಾಗವಹಿಸಿ ತಮ್ಮ ಮತ್ತು ದೇಶದ ಸ್ಥೈರ್ಯ-ಮರ್ಯಾದೆಗಳನ್ನು ಕಾಪಾಡಿದ್ದಾರೆ. ಗುಜರಾತಿನ ಒಂದು ಕಣ್ಣಿನ ಅಶ್ರುಧಾರೆಗೆ ಸಮವಾಗಿ ಇಡೀ ಭಾರತ ಇನ್ನೊಂದು ಕಣ್ಣಾಗಿ ತನ್ನ ಅಶ್ರುಧಾರೆಯನ್ನು ಹರಿಸಿದೆ. ಜಾನ್-ಭಾಜಪಗಳಂತಹ ಪರಿವಾರನಾಯಕರು ಇದನ್ನು ಗಣನೆಗೆ ತಂದುಕೊಳ್ಳಬೇಕು, ಅನುಸರಿಸಬೇಕು. ಅಂತಹ ಉಜ್ವಲ ಸಂಸ್ಕೃತಿಯನ್ನು ವಿಕಾಸಗೊಳಿಸುವುದು ನಮ್ಮೆಲ್ಲರ ಜವಾಬ್ದಾರಿ.

ಈ ಭೂಕಂಪದ ಪರಿಣಾಮವನ್ನು ಸರಿಗಟ್ಟುವ ಬೇರೆ ಮಾರಕ ವಿಷಯಗಳು ನಮ್ಮ ದೇಶವನ್ನು ನಡುಗಿಸುತ್ತಿವೆ. ಅವುಗಳ ಪೈಕಿ ವಿಶ್ವ ವ್ಯಾಪಾರ ಸಂಸ್ಥೆಯ ಒತ್ತಡವನ್ನು ಹಿಮ್ಮೆಟ್ಟಿಸದೆ ಕೇಂದ್ರ ಸರ್ಕಾರವು ಹೆಚ್ಚು ಹೆಚ್ಚು ಸರಕುಗಳಿಗೆ ನಮ್ಮ ಮಾರುಕಟ್ಟೆಯನ್ನು ತೆರವು ಮಾಡಿಕೊಡುತ್ತಿರುವುದು ಅತ್ಯಂತ ಭೀಕರವೆನಿಸುತ್ತದೆ. ಇನ್ನೊಂದು ತಿಂಗಳಲ್ಲಿ ಸಾವಿರದಿನ್ನೂರು ಹೊಸ ಪದಾರ್ಥಗಳು ದೇಶದೊಳಕ್ಕೆ ಪ್ರವಹಿಸಲಿವೆ. ನಮ್ಮ ಕೃಷಿ ಉತ್ಪನ್ನಗಳಿಗೆ ಬೆಲೆ ಕಡಿಮೆಯಾಗಿ ಈಗಾಗಲೆ ರೈತರು ಕಂಗಾಲಾಗಿದ್ದಾರೆ. ಉತ್ಪಾದನೆಗೆ ತಗುಲಿದ ಖರ್ಚು ಸಹ ಅವರಿಗೆ ದೊರೆಯುತ್ತಿಲ್ಲ. ಅವರ ಸ್ಥಿತಿಯನ್ನು ಸಾರ್ವಜನಿಕರ ಗಮನಕ್ಕೆ ತರಲು ಹೋದರೆ ಅವರನ್ನು ಹೊಡೆದು ಬಡಿದು ಬಂಧನಕ್ಕೆ ಗುರಿಮಾಡುವ ಸರ್ಕಾರ ನಮ್ಮದು. ಈಚೆಗೆ ಗುಲ್ಬರ್ಗಾದಲ್ಲಿ ನಡೆದದ್ದು ಇದೇ. ಇವು ಇನ್ನೂ ಹೆಚ್ಚುವ ಸನ್ನಿವೇಶವಿದೆ. ಆಹಾರಕ್ಕಾಗಿ ಬೇರೆ ದೇಶಗಳನ್ನು ಅವಲಂಬಿಸುವಂತಾಗುವುದು ಇದರ ಅಂತಿಮ ಪರಿಣಾಮ. ವಿಶ್ವ ವ್ಯಾಪಾರ ಸಂಸ್ಥೆಗೆ ಬೇಕಾದದ್ದೂ ಅದೇ. ಆಮೇಲೆ ನಮ್ಮ ಕೃಷಿಭೂಮಿಯನ್ನು ರಸ್ತೆಗಳನ್ನಾಗಿ ಪರಿವರ್ತಿಸಿ ರೈತರನ್ನು ನಡುರಸ್ತೆಯಲ್ಲಿ ನಿಲ್ಲಿಸಿದರೆ ಇಂದಿನ ಆಳುವ ವರ್ಗದ ಕೆಲಸ ಮುಗಿಯುತ್ತದೆ. ಕ್ಷಾಮದ ಅನುಭವವು ಭೂಕಂಪದ ಅನುಭವವನ್ನು ಮೀರಿಸುತ್ತದೆ. ಇಂತಹ ರುದ್ರ ಭವಿಷ್ಯವು ನಮ್ಮನ್ನು ಕಾಡುತ್ತಿರುವಾಗ ಕೇಂದ್ರ ಅರ್ಥ ಸಚಿವರು ಮತ್ತು ಕರ್ನಾಟಕದ ಮುಖ್ಯಮಂತ್ರಿಗಳು ಜಾಗತೀಕರಣದ ಉಜ್ಜ್ವಲ ಕೊಡುಗೆಗಳನ್ನು ಹೊಗಳುತ್ತಿದ್ದಾರೆ. ಅದಕ್ಕೆ ಅಮಾನವೀಯ ಮುಖವಿದೆಯೆಂದು ಇವರೆಲ್ಲಾ ಒಪ್ಪಿದ್ದಾರೆ; ಏಕೆಂದರೆ, 'ಮಾನವ ಮುಖವುಳ್ಳ ಜಾಗತೀಕರಣ' ಎಂಬ ಮೊಲದ ಕೊಂಬಿನ ಮಾತನ್ನು ಇವರೆಲ್ಲಾ ಆಡಲಾರಂಭಿಸಿದ್ದಾರೆ. ಜಾಗತೀಕರಣದ ಹೆಸರಿನಲ್ಲಿ ನಡೆಯುವ ದೈತ್ಯ ಲೂಟಿಗೆ ಎಂದೆಂದಿಗೂ 'ಮಾನವ ಮುಖ' ಸಾಧ್ಯವಿಲ್ಲವೆಂದು ಖ್ಯಾತ ಅರ್ಥಶಾಸ್ತ್ರಜ್ಞ ಪಾಲ್ ಸ್ವೀಜಿ ಸುಮಾರು ಒಂದು ದಶಕದ ಹಿಂದೆಯೇ ಒಂದು ಸಂದರ್ಶನದಲ್ಲಿ ನಿದರ್ಶನ ಸಹಿತ ಸ್ಪಷ್ಟಪಡಿಸಿದ್ದರು. ಏನನ್ನು ರಫ್ತು ಮಾಡಿ ಈ ಸಾವಿರಾರು ಸರಕುಗಳನ್ನು ನಮ್ಮ ಮಾರುಕಟ್ಟೆಯಲ್ಲಿ ತುಂಬಿಕೊಳ್ಳುತ್ತಿದ್ದೇವೆ ಮತ್ತು ಇದ್ದ ಸಣ್ಣಪುಟ್ಟ ಕೈಗಾರಿಕೋದ್ಯಮಗಳು ಮುಚ್ಚಿಹೋಗಿ ನಿರುದ್ಯೋಗ ಹೆಚ್ಚುತ್ತಿರುವ ದಿನಗಳಲ್ಲಿ ಈ ಸರಕುಗಳ ಗ್ರಾಹಕರು ಯಾರು? ದೇಶದ ಹತ್ತನೆಯ ಒಂದು ಭಾಗದ ಜನರ ಮೋಜಿಗಾಗಿ ನಮ್ಮ ಇಡೀ ದೇಶವನ್ನು ಕಂಪನಕ್ಕೆ ಗುರಿ ಮಾಡಹೊರಟಿರುವ ಆರ್ಥಿಕ ದೌರ್ಜನ್ಯವನ್ನು ಬೀದಿಬೀದಿಗಳಲ್ಲಿ ವಿರೋಧಿಸಿ ತಡೆಗಟ್ಟಬೇಕಾದ ಸಂದರ್ಭ ಇಂದು ನಮ್ಮ ಮುಂದಿದೆ.

(signature)



*ಚಂದಾ ವಿವರಗಳು*

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

*ನವಕರ್ನಾಟಕ ಶಾಖೆಗಳು*

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯ ✆ : ೨೨೫೧೩೮೨
ಕೆಂಪೇಗೌಡ ವೃತ್ತದ ಬಳಿ
ಬೆಂಗಳೂರು - ೫೬೦ ೦೦೯ ✆ : ೨೮೭೨೩೮೫
ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫೦೦೧ ✆ : ೪೪೧೦೦೬
ರಾಮಸ್ವಾಮಿ ವೃತ್ತ
ಮೈಸೂರು - ೫೭೦೦೨೪ ✆ : ೪೨೪೮೯೪
ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫೧೦೨ ✆ : ೨೪೩೦೨

### ಚೌಗಲೆ ಕಲಾಕೃತಿಗಳ ಬಗ್ಗೆ

''ಹೊಸತು'' ಫೆಬ್ರವರಿ ೨೦೦೧ ಸಂಚಿಕೆಯ ರಕ್ಷಾ ಪುಟದ ಒಳಭಾಗದಲ್ಲಿ ಚೌಗಲೆಯವರ ಕಲಾಕೃತಿಗಳನ್ನು ಪ್ರಕಟಿಸಿರುವುದು ''ಹೊಸತು'' ಕಲೆಗೆ ನೀಡುತ್ತಿರುವ ಪ್ರಾಶಸ್ತ್ಯವನ್ನು ತೋರಿಸುತ್ತದೆ. ಇದು ಸ್ವಾಗತಾರ್ಹ.

ಇನ್ನು ಚಿತ್ರಗಳ ಬಗ್ಗೆ : ಸ್ವಂತವಾಗಿ, ಔಪಚಾರಿಕ ಕಲಾ ಶಿಕ್ಷಣವಿಲ್ಲದೆ, ಚಿತ್ರ ರಚನೆ ಕಲಿತ ಚೌಗಲೆಯವರು ತಾಂತ್ರಿಕವಾಗಿ ಒಳ್ಳೆಯ ರೇಖಾ ಶುದ್ಧತೆಯನ್ನು, ಸಂಯೋಜನೆಯನ್ನು ರೂಢಿಸಿಕೊಂಡು ವಾಸ್ತವಿಕ ಶೈಲಿಯಲ್ಲಿ ಚಿತ್ರಗಳನ್ನು ರಚಿಸಿದ್ದಾರೆ. ಆದರೆ ವರ್ಣಗಳ ಬಳಕೆ ಅಷ್ಟು ಹಿತವಾಗಿಲ್ಲ. ವ್ಯಕ್ತಿಗಳ ವರ್ಣಗಳು ಸ್ವಾಭಾವಿಕವಾಗಿರುವಾಗ ಹಿನ್ನೆಲೆಯಲ್ಲಿ ಬದಲಾವಣೆ ತರಬಹುದು. ಇದಲ್ಲದೆ ವ್ಯಕ್ತಿಚಿತ್ರಣ ಭಾವರಹಿತವಾಗಿದೆ. ಇದೇ ರೀತಿಯ ಚಿತ್ರಗಳನ್ನು ಸೊಗಸಾಗಿ ರಚಿಸುವ ಯು. ರಮೇಶ್‌ರಾವ್‌ರವರ ಶೈಲಿಯನ್ನು ಹಾಗೂ ಅಮೃತ ಶೇರ್‌ಗಿಲ್‌ರವರ ಚಿತ್ರಗಳನ್ನು ಮಾನ್ಯ ಕಲಾವಿದರು ಪರೀಕ್ಷಿಸಿದಲ್ಲಿ ಸ್ವತಃ ಅವರು ಕೆಲವು ಅಂಶಗಳನ್ನು ಕಲಿಯಬಹುದು.

ಹೂವಿನ ಮೇಲೆ ಕುಳಿತು ಪರಾಗ ಹೀರುತ್ತಿರುವ ಚಿಟ್ಟೆಯ ಚಿತ್ರ ನೋಡಲು ಏಕೋ ಹಿತವಾಗಿಲ್ಲ. ವರ್ಣಗಳ ಬಳಕೆ ಸೌಂದರ್ಯಕ್ಕೆ ಅನುವಾಗಿಲ್ಲ. ಚಿಟ್ಟೆ ಮತ್ತು ಹೂವಿನ ಚಿತ್ರಗಳು ಎಷ್ಟು ಸುಂದರವಾಗಿರಬೇಕು! ಆದರೆ ಈ ಚಿತ್ರ ಪ್ರೇಕ್ಷಕನಿಗೆ ಹಿಡಿಸಲಾರದು. ಮೊಣಕಾಲಿನ ಮೇಲೆ ಕೈ ಊರಿ ಕುಳಿತಿರುವ ಸ್ತ್ರೀ ಚಿತ್ರ ಪ್ರೇಕ್ಷಕರ ಮೆಚ್ಚುಗೆ ಪಡೆಯುತ್ತದೆ. ಅಭ್ಯಾಸ ಹೆಚ್ಚಿದಂತೆ ಚೌಗಲೆಯವರ ಕಲೆ ಉತ್ತಮವಾಗಿ ವಿಕಸಿಸುತ್ತದೆ.

*ಬೆಂಗಳೂರು* *ಯು. ಎಸ್. ವೆಂಕಟರಾಮನ್*

ಫೆಬ್ರವರಿ ೨೦೦೧-ಸಂಚಿಕೆಯಲ್ಲಿನ ನಿಮ್ಮ ಪತ್ರಿಕೆಯಲ್ಲಿ ಪ್ರಕಟವಾದ ವ್ಯಂಗ್ಯಚಿತ್ರಕ್ಕೆ ಪ್ರತಿಕ್ರಿಯೆ ವ್ಯಕ್ತಪಡಿಸಿದ 'ಅನಾಮಿಕ ಮಹಾಶಯ'ನನ್ನು ನೆನೆಸಿಕೊಂಡು ನಗು ಬಂತು ! ದಾನ ಧರ್ಮದ ಹೆಸರಿನಲ್ಲಿ ಅನಾವಶ್ಯಕ ಪೋಲು ಮಾಡುವುದನ್ನು ಸಮರ್ಥಿಸುವ ಇಂಥವರಿಗೆ ಬುದ್ಧಿ ಹೇಳಲು ಹೋದರೆ ಮೂರ್ಖರಾಗುವುದು ನಾವೇ !

ಮಸ್ತಕಾಭಿಷೇಕದ ವರದಿ ಬಂದಾಗಲೆಲ್ಲಾ ಅದರ ಬದಲು ಬಡವರಿಗಾದರೂ ಹಂಚಿದ್ದರೇ.. ಎನ್ನುವ ತಳಮಳ ಉಂಟಾಗುತ್ತಿತ್ತು. ಅದು ಯಾವಾಗಲೂ ಕಾಡುವಂಥದ್ದೇ ಆಗಿದೆ. ಉಡುಪಿಯ ಶ್ರೀಕೃಷ್ಣನಿಗೆ ವಜ್ರದ ಕಿರೀಟ ಇತ್ಯಾದಿ ನಮ್ಮ ಸಮಾಜದ ಮೂರ್ಖತನದ ಪರಮಾವಧಿ.

*ಬೆಂಗಳೂರು* *ಸ್ವಯಂಪ್ರಭೆ*

ಅರ್ಥಪೂರ್ಣ ಮುಖಚಿತ್ರದೊಂದಿಗೆ ಬಂದ ಸಂಚಿಕೆಯ 'ಸಂಸ್ಕೃತಿಗಳ ಮುಖಾಮುಖಿ' ಮತ್ತು 'ಜಾಗತಿಕ ಬಂಡವಾಳಕ್ಕೆ ಲಗಾಮು' ಲೇಖನಗಳು ಹೊಸ ಚಿಂತನೆಯ ಮತ್ತು ಆರ್ಥಿಕ ಲೋಕದ ಸಮಸ್ಯೆಗಳ ಮೇಲೆ ನೈಜತೆಯ ಬೆಳಕು ಬೀರಿವೆ. 'ಯುವಜನರು ಮತ್ತು ಸಾಮಾಜಿಕ ಬದಲಾವಣೆ' ಲೇಖನದಲ್ಲಿ ಹೇಳಿದಂತೆ ಯುವಕರಿಂದು ಸೈದ್ಧಾಂತಿಕವಾಗಿ, ವೈಚಾರಿಕವಾಗಿ ಸಾಮಾಜಿಕ ಪ್ರಜ್ಞೆ ಬೆಳೆಸಿಕೊಂಡು ನವ ವಸಾಹತುಶಾಹಿತ್ವವನ್ನು ಸಂಘಟನೆಯ ಮೂಲಕ ಎದುರಿಸಬೇಕಾಗಿದೆ.

*ಕಾಸರಗೋಡು* *ವಿ. ಶ್ರೀಧರಭಟ್, ಪೈವಳಿಕೆ*

ಫೆಬ್ರವರಿ ತಿಂಗಳ ಕಾನೂನು - ಸಂವಿಧಾನದಲ್ಲಿ ಪ್ರಕಟವಾದ 'ಕೊಳೆಗೇರಿ ವಾಸಿಗಳಿಗೆ ಬದುಕುವ ಹಕ್ಕು ಇದೆಯೇ?' ಖಂಡಿತ ಇದೆ. ಇವರು ಕಷ್ಟದಿಂದ ಇರಲು ಸರಕಾರಿ ಅಧಿಕಾರಿಗಳ ನಿರ್ಲಕ್ಷ್ಯವೇ ಕಾರಣ. ಅಲ್ಲಿನ ಜನರಿಗೆ ನಗರಕ್ಕೆ ಬಂದು ಜಾತಿಯ ಬಂಧನದಿಂದ ಪಾರಾಗಲು ಸಾಧ್ಯವಿಲ್ಲ. ಕೊಳೆಗೇರಿ ವಾಸಿಗಳಿಗೆ ಅವರದೇ ಊರಲ್ಲಿ ನೆಮ್ಮದಿಯಿಂದ ಇರುವ ಒಳ್ಳೆಯ ಕಾಲ ಬಂದೇ ಬರುತ್ತೆ.

*ಕೊಡಿಯಾಲ್ ಬೈಲ್* *ಮಣಮಾಲ ಶೆಟ್ಟಿ*




ಫೆಬ್ರವರಿ 'ಹೊಸತು' ತಲುಪಿದೆ. 'ಸಂಸ್ಕೃತಿಗಳ ಮುಖಾಮುಖಿ' ಚರ್ಚೆಗೆ ಅವಕಾಶ ಕಲ್ಪಿಸಿದ್ದೀರಿ. ನಿಮ್ಮ 'ಸಂಪಾದಕೀಯ' ಎಂದಿನಂತೆ ಜಳ್ಳು ತೂರಿ ಕಾಳು ತುಂಬಿಕೊಳ್ಳುವ ರೈತಾಪಿ ದೃಷ್ಟಿಕೋನವನ್ನು ನೆನಪಿಸುತ್ತದೆ. ಭೂಪಾಲ್......, ಕೋಲ್ಡ್ರಿಂಕ್ಸ್..... ಗಾಂಧಿ ಭಕ್ತ...... ಮುಂತಾದ ಒಂದೊಂದು ಲೇಖನವೂ 'ನಿಜದುದಯ' ದ ವ್ಯಾಪ್ತಿಗೊಳಪಡುತ್ತವೆ.

*ಕೋಲಾರ* *ವಿ. ಚಂದ್ರಶೇಖರ ನಂಗಲಿ*

ಜನವರಿ ೨೦೦೧ರ ವಿಶೇಷ ಸಂಚಿಕೆ ಹಾಗೂ ಫೆಬ್ರವರಿ ೨೦೦೧ ರ ಎರಡೂ ಸಂಚಿಕೆಗಳು ತಲುಪಿವೆ. ಧನ್ಯವಾದಗಳು. ವೈವಿಧ್ಯಮಯ ಲೇಖನಗಳು ಹೊಸ ಬಗೆಯ ಚಿಂತನ ಆಲೋಚನೆಗಳಿಂದಾಗಿ ಸಂಚಿಕೆಗಳು ಸುಂದರವಾಗಿ ಹೊರಬಂದಿವೆ.

*ಮುಧೋಳ* *ಎಸ್. ಜಿ. ಕೋಟಿ*

'ಹೊಸತು' ವಿಶೇಷ ಸಂಚಿಕೆ ತುಂಬ ಚೆನ್ನಾಗಿ ಬಂದಿದೆ. ಕನ್ನಡದಲ್ಲಿ ವೈಚಾರಿಕ ಪತ್ರಿಕೆ ಇದೊಂದೇ ಆಗಿರಬೇಕು. ಚಿಂತನಶೀಲರಿಗೆ-ಅಧ್ಯಯನಶೀಲರಿಗೆ ಇದೊಂದು ರುಚಿ ಆಹಾರ. ತಾವು ಸದಸ್ಯರಿಗೆ ವಿಶೇಷ ಸಂಚಿಕೆಯನ್ನು ಒದಗಿಸಿದ ಪ್ರಯುಕ್ತ ಫೆಬ್ರವರಿ ಸಂಚಿಕೆಯನ್ನು ಪ್ರಕಟಿಸಿರಲಿಕ್ಕಿಲ್ಲವೆಂದು ಭಾವಿಸಿದ್ದೆ.

ನನಗೆ ಆಕರ್ಷಕವೆನಿಸಿ ಓದಿದ ಲೇಖನಗಳು: ಭಾರತೀಯ ತತ್ವಜ್ಞಾನ – ಆಶಯ ಮತ್ತು ವಾಸ್ತವ, ರಾಮಾಯಣದಲ್ಲಿ ವೈಜ್ಞಾನಿಕ ಹೊಳಹುಗಳು, ಕಾಳಿದಾಸನ ಚಕ್ರ ಸಿದ್ಧಾಂತ, ಬಂಡವಾಳಶಾಹಿ, ಜಾಗತೀಕರಣ ಮತ್ತು ಕಾರ್ಲ್ ಮಾರ್ಕ್ಸ್, ಪ್ರಜಾಪ್ರಭುತ್ವ : ಪ್ರಜ್ಞೆ ಮತ್ತು ಪರಿಸರ, ಮತ್ತು ಕಾವ್ಯ-ಇತ್ಯಾದಿ, ಲೇಖನಗಳು ಚೆನ್ನಾಗಿವೆ.

*ಜಮಖಂಡಿ* *ಅರ್ಜುನ. ತಾ. ಕೋರಟಕರ*

ಫೆಬ್ರವರಿ ೨೦೦೧ರ 'ಹೊಸತು' ಪತ್ರಿಕೆಯ ಮುಖಪುಟ ಅತ್ಯಾಕರ್ಷಕವಾಗಿದ್ದು ಆರೋಗ್ಯ ಅಂಕಣದಲ್ಲಿ ಡಾ॥ ಕರವೀರಪ್ರಭು ಕ್ಯಾಲಕೊಂಡರವರ ತಂಪು ಪಾನೀಯ ಕುರಿತ ಲೇಖನಕ್ಕೆ ಹೆಚ್ಚಿನ ಶೋಭೆ ತಂದಿರುತ್ತದೆ. ಕೆಡುಕಿನ ತಂಪು ಪಾನೀಯಗಳ ಸೇವನೆಯಿಂದ ಮನುಷ್ಯನ ಆರೋಗ್ಯದ ಮೇಲಾಗುವ ದುಷ್ಪರಿಣಾಮಗಳ ಮಾಹಿತಿ ನೀಡಿರುವ ಲೇಖಕರಿಗೂ ಹಾಗೂ ಪ್ರಕಟಿಸಿದ ಹೊಸತುವಿಗೂ ಹೃತ್ಪೂರ್ವಕ ವಂದನೆಗಳು.

*ಮಂಡ್ಯ* *ಎನ್. ಶ್ರೀನಿವಾಸ್*

ಫೆಬ್ರವರಿ ತಿಂಗಳ 'ಹೊಸತು' ಮುಖಪುಟ, ತಿಂಗಳ ಕಥೆ, ಹಂಪಿ ಶಿವಾನಂದ ಆಶ್ರಮದ ಸದಾಶಿವ ಯೋಗಿಯವರ ಸಂದರ್ಶನ, ಆರೋಗ್ಯ ಅಂಕಣದ ಕೋಲ್ಡ್ರಿಂಕ್ಸ್ ಎಷ್ಟು ಸುರಕ್ಷಿತ? ಒಂದಕ್ಕಿಂತ ಒಂದು ಮಿಗಿಲು ಹಾಗೂ ಪ್ರಶಂಸನೀಯ. ದೇವರ ಹೆಸರಿನಲ್ಲಿ ಹಣ ಹಾಗೂ ಸಮಯ ವ್ಯರ್ಥ ಮಾಡುವವರಿಗೆ ಸದಾಶಿವ ಯೋಗಿಯವರ ಉತ್ತರಗಳು ಮನದಟ್ಟು ಮಾಡುವಂತಿವೆ.

ಆರೋಗ್ಯ ಹಾಳುಮಾಡುವ, ದುಬಾರಿ ಬೆಲೆಯ ಕೋಲ್ಡ್ರಿಂಕ್ಸ್‌ಗೆ ಮಾರುಹೋಗುವ ನಮ್ಮ ಜನರು ನೈಸರ್ಗಿಕ ಕೊಡುಗೆಯಾದ ಕೈಗೆಟುಕುವ ಬೆಲೆಗೆ ಸಿಗುವ, ಎಳನೀರನ್ನು ಉಪಯೋಗಿಸಬಾರದೇಕೆ?

*ಹೊಸಕೋಟೆ* *ವಿನೋದ್ ಕುಮಾರ್*

### ಡಿ. ಎನ್. ಎ. ಆವಿಷ್ಕಾರ

ಶ್ರೀಮತಿ ನೇಮಿಚಂದ್ರರ ಲೇಖನ ('ಹೊಸತು' ಜನವರಿ ೨೦೦೧, ವಿಜ್ಞಾನ ರಂಗದ ದುರಂತ ನಾಯಕಿ ರೋಸಲಿಂಡ್ ಎಲ್ಸೀ ಫ್ರಾಂಕ್ಲಿನ್) ಡಿ. ಎನ್. ಎ. ಆವಿಷ್ಕಾರದ ಇತಿಹಾಸದತ್ತ ಬೆಳಕು ಬೀರುವ ಸ್ಪಷ್ಟ ಮತ್ತು ಭಾವಾವೇಶಪೂರಿತ ಬರೆಹ. ಗಣಿತ ಪ್ರಪಂಚದಲ್ಲಿ ಮಹಿಳೆಯರನ್ನು ಇದೇ ರೀತಿ ನಿಕೃಷ್ಟವಾಗಿ ಸಮಾಜ ನಡೆಸಿಕೊಂಡಿದೆ ಎಂಬುದಕ್ಕೆ ಸೈಮನ್ ಸಿಂಗ್ ಬರೆದಿರುವ Fermat's Enigma (Double day 1997) ಪುಸ್ತಕದಲ್ಲಿ ಪುರಾವೆಗಳು ದೊರೆಯುತ್ತವೆ. ಅಸೂಯೆ, ಪುರುಷ ರೂಪದ್ದೇ ಆಗಲಿ ಸ್ತ್ರೀ ರೂಪದ್ದೇ ಆಗಲಿ, ಜ್ಞಾನಶತ್ರು ಎಂದು ಸಾರ್ವತ್ರೀಕರಿಸಬಹುದು.

*ಮೈಸೂರು* *ಜಿ. ಟಿ. ನಾರಾಯಣ ರಾವ್*



ಏ ತಂಗಿ, ಜೋಕೆ ! ಸ್ವಲ್ಪ ನಿಲ್ಲು!
ನಿನ್ನ ಬಗ್ಗೆ ನನಗೇಕೋ ಬಹಳ ಅನುಕಂಪ

ಹಗಲಲ್ಲಾಗಲಿ, ರಾತ್ರಿಯಲ್ಲಾಗಲಿ
ನೀನೊಬ್ಬಳೆ ಹೊರಗೆ ಕಾಲಿಡುವ ಮುನ್ನ
ಯೋಚಿಸು
ಕೆಲವು ಗಂಡಸರು ತಮ್ಮ ಸಂಯಮ ಕಳೆದುಕೊಂಡು
ಮೇಲೆ ಬೀಳುವ ಸಾಧ್ಯತೆ ಇದೆ.

ಮನೆಯಲ್ಲಿಯೇ ಇರಲು ನಿರ್ಧರಿಸುವೆಯಾ ?
ಅಲ್ಲಿಯೂ ಅಪಾಯವಿದೆ.
ಅಪರಿಚಿತರು, ಬಂಧು ಬಳಗದವರೇ
ನಿನ್ನ ಮಾನಭಂಗಕ್ಕೆ ಹಿಂಜರಿಯುವುದಿಲ್ಲ

ಬರಿಮೈ ಮಾತಿರಲಿ, ಬಟ್ಟೆ ತೊಟ್ಟೂ
ಹೊರಗೆ ಕಾಲಿಟ್ಟೀಯ, ಜಾಗ್ರತೆ !
ನಿನ್ನ ಬಟ್ಟೆಗಳನ್ನು ನೋಡಿಯೇ
ಕೆಲವರು ಕಾಮಪಿಶಾಚಿಗಳಾಗಿಬಿಡುತ್ತಾರೆ
ಛೇ ! ನಿನಗೆ ಬಾಲ್ಯಾವಸ್ಥೆಯೇ ಬೇಡವೆಂದು ನನ್ನ ಅನಿಸಿಕೆ
ಏಕೆಂದರೆ, ಕೆಲವು ಅತಿಕಾಮಿಗಳು
ಪುಟ್ಟಬಾಲಕಿಯರನ್ನು ನೋಡಿದರೇ ಗೂಳಿಗಳಾಗಿಬಿಡುತ್ತಾರೆ

ಇನ್ನು ವೃದ್ಧಾಪ್ಯ !
ಕೆಲವು ದುಷ್ಟರಿಗೆ ವೃದ್ಧೆಯರ ಮೇಲೆ ಕಣ್ಣು

ಈ ಮಾತು ಹೇಳಲಂತೂ ನನಗೆ ಬಹಳ ಕಸಿವಿಸಿ !
ಅಪ್ಪ, ತಾತ, ಮಾವ, ಭಾವ, ಸಹೋದರ......
ಎಲ್ಲರಿಂದಲೂ ದೂರ ಇರು..
ವಯಸ್ಸಿನ ಹೆಣ್ಣು ಮಕ್ಕಳ ಮಾನಭಂಗ ಮಾಡುವವರು
ಬಂಧುಗಳೆನಿಸಿಕೊಂಡ ಈ ಜನರೇ

ಇವರೇ ಹೀಗಾದರೆ ಇನ್ನು ನೆರೆಹೊರೆಯವರು !
ನಿನಗೆ ಅವರ ಸಹವಾಸವೇ ಬೇಡ.

ಮದುವೆ ?
ದಯವಿಟ್ಟು ಅದನ್ನು ಮರೆತುಬಿಡು
ಏಕೆಂದರೆ, ವಿವಾಹಿತ ಜೀವನದಲ್ಲಿಯೂ
ಮಾನಭಂಗ ಎನ್ನುವುದು ಶಾಸನಬದ್ಧ
ಎನ್ನಿಸುತ್ತಿರುವುದು ಸಾಮಾನ್ಯವಾಗುತ್ತಿದೆ.

ತಂಗೀ !
ನಿಜ ಹೇಳಬೇಕೆಂದರೆ
ನೀನು ಯಾವ ಪುರುಷಾರ್ಥಕ್ಕಾಗಿ ಬದುಕಿರಬೇಕು ?
ನಿನಗೆ ಸಾವೇ ಮೇಲಲ್ಲವೇ ?
ಹೀಗಿದೆ ನಿನ್ನ ಸ್ಥಿತಿ.

*ಕೃಪೆ*
*ಲಂಡನ್ನಿನ ಅತ್ಯಾಚಾರ ವಿರೋಧಿ ಕೇಂದ್ರ*

*(ಅನುವಾದ : ಎಸ್. ಸುರೇಂದ್ರ)*

*ಪ್ರಕಟಣೆ*
ಇನ್ಸಾಫ್
ಮುಂಬೈ - ೬೪

# ಹಿಂಸೆಯ ಕಾವಿನಲ್ಲಿ ಭಾರತೀಯ ಹೆಣ್ಣು

ಮಹಿಳೆಯರ ಮೇಲೆ ನಡೆಯುವ ಕ್ರೌರ್ಯ ಎಲ್ಲ ರೀತಿಯ ಸಾಂಸ್ಕೃತಿಕ, ಧಾರ್ಮಿಕ ಮತ್ತು ಭೌಗೋಳಿಕ ಎಲ್ಲೆಗಳನ್ನೂ ಮೀರಿ ನಡೆಯುವಂತಹ ಲಿಂಗಾಧಾರಿತ ಕ್ರೌರ್ಯವಾಗಿದೆ. ಈ ಸಮಸ್ಯೆಯು ಪಡೆದುಕೊಳ್ಳುವ ಸ್ವರೂಪವು ಕೂಡ ಹಲವು ಮುಖಗಳನ್ನು ಹೊಂದಿರುವುದರಿಂದ ಪರಿಹಾರವು ವಿಶಿಷ್ಟ ರೂಪದಲ್ಲೇ ಇರಬೇಕಾಗುತ್ತದೆ. ಬೀಜಿಂಗ್‌ನಲ್ಲಿ ೧೯೯೫ರಲ್ಲಿ ನಡೆದ ಸಮ್ಮೇಳನದಲ್ಲಿ ಕ್ರಿಯಾ ವೇದಿಕೆಯೊಂದನ್ನು ರೂಪಿಸಲಾಗಿತ್ತು. ಆ ವೇದಿಕೆ ಮಹಿಳೆಯರ ಮೇಲೆ ನಡೆಯುವ ಕ್ರೌರ್ಯವನ್ನು ವ್ಯಾಖ್ಯಾನಿಸಿದ್ದು ಹೀಗೆ : ''ಮಹಿಳೆಯರಿಗೆ ದೈಹಿಕವಾಗಿ, ಲೈಂಗಿಕವಾಗಿ, ಮಾನಸಿಕವಾಗಿ ನೋವು ಕೊಡುವಂತಹ ಯಾವುದೇ ರೀತಿಯ ಲಿಂಗಾಧಾರಿತ ಕ್ರೌರ್ಯವು ಹಿಂಸೆ ಎನಿಸಿಕೊಳ್ಳುತ್ತದೆ. ಖಾಸಗಿ ಮತ್ತು ಸಾರ್ವಜನಿಕ ಜೀವನದಲ್ಲಿ ಉಂಟಾಗಬಹುದಾದ ಹಿಂಸೆಯು ಬೆದರಿಕೆಯ ಸ್ವರೂಪದಲ್ಲಿರಬಹುದು, ಇಲ್ಲವೇ ಬಲವಂತಪಡಿಸುವಂತಹುದಾಗಿರಬಹುದು ಹಾಗೂ ಸ್ವಾತಂತ್ರ್ಯಹರಣದಲ್ಲಿ ಕೊನೆಗೊಳ್ಳಬಹುದು.'' ಹಿಂಸೆಯನ್ನು ಹೀಗೆ ವ್ಯಾಖ್ಯಾನಿಸಿದ ಕ್ರಿಯಾ ವೇದಿಕೆಯು ಅದರ ಪರಿಹಾರಕ್ಕೆ ಮೂರು ಕಾರ್ಯತಂತ್ರಗಳನ್ನು ಸರ್ಕಾರಗಳಿಗೆ ಸೂಚಿಸಿತ್ತು.

ಬೀಜಿಂಗ್ ಸಮಾವೇಶದ ಕ್ರಿಯಾ ವೇದಿಕೆಯು ಸೂಚಿಸಿದ್ದ ಪರಿಹಾರ ಮಾರ್ಗಗಳು ಇವು : (ಅ) ಮಹಿಳೆಯರ ವಿರುದ್ಧ ನಡೆಯುವ ಹಿಂಸೆಯನ್ನು ತಡೆಯಲು ಮತ್ತು ಸಂಪೂರ್ಣವಾಗಿ ನಿವಾರಿಸಲು ಅಗತ್ಯವಾದ ಸಮಗ್ರ ಯೋಜನೆಯನ್ನು ರೂಪಿಸುವುದು; (ಆ) ಮಹಿಳೆಯರ ಮೇಲೆ ನಡೆಯುವ ದೌರ್ಜನ್ಯದ ಕಾರಣ ಮತ್ತು ಪರಿಣಾಮಗಳನ್ನು ಕುರಿತಂತೆ ಹಾಗೂ ನಿವಾರಣಾ ತಂತ್ರದ ಪರಿಣಾಮಗಳನ್ನು ಕುರಿತಂತೆ ಒಂದು ಅಧ್ಯಯನ ನಡೆಸುವುದು; (ಇ) ಮಹಿಳೆಯನ್ನು ಭೋಗದ ಸರಕನ್ನಾಗಿಸುವುದರ ವಿರುದ್ಧ ಕ್ರಮ ತೆಗೆದುಕೊಳ್ಳುವುದು ಹಾಗೂ ವೇಶ್ಯಾವೃತ್ತಿ ಮತ್ತು ಅತ್ಯಾಚಾರಕ್ಕೊಳಗಾಗಿ ಬಲಿಪಶುಗಳಾದವರಿಗೆ ಬದುಕಲು ನೆರವು ನೀಡುವುದು. ಆದರೆ ಭಾರತ ಸರ್ಕಾರ ಈ ಯಾವ ಸಲಹೆ ಮತ್ತು ಕಾರ್ಯತಂತ್ರಗಳನ್ನೂ ಗಂಭೀರವಾಗಿ ಪರಿಗಣಿಸಿಲ್ಲ ಮತ್ತು ಆ ದಿಕ್ಕಿನಲ್ಲಿ ಕಾರ್ಯಪ್ರವೃತ್ತವಾಗಿಲ್ಲ.

## ಆಸೆ

ರೆಕ್ಕೆಯಲಿ
ಇರದಿದ್ದರೂ ಶಕ್ತಿ,
ಮುಗಿಲಿನೆತ್ತರಕೆ
ಹಾರಿ ಬೆಳ್ಳಿಮೋಡಗಳ
ಬಳಿ ತೆರಳುವ ಬಯಕೆಯನು
ಇರಿಸಿಕೊಂಡಿರುವ ಹಕ್ಕಿ

ಎನ್. ಶ್ರೀನಿವಾಸ್
ಗ್ರಾಮೀಣ ಅಭಿವೃದ್ಧಿ ಕೇಂದ್ರ,
ವಿ.ಸಿ. ಫಾರಂ
ಮಂಡ್ಯ-೫೭೧ ೪೦೫

ಬೀಜಿಂಗ್ ಸಮಾವೇಶ ನಡೆದ ನಂತರದ ವರ್ಷಗಳಲ್ಲಿ ಮಹಿಳೆಯರ ಮೇಲಿನ ಹಿಂಸೆ ಕಡಿಮೆಯಾಗಿದೆಯೇ? ಸರ್ಕಾರದ ಅಂಕಿ ಸಂಖ್ಯೆಗಳೇ ಹೇಳುವಂತೆ, ಇಂಡಿಯನ್ ಪೀನಲ್ ಕೋಡ್‌ನಡಿ ದಾಖಲಾಗಬಹುದಾದ ಕ್ರೌರ್ಯಗಳು ೧೯೯೪ರಲ್ಲಿ ೮೨,೮೧೮ ರಷ್ಟಿದ್ದರೆ, ಅದು ೧೯೯೮ರಲ್ಲಿ ೧,೧೩,೦೦೦ ಮುಟ್ಟಿದೆ. ೧೯೯೮ರೊಂದರಲ್ಲೇ ದಾಖಲಾದ ಅತ್ಯಾಚಾರ ಪ್ರಕರಣಗಳ ಸಂಖ್ಯೆ ೧೩,೯೧೦. ಅದರಲ್ಲೂ ಆತಂಕಕಾರಿ ಬೆಳವಣಿಗೆಯೆಂದರೆ, ಲೈಂಗಿಕ ಕಿರುಕುಳದ ಪ್ರಕರಣಗಳೇ ಸುಮಾರು ೪೦,೦೦೦ದಷ್ಟು ಹೆಚ್ಚಾಗಿವೆ. ಶೇಕಡಾ ೩೫ರಷ್ಟು ಲೈಂಗಿಕ ಅತ್ಯಾಚಾರಗಳು ಅಪ್ರಾಪ್ತ ಬಾಲಕಿಯರ ಮೇಲೆ ನಡೆದಂತಹವು. ಪಟ್ಟಣದ ಪ್ರದೇಶಗಳಲ್ಲೂ ಎಳೆಯ ಹುಡುಗಿಯರು ಲೈಂಗಿಕ ಭರ್ತ್ಸನೆ, ಅವಹೇಳನಕರ ಮಾತುಗಳನ್ನು ಕೇಳಬೇಕಾಗುತ್ತದೆ. ಇಂತಹ ಪ್ರತಿಕ್ರಿಯೆಗಳನ್ನು ಪ್ರತಿಭಟಿಸಿದ ಎಷ್ಟೋ ಹುಡುಗಿಯರು ಪುರುಷರ ಕೋಪಕ್ಕೆ ಬಲಿಯಾದದ್ದಿದೆ. ಪುರುಷರಿಂದ ಸುಡಿಸಿಕೊಂಡು, ಆ್ಯಸಿಡ್ ಸುರಿಸಿಕೊಂಡು ಕೊಲೆಯಾದ ಹೆಣ್ಣುಮಕ್ಕಳ ಹಲವಾರು ನಿದರ್ಶನಗಳು ನಮ್ಮ ಕಣ್ಣಮುಂದಿವೆ.

ಹೆಣ್ಣಿನ ಮೇಲೆ ಹೆಚ್ಚುತ್ತಿರುವ ಈ ಹಿಂಸಾ ಪ್ರಕರಣಗಳು ದಿಢೀರ್ ಬೆಳವಣಿಗೆಯೇ? ಈ ಬದಲಾವಣೆಯ ಪ್ರಕ್ರಿಯೆಗೆ ಹಲವಾರು ಕಾರಣಗಳಿವೆ. ಭಾರತ ಇಂದು ಸಂಕ್ರಮಣಾವಸ್ಥೆಯ ಸ್ಥಿತಿಯಲ್ಲಿದೆ. ಜಾಗತೀಕರಣದ ಹಿನ್ನೆಲೆಯಲ್ಲಿ ಹೊಸ ಜೀವನ ವಿಧಾನ, ಹೊಸ ವಿಚಾರಗಳು ಬದುಕಿನ ಭಾಗವಾಗುತ್ತಿವೆ. ಅಂಥ ಗ್ರಾಹಕ ಸಂಸ್ಕೃತಿ ಮತ್ತು ಅಸಹಜವಾದ ಆಕಾಂಕ್ಷೆಗಳು ಜಾಹೀರಾತುಗಳ ಮೂಲಕ ಗರಿಗೆದರುತ್ತವೆ. ಏನೂ ಶ್ರಮವಿಲ್ಲದೆ ದಿಢೀರನೇ ಶ್ರೀಮಂತರಾಗಬೇಕೆನ್ನುವ ಆಸೆ, ಮತ್ತು ಆ ಆಸೆಗೆ ಹಾದಿಯಂತೆ ತೋರುವ ಕಾರ್ಯಕ್ರಮಗಳು ವ್ಯಕ್ತಿಗಳ ಯೋಚನೆ ಮತ್ತು ಬದುಕಿನ ವಿಧಾನವನ್ನು ಪ್ರಭಾವಿಸುತ್ತಿವೆ. ಜನರ ಆಕಾಂಕ್ಷೆಗಳು ಮತ್ತು ಅವುಗಳ ಈಡೇರಿಕೆಯ ನಡುವೆ ಭಾರಿ ಕಂದರವಿದೆ. ಈ ಅಂಶವು ಮನುಷ್ಯ-ಮನುಷ್ಯರ ನಡುವಿನ ಕ್ರಿಯೆಗಳಲ್ಲಿ ಪ್ರತಿಧ್ವನಿಸುತ್ತದೆ. ಸಣ್ಣ ಸಣ್ಣ ಕಾರಣಗಳಿಗಾಗಿ ದೊಡ್ಡ ಹಿಂಸಾಕೃತ್ಯಗಳು ನಡೆದದ್ದು ವರದಿಯಾಗುತ್ತಿರುತ್ತವೆ. ಸಹಜವಾಗಿ ಇಂತಹ ಸಂದರ್ಭಗಳಲ್ಲಿ ವಿಶೇಷವಾಗಿ ಹಿಂಸೆಗೆ ಗುರಿಯಾಗುವವರು ಹೆಂಗಸರೇ.

ವಿದ್ಯುನ್ಮಾನ ಮಾಧ್ಯಮಗಳಲ್ಲಿ ಖಾಸಗೀ ಕಂಪೆನಿಗಳಿಗೆ ಪ್ರವೇಶ ದೊರಕಿಸಿರುವುದರಿಂದ ಹಿಂಸೆ ಮತ್ತು ಲೈಂಗಿಕತೆಯನ್ನಾಧರಿಸಿದ ಕಾರ್ಯಕ್ರಮಗಳೇ ಹೆಚ್ಚಾಗಿ ಟಿ.ವಿ. ಚಾನೆಲ್‌ಗಳಲ್ಲಿ ಕಾಣಿಸಿಕೊಳ್ಳುತ್ತಿವೆ. ಈ ಟಿ.ವಿ. ಕಾರ್ಯಕ್ರಮಗಳಲ್ಲಿ ಬಹುಪತ್ನಿತ್ವ ಮತ್ತು ವಿವಾಹೇತರ ಸಂಬಂಧಗಳನ್ನಾಧರಿಸಿ, ಇಲ್ಲವೇ ಅವಕ್ಕೆ ಹೆಚ್ಚು ಒತ್ತುಕೊಡುವಂತಹ ಕಾರ್ಯಕ್ರಮಗಳು ಬಿತ್ತರವಾಗುತ್ತವೆ. ಲೈಂಗಿಕ ದೌರ್ಜನ್ಯ, ಅತ್ಯಾಚಾರದ ಸನ್ನಿವೇಶಗಳು ಮನರಂಜನೆಯ ಭಾಗವಾಗಿ ಪ್ರತಿದಿನ ಕಾಣಿಸಿಕೊಳ್ಳುತ್ತವೆ. ಇಂತಹ ದೃಶ್ಯಗಳಲ್ಲೂ ಹೆಂಗಸರೇ ಅತ್ಯಾಚಾರಕ್ಕೆ ಆಹ್ವಾನಿಸುವ, ಇಲ್ಲವೇ ಪ್ರಚೋದಿಸುವ ಪಾತ್ರಗಳಾಗಿ ಚಿತ್ರಿತರಾಗುತ್ತಾರೆ. ಕಾರಿನಿಂದ ಹಿಡಿದು ಸಾಬೂನಿನ ಮಾರಾಟದವರೆಗೆ ಎಲ್ಲಕ್ಕೂ ಹೆಣ್ಣಿನ ಶರೀರವೇ ಜಾಹೀರಾತು ಮಾಧ್ಯಮವಾಗಿ ಕಾಣಿಸಿಕೊಳ್ಳುತ್ತಿದೆ. ಇಂತಹ ದೃಶ್ಯಗಳಿಂದ ಕೆಲವು ಪುರುಷರು ತಮ್ಮ ಲೈಂಗಿಕ ಕಾಮನೆಗಳನ್ನು ತೀರಿಸಿಕೊಳ್ಳಲು ಅವಕಾಶಕ್ಕಾಗಿ ಕಾಯುತ್ತಿರುತ್ತಾರೆ ಮತ್ತು ಅದು ಜಾಹೀರಾತುಗಳಲ್ಲಿರುವಂತೆ ಸುಲಭವಾಗಿ ಲಭ್ಯವೆಂಬ ಭಾವನೆ ತುಂಬಿಕೊಳ್ಳುತ್ತಾರೆ.

ಆರ್ಥಿಕ ಕ್ಷೇತ್ರದಲ್ಲಿನ ಉದಾರೀಕರಣ ನೀತಿಯಿಂದ ಹೆಣ್ಣಿನ ದುಡಿಯುವ ಕ್ಷೇತ್ರ ಹೆಚ್ಚು ಅಭದ್ರವೂ, ಅಸಹಾಯಕ ಸ್ಥಿತಿಯದೂ ಆಗಿದೆ. ಯಾವುದೇ ಸಾಮಾಜಿಕ, ಕಾರ್ಮಿಕ ಕಲ್ಯಾಣ ನೀತಿಯನ್ನು ಅನುಸರಿಸದೇ ಖಾಸಗಿ ಮಾಲೀಕರು ಹೆಣ್ಣನ್ನು ಅಗ್ಗದ ದುಡಿಮೆಯೆಂದು ಭಾವಿಸುವ ಕಾರಣ, ಅವರ ಮೇಲೆ ಲೈಂಗಿಕ ಕಿರುಕುಳಗಳು ಹೆಚ್ಚಾಗುತ್ತಾ ಹೋಗುತ್ತಿವೆ. ಕೆಲಸದ ಬೇಟೆಯಲ್ಲಿ ವಲಸೆ ಹೋಗುವ ಅಸಂಘಟಿತ ಕಾರ್ಮಿಕ ಕ್ಷೇತ್ರಕ್ಕೆ ಸೇರಿದ ಹೆಣ್ಣುಮಕ್ಕಳು ಹೆಚ್ಚಿನ ಲೈಂಗಿಕ ದೌರ್ಜನ್ಯಕ್ಕೆ ಒಳಗಾಗುವ ಸಾಧ್ಯತೆಗಳಿರುತ್ತವೆ.

ಹಿಂಸೆಯ ಸಾಂಪ್ರದಾಯಿಕ ರೂಪಗಳು ಕಣ್ಮರೆಯಾಗುತ್ತಿದೆಯೆಂದು ಇದರರ್ಥವಲ್ಲ. ಇಂದಿನ ಹೊಸ ಸ್ವರೂಪದ ಹಿಂಸೆಯ ಜೊತೆಗೆ 'ಸತಿ' ಪದ್ಧತಿಯಂತಹ ಹಳೆಯ ಕ್ರೌರ್ಯದ ಪದ್ಧತಿಗಳು ಈಗಲೂ ಅಲ್ಲಲ್ಲಿ ಕಾಣಿಸಿಕೊಳ್ಳುತ್ತಿವೆ. 'ಮಾಟಗಾತಿ'ಯರೆಂದು ಹಣೆಪಟ್ಟಿ ಹಚ್ಚಿ ಹಿಂಸಿಸುವುದೂ ಆಗಾಗ ವರದಿಯಾಗುತ್ತಲೇ ಇದೆ. 'ವಿಧವೆ'ಯನ್ನು ಅವಳದಲ್ಲದ ಕಾರಣಕ್ಕಾಗಿ ಅನಾದರದಿಂದ ಕಾಣುವ ಮತ್ತು ಹಿಂಸಿಸುವ ಪ್ರವೃತ್ತಿ ಅಳಿಸಿಹೋಗಿಲ್ಲ. ಇವೆಲ್ಲಾ ಮುಖ್ಯವಾಗಿ ಆಸ್ತಿಗೆ ಸಂಬಂಧಪಟ್ಟ ವಿಷಯಗಳೇ ಆಗಿದ್ದು ಒಂಟಿ ಹೆಂಗಸಿನ ಹಣದ ಮೇಲೆ ಎಲ್ಲರ ಕಣ್ಣಿರುತ್ತದೆ. ಕಾರ್ಗಿಲ್ ಯುದ್ಧದ ವೀರ ಯೋಧನೊಬ್ಬನ ಹೆಂಡತಿಯು ಸರ್ಕಾರದಿಂದ ಹಣ ಪಡೆದಾಗ ಅದರ ಮೇಲೆ ಕಣ್ಣಿಟ್ಟ ಅವಳ ಅತ್ತೆ, ಮಾವಂದಿರು ಅವಳನ್ನು ಕೊಂದುಹಾಕಿದ್ದನ್ನು ಈ ಸಂದರ್ಭದಲ್ಲಿ ನೆನಪಿಸಿಕೊಳ್ಳಬಹುದು.

ಡಾ|| ಎನ್. ಗಾಯತ್ರಿ



ಚಿತ್ರ ಕೃಪೆ : ದಿ ವೀಕ್

ಗಂಡು ಮಕ್ಕಳಿಗೆ ಭಾರತೀಯ ಸಮಾಜದಲ್ಲಿರುವ ಪ್ರಾಮುಖ್ಯ ಹೆಣ್ಣು ಭ್ರೂಣಹತ್ಯೆಯನ್ನು ಪ್ರೋತ್ಸಾಹಿಸುವಂತೆ ಮಾಡಿದೆ. ತಮಿಳುನಾಡಿನಲ್ಲಿ ನಡೆದ ಅಧ್ಯಯನಗಳಿಂದ ಆ ರಾಜ್ಯದ ಕೆಲವು ಜನಸಮುದಾಯಗಳಲ್ಲಿ, ಉದಾಹರಣೆಗೆ ಉಸಿಲಂಪಟ್ಟಿಯಲ್ಲಿ, ಹೆಣ್ಣು ಮಕ್ಕಳನ್ನು ಹುಟ್ಟಿದ ತಕ್ಷಣ ಸಾಯಿಸುವ ಪದ್ಧತಿಯಿದೆಯೆಂದು ಗೊತ್ತಾಗಿದೆ. ದೇಶದ ಇನ್ನುಳಿದ ಭಾಗಗಳಲ್ಲೂ, ವಿಶೇಷತಃ ಬಿಹಾರ, ರಾಜಸ್ತಾನ, ಹರಿಯಾಣ ಮತ್ತು ಪಂಜಾಬ್‌ಗಳಲ್ಲಿ, ಹೆಣ್ಣು ಭ್ರೂಣವನ್ನು ಮೊಳಕೆಯಲ್ಲೇ ಚಿವುಟುವ ಪದ್ಧತಿ ಜಾರಿಯಲ್ಲಿದೆ. ಇಂದಿನ ಗ್ರಾಹಕ ಸಂಸ್ಕೃತಿಯ ಭರಾಟೆಯಲ್ಲಿ ಎಲ್ಲ ಬೆಳವಣಿಗೆಗಳೂ ಲಾಭ ನಷ್ಟಗಳ ತಕ್ಕಡಿಯಲ್ಲಿಯೇ ತೂಗಲ್ಪಡುವುದರಿಂದ ಹೆಣ್ಣು ಮಗು ನಷ್ಟದ ಬಾಬತ್ತಾಗಿ ಪರಿಣಮಿಸಿದ್ದಾಳೆ.

ಹೆಣ್ಣನ್ನು ನಗ್ನಗೊಳಿಸಿ, ಅವಮಾನಗೊಳಿಸಿ, ಸಾರ್ವಜನಿಕವಾಗಿ ಪ್ರದರ್ಶಿಸುವಂತಹ ಕ್ರೂರ ಕೃತ್ಯಗಳು ಬಹುಶಃ ಕಳೆದ ಒಂದು ದಶಕದಲ್ಲಿ ನಡೆದಷ್ಟು ಹಿಂದೆಂದೂ ನಡೆದಿಲ್ಲ. ಹೆಣ್ಣಿನ ಮೇಲಿನ ಸಿಟ್ಟು ಮತ್ತು ಪ್ರತೀಕಾರದ ಭಾವನೆ ಈ ಕೃತ್ಯದ ಹಿಂದಿರಬಹುದಾದರೂ, ಎಲ್ಲಕ್ಕಿಂತ ಹೆಚ್ಚಾಗಿ ಗಂಡಸಿನ ಮರ್ಯಾದೆಯನ್ನು ಕೆಣಕುವ ಹಾಗೂ ಅವನಿಗೆ ಬುದ್ಧಿಕಲಿಸುವ ನೆಪದಲ್ಲಿ ಅವನ ಕುಟುಂಬದ ಹೆಂಗಸರನ್ನು ಅಪಮಾನಗೊಳಿಸುವ ಘಟನೆಗಳು ಹಲವಾರು ನಡೆಯುತ್ತಿವೆ.

ಅಧಿಕಾರದಲ್ಲಿರುವವರಿಂದ ಮತ್ತು ಹಣವಂತರಿಂದ ಬಡ ಹೆಣ್ಣುಮಕ್ಕಳ ಮೇಲೆ ನಡೆಯುತ್ತಿರುವ ಅತ್ಯಾಚಾರದ ಪ್ರಕರಣಗಳು ದಿನದಿಂದ ದಿನಕ್ಕೆ ಹೆಚ್ಚುತ್ತಲೇ ಇವೆ. ಗ್ರಾಮಾಂತರ ಪ್ರದೇಶಗಳಲ್ಲಿ ಭೂಮಾಲೀಕರು ಕೂಲಿಕಾರ ಹೆಣ್ಣುಮಕ್ಕಳ ಮೇಲೆ ನಡೆಸುವ ದೌರ್ಜನ್ಯ, ಅರಣ್ಯ ಸಿಬ್ಬಂದಿಗಳು ಆದಿವಾಸಿ ಮಹಿಳೆಯರ ಮೇಲೆ ನಡೆಸುವ ದೌರ್ಜನ್ಯ ಹಾಗೂ ಸೈನಿಕ ಸಿಬ್ಬಂದಿಗಳು, ಆರಕ್ಷಕರು ಗಡಿಭಾಗಗಳಲ್ಲಿ ನಡೆಸುವ ಮಹಿಳೆಯರ ಮೇಲಿನ ದೌರ್ಜನ್ಯ ಹೆಚ್ಚುತ್ತಲೇ ಇವೆ. ಈ ಸಂಬಂಧವಾಗಿ ಅತ್ಯಾಚಾರದ ಕಾನೂನುಗಳು ಇನ್ನೂ ಹೆಚ್ಚು ಮಾನವೀಯವಾಗಿ ಮತ್ತು ಪರಿಣಾಮಕಾರಿಯಾಗಿ ಬದಲಾಗಬೇಕಿದೆ.

ಪೊಲೀಸ್ ಠಾಣೆಗಳಲ್ಲಿ ಹಾಗೂ ಪೊಲೀಸರಿಂದ ನಡೆಯುವ ಅತ್ಯಾಚಾರ ಪ್ರಕರಣಗಳು ಯಾವುದೇ ಸಮಾಜದ ಘನತೆಗೆ ಕಪ್ಪು ಚುಕ್ಕೆಯಂತೆ. ಸಮಾಜದ ರಕ್ಷಕರೇ ಹೆಣ್ಣಿನ ಮಾನ ಕಾಯುವ ಬದಲು ದುಶ್ಯಾಸನರಂತೆ ನಿಂತಾಗ ಹೆಣ್ಣುಗಳ ನೋವು ಯಾರಿಗೆ ಕೇಳಬೇಕು? ಮಾಯಾತ್ಯಾಗಿಯ ಪ್ರಕರಣದಿಂದ ಹಿಡಿದು ಇತ್ತೀಚಿನ ವೀರಪ್ಪನ್‌ಗೆ ನೆರವಾದರೆಂಬ ನೆಪದಲ್ಲಿ ಅತ್ಯಾಚಾರಕ್ಕೊಳಗಾದ ಆದಿವಾಸಿ ಹೆಣ್ಣುಮಕ್ಕಳ ದುಃಸ್ಥಿತಿ ಒಟ್ಟಾರೆ ಹೆಣ್ಣಿನ ಅಸಹಾಯಕ ಸ್ಥಿತಿಯನ್ನು ಬಿಂಬಿಸುವುದಷ್ಟೇ ಅಲ್ಲ, ಇಂತಹದೊಂದು ಸನ್ನಿವೇಶವನ್ನು ಲಾಭವಾಗಿಸಿಕೊಂಡು ರಾಕ್ಷಸರಂತೆ ವರ್ತಿಸುವ ಪೊಲೀಸರ ನೀಚಸ್ವರೂಪವನ್ನೂ ಬಿಂಬಿಸುತ್ತದೆ. ಮಹಿಳಾ ಪೊಲೀಸರನ್ನು ಮತ್ತು ಮಹಿಳಾ ಪೊಲೀಸ್ ಠಾಣೆಗಳನ್ನು ಸರ್ಕಾರವು ವ್ಯವಸ್ಥೆಗೊಳಿಸಿದ್ದರೂ ಈ ಸೌಕರ್ಯ ಸಾಕಷ್ಟು ಯಶಸ್ವಿಯಾಗಿ ಕಾರ್ಯ ನಿರ್ವಹಿಸುತ್ತಿಲ್ಲ.

ದುಡಿಯುವ ಕ್ಷೇತ್ರಗಳಲ್ಲಿ ಹೆಣ್ಣಿನ ಮೇಲೆ ನಡೆಯುವ ದೌರ್ಜನ್ಯಕ್ಕೆ ಕೊನೆ ಮೊದಲಿಲ್ಲ. ರೂಪನ್ ಬಜಾಜ್‌ನಂತಹ ಪೊಲೀಸ್ ಅಧಿಕಾರಿಣಿಯಿಂದ ಹಿಡಿದು ಭಾಂವ್ರಿದೇವಿಯಂತಹ ಸ್ವಯಂಸೇವಕಿಯವರೆಗೂ ದುಡಿಮೆಯ ಕಾರ್ಯಶೈಲಿಯಿಂದಾಗಿಯೇ ದೌರ್ಜನ್ಯಕ್ಕೊಳಗಾಗಬೇಕಾದ ಪರಿಸ್ಥಿತಿ ನಮ್ಮಲ್ಲಿದೆ. ೧೯೯೭ರಲ್ಲಿ ಉಚ್ಚ ನ್ಯಾಯಾಲಯವು ದುಡಿಯುವ ಮಹಿಳೆಗೆ ಸಂಬಂಧಪಟ್ಟಂತೆ ನೀಡಿರುವ ನಿರ್ದೇಶನಗಳು ಹೆಣ್ಣಿಗೆ ದೊರಕಿರುವ ಒಂದು ಚಿಕ್ಕ ಸಮಾಧಾನವಾದರೂ ಖಾಸಗಿ ವಲಯಗಳು ಈ ತೀರ್ಪನ್ನು ಸಂಪೂರ್ಣ ನಿರ್ಲಕ್ಷಿಸಿವೆ.

ಎಲ್ಲ ಪಿತೃಪ್ರಧಾನ ಸಮಾಜಗಳಲ್ಲೂ ಕುಟುಂಬದ ರಚನೆಯಲ್ಲಿ ಹೆಣ್ಣಿನ ಹಕ್ಕುಗಳ ದಮನಮಾಡಲು ಕೌಟುಂಬಿಕ ಹಿಂಸೆಯನ್ನು ಪ್ರಬಲ ಅಸ್ತ್ರವಾಗಿ ಬಳಸಲಾಗುತ್ತಿದೆ. ಹೆಣ್ಣಿನ ನೋವು, ಹಿಂಸೆಗಳನ್ನು ತ್ಯಾಗವೆಂದು ಅವರನ್ನು ಅಮರತ್ವಕ್ಕೇರಿಸುವ ಸಾಂಪ್ರದಾಯಿಕ ಚಿಂತನೆಗೇನೂ ಕಡಿಮೆಯಿಲ್ಲ. ಚರಿತ್ರೆಯ ವಿವಿಧ ಘಟ್ಟಗಳಲ್ಲಿ ಮತ್ತು ವಿವಿಧ ಧರ್ಮಗಳ ಆಚರಣೆಯ ಸಂಪ್ರದಾಯಗಳಲ್ಲಿ ಲಿಂಗಭೇದ ನೀತಿಯಿಂದಾಗಿ ಬದುಕುವ ಹಕ್ಕನ್ನೂ ಕಳೆದುಕೊಂಡು ಕೌಟುಂಬಿಕ ಹಿಂಸೆಗೆ ಒಳಗಾಗುವ ಹೆಣ್ಣುಗಳು ಎಲ್ಲ ದೇಶಗಳಲ್ಲೂ ಕಾಣಸಿಗುತ್ತಾರೆ.

ಕುಟುಂಬದೊಳಗಿನ ಹೆಣ್ಣಿನ ಸ್ಥಾನಮಾನವು ಪ್ರತ್ಯೇಕ ಸಂಗತಿಯಲ್ಲ. ಭಾರತೀಯ ಸಮಾಜದಲ್ಲಿ ಅಪಮೌಲ್ಯಕ್ಕೊಳಗಾದವಳೆಂದರೆ ಮುಖ್ಯವಾಗಿ ಹೆಣ್ಣು. ದೊಡ್ಡ ದೊಡ್ಡ ವ್ಯಾಪಾರೀ ಘಟಕಗಳ ಹಿತಾಸಕ್ತಿಗಾಗಿ ಪೋಷಿಸಲ್ಪಡುತ್ತಿರುವ ಗ್ರಾಹಕ ಸಂಸ್ಕೃತಿಯು ಹೆಣ್ಣಿನ ಸ್ಥಾನಮಾನವನ್ನು ಕೆಳಗೇ ಇಟ್ಟಿದೆ. ಹಾಗೆಯೇ ಅತ್ಯಂತ ಶಕ್ತಿಯುತವಾದ ಸಮೂಹ ಮಾಧ್ಯಮಗಳು ಹೆಣ್ಣಿನ ಚಿತ್ರವನ್ನು ಕೀಳು ಸ್ತರದಲ್ಲೇ ಇಡಲು ಪ್ರಯತ್ನಿಸುತ್ತವೆ. ಇವೆಲ್ಲದರಿಂದ ಹೆಚ್ಚುತ್ತಿರುವ ವರದಕ್ಷಿಣೆ ಸಾವುಗಳು, ಹೆಂಡತಿಯನ್ನು ಹೊಡೆಯುವುದು, ಅವಳನ್ನು ಬಿಡುವುದು, ಭ್ರೂಣಹತ್ಯೆ, ಬಹುಪತ್ನಿತ್ವ ಮುಂತಾದ ಸಮಸ್ಯೆಗಳು ಇಂತಹ ಸಾಮಾಜಿಕ ರಚನೆಯಿಂದಲೇ ಉದ್ಭವಿಸಿದಂತಹವು. ಈ ಕೌಟುಂಬಿಕ ಸಮಸ್ಯೆಗಳನ್ನು ರಾಜ್ಯಯಂತ್ರ ಹೇಗೆ ನೋಡುತ್ತದೆ ಎಂಬುದು ಕೂಡ ಸಮಸ್ಯೆಯ ಗಂಭೀರತೆಯನ್ನು ತೋರಿಸುತ್ತದೆ. ಅಧಿಕಾರದ ವಿವಿಧ ಅಂಗಗಳಾದ ಪೊಲೀಸ್, ನ್ಯಾಯಾಲಯ ಹಾಗೂ ಸರಕಾರೀ ನೀತಿ ನಿರೂಪಕರು 'ಮಹಿಳಾ ಪ್ರಶ್ನೆ' ಯನ್ನು ನಿರ್ವಚಿಸುವ ರೀತಿಯಲ್ಲೇ ಹೆಣ್ಣಿನ ಸಮಸ್ಯೆಗೆ ಸಮಾಜದ ಧೋರಣೆಯೇನೆಂಬುದು ಅರ್ಥವಾಗುತ್ತದೆ. ಎಪ್ಪತ್ತರ ದಶಕದ ಕೊನೆಯ ಭಾಗದಲ್ಲಿ ದೇಶಾದ್ಯಂತ ನಡೆದ ವ್ಯಾಪಕ ಮಹಿಳಾ ಚಳುವಳಿಯಿಂದ ಕೌಟುಂಬಿಕ ಹಿಂಸೆಯು ಸಾರ್ವಜನಿಕ ವೇದಿಕೆಯನ್ನು ಪಡೆಯಿತು. ಆಗ ಪ್ರಬಲವಾದ ವರದಕ್ಷಿಣೆ ವಿರೋಧಿ ಚಳುವಳಿಯು ಕ್ರಿಮಿನಲ್ ಪ್ರೊಸೀಜರ್ ಕೋಡ್‌ಗೆ ತಿದ್ದುಪಡಿಯನ್ನು ತರುವಂತೆ ಮಾಡಲು ಸಮರ್ಥವಾಯಿತು. ಮಹಿಳಾ ಸಂಘಟನೆಗಳ ಒತ್ತಾಯಕ್ಕೆ ಮಣಿದು ೪೯೮ -ಎ, ೩೦೪-ಬಿ ಮತ್ತು ೪೦೬ನೇ ಸೆಕ್ಷನ್‌ಗಳನ್ನು ಸೇರಿಸಲಾಯಿತು. ಇಷ್ಟಾದರೂ ವರದಕ್ಷಿಣೆ ಪ್ರಕರಣಗಳನ್ನು ದಾಖಲಿಸುವಂತೆ ಮಾಡುವುದು ಅಷ್ಟು ಸುಲಭದ ವಿಷಯವಲ್ಲ. ಈ ಸಮಸ್ಯೆಯನ್ನು ನಿವಾರಿಸಲು ಮಹಿಳಾ ಸೆಲ್‌ಗಳು, ಮಹಿಳಾ ಪೊಲೀಸ್ ಠಾಣೆಗಳು, ಕುಟುಂಬ ನ್ಯಾಯಾಲಯಗಳು ರಾಜ್ಯಗಳ ಹಲವಾರು ಕಡೆಗಳಲ್ಲಿ ಸ್ಥಾಪನೆಗೊಂಡವು. ಇಷ್ಟಾದರೂ ಇವುಗಳ ಅನುಭವವು ಅಷ್ಟೇನೂ ಹಿತಕರವಾಗಿಲ್ಲ. ಮಹಿಳಾ ಸಂಘಟನೆಗಳು ಈ ಸಾಮಾಜಿಕ ಪಿಡುಗುಗಳನ್ನು ನಿವಾರಿಸುವುದರ ಜೊತೆಗೆ ಸಮಾಜದಲ್ಲಿ ಹೆಣ್ಣಿನ ಸ್ಥಾನಮಾನಗಳಲ್ಲಿ ಸಮಾನತೆಯನ್ನು ತರಬೇಕೆನ್ನುವ ಅಂಶದತ್ತಲೂ ಒತ್ತುಕೊಡುತ್ತವೆ.

ಡಾ|| ಎನ್. ಗಾಯತ್ರಿ
ನಂ. ೧೦೮, ೧೪ 'ಸ್ಕೈಲೈನ್ ಸುರಭಿ', ವಿದ್ಯಾಪೀಠ ರಸ್ತೆ
ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫.

# ಭಾರತದ ತಟರಕ್ಷಕ ಪಡೆಯ ಮೊದಲ ಮಹಿಳಾ ವಿಮಾನ ಚಾಲಕರು

ನೀವೇನಾದರೂ 'ಏರೋ ಇಂಡಿಯಾ ೨೦೦೧', ವಾಯು ಪ್ರದರ್ಶನಕ್ಕೆ ಹೋಗಿದ್ದರೆ, ಶುಭ್ರ ಬಿಳಿಯ ಸಮವಸ್ತ್ರದಲ್ಲಿ 'ತಟರಕ್ಷಕ ಪಡೆ'ಯ ಸ್ಟಾಲ್‌ನಲ್ಲಿ ನಿಂತ ಈ ಇಬ್ಬರು ಮಹಿಳೆಯರು ಖಂಡಿತಾ ನಿಮ್ಮ ಗಮನ ಸೆಳೆದಿರುತ್ತಾರೆ. ಇವರೇ ತಟರಕ್ಷಕ ಪಡೆಗೆ ಸೇರ್ಪಡೆಯಾದ ಭಾರತದ ಮೊಟ್ಟಮೊದಲ ಮಹಿಳಾ ವಿಮಾನ ಚಾಲಕರು : ಅಸಿಸ್ಟೆಂಟ್ ಕಮಾಂಡೆಂಟ್ ಮೊನಿಕಾ ಸೇಠ್ ಮತ್ತು ಅಸಿಸ್ಟೆಂಟ್ ಕಮಾಂಡೆಂಟ್ ಕನಕ್ ಚತುರ್ವೇದಿ.

ಇವರ ಬಿಳಿಯ ಸಮವಸ್ತ್ರವನ್ನು ಕಂಡ ಬಹಳಷ್ಟು ಜನ, ಇವರು ನೌಕಾಪಡೆಗೆ ಸೇರಿದವರೆಂದು ತಪ್ಪಾಗಿ ಭಾವಿಸುತ್ತಿದ್ದರು. ಆದರೆ ತಟರಕ್ಷಕ ಪಡೆಗೆ ತನ್ನದೇ ಆದ ನಿರ್ದಿಷ್ಟ ಕರ್ತವ್ಯಗಳಿವೆ. ನಮ್ಮ ಸಮುದ್ರತೀರಗಳನ್ನು ರಕ್ಷಿಸುವ, ಮೀನುಗಾರರಿಗೆ ರಕ್ಷಣೆ ನೀಡುವ, ಸಮುದ್ರ ಮಾಲಿನ್ಯವನ್ನು ನಿಯಂತ್ರಿಸುವ, ಕಳ್ಳ ಸಾಗಾಣಿಕೆ ವಿರುದ್ಧ ಕೆಲಸ ಮಾಡುವ, ಸಮುದ್ರದಲ್ಲಿ ಅಪಾಯಕ್ಕೆ ಸಿಕ್ಕಿಬಿದ್ದವರನ್ನು ಹುಡುಕಿ ಕಾಪಾಡುವ - ಈ ಎಲ್ಲ ಕರ್ತವ್ಯಗಳು ತಟರಕ್ಷಕ ಪಡೆಗೆ ಸೇರಿದೆ. ಯಾವಾಗಬೇಕಾದರೂ ರಕ್ಷಣೆಯ ಅಗತ್ಯ ಬೀಳಬಹುದು, ತುರ್ತು ಕರೆಗೆ ಓಗೊಟ್ಟು ತಟ್ಟನೆ ಧಾವಿಸಬೇಕಾಗಬಹುದು. ಇಂತಹ ವಿಶಿಷ್ಟ ವೃತ್ತಿರಂಗವನ್ನು ಆರಿಸಿಕೊಂಡ ಮೊನಿಕಾ ಮತ್ತು ಕನಕ್ ಅವರನ್ನು ಅಭಿನಂದಿಸಿ, ಸಂದರ್ಶನ ಪಡೆಯುವ ಅವಕಾಶ ದೊರೆತದ್ದು ಖುಷಿಯೆನಿಸಿತು.

ರೈಟ್ ಸಹೋದರರು ವಿಮಾನ ಹಾರಿಸಿದ ದಶಕದಲ್ಲಿಯೇ ಮಹಿಳೆ ವಿಮಾನ ಹಾರಿಸಿದ್ದರೂ, ವೈಮಾನಿಕ ರಂಗದಲ್ಲಿ ಮಹಿಳೆಗೆ ತೆರೆದ ಬಾಗಿಲ ಸ್ವಾಗತವಿರಲಿಲ್ಲ. ೧೯೩೨ರಷ್ಟು ಹಿಂದೆಯೇ, ಭಾರತದಲ್ಲಿ ಊರ್ಮಿಳಾ ಕೆ. ಪಾರೇಕ್ ಎಂಬ ಮಹಿಳೆ 'ವಿಮಾನ ಚಾಲಕರ ಲೈಸೆನ್ಸ್' ಪಡೆದಿದ್ದರು. ೧೯೪೭ರಲ್ಲಿ ಪ್ರೇಮ್ ಮಾಥುರ್ 'ವಾಣಿಜ್ಯ ವಿಮಾನ ಚಾಲಕರ ಲೈಸೆನ್ಸ್' (ಕಮರ್ಷಿಯಲ್ ಪೈಲೆಟ್ಸ್ ಲೈಸೆನ್ಸ್) ಪಡೆದ ಭಾರತದ ಮೊಟ್ಟಮೊದಲ ಮಹಿಳೆಯಾಗಿದ್ದರು. ಹೀಗಿದ್ದೂ ಮಹಿಳೆ ವಾಯುಸೇನೆಗೆ ಪ್ರವೇಶ ಪಡೆಯಲು, ದೇಶಕ್ಕೆ ಸ್ವಾತಂತ್ರ್ಯ ಬಂದ ಮೇಲೆ ೪೫ ವರ್ಷಗಳ ಕಾಲ ಕಾಯಬೇಕಾಯಿತು! ೧೯೯೨ರಲ್ಲಿ ಸಶಸ್ತ್ರ ಸೇನೆ ಮಹಿಳೆಯರಿಗೆ ಬಾಗಿಲು ತೆರೆದಾಗ, ಅಖಿಲ ಭಾರತದ ಮಟ್ಟದಲ್ಲಿ ಪುರುಷರೊಡನೆ ಸ್ಪರ್ಧಿಸಿ ಮಹಿಳೆಯರು ವಾಯುಸೇನೆಗೆ ಆಯ್ಕೆಯಾದರು. ಆದರೆ ಮಹಿಳಾ ವಿಮಾನ ಚಾಲಕರು ತಟರಕ್ಷಕ ಪಡೆಗೆ ಸೇರಿದ್ದು ೧೯೯೮ರಷ್ಟು ಇತ್ತೀಚೆಗೆ. ಕಾರಣ ತಟರಕ್ಷಕ ಪಡೆ, ಈ ಮಹಿಳೆಯರಿಗೆ ಮೊದಲೇ 'ವಾಣಿಜ್ಯ ವಿಮಾನ ಚಾಲಕರ ಲೈಸೆನ್ಸ್' ಇರಬೇಕೆಂಬ ನಿಯಮವನ್ನು ಹೇರಿತ್ತು. ವಿಮಾನ ಹಾರಾಟ ಕಲಿಯುವುದು ಸುಲಭವಲ್ಲ. ವಿಮಾನ ಹಾರಾಟ ಬಲು ದುಬಾರಿಯ ಹವ್ಯಾಸ. ವಾಣಿಜ್ಯ ವಿಮಾನ ಚಾಲಕರ ಲೈಸೆನ್ಸ್ ಪಡೆಯಲು ನಿಮಗೆ ಐದು ಲಕ್ಷವಾದರೂ ಬೇಕಾಗುತ್ತದೆ. ಭಾರತದಂತಹ ದೇಶದಲ್ಲಿ ಹೆಣ್ಣು ಮಕ್ಕಳ ಮದುವೆ-ವರದಕ್ಷಿಣೆಗೆ ಲಕ್ಷ ಸುರಿಯಲು ಸಿದ್ಧವಿರುವ ಮಾತಾಪಿತೃಗಳೇ ಹೆಚ್ಚು. ಆಕೆಯ ಓದು, ವಿದ್ಯಾಭ್ಯಾಸ, ಸಾಹಸದ ಹವ್ಯಾಸಕ್ಕೆ ಆರ್ಥಿಕ ಬೆಂಬಲ ನೀಡುವ ತಾಯಿ ತಂದೆಯರು ಅಪರೂಪ. ತಟರಕ್ಷಕ ಪಡೆಗೆ ಸೇರಿದ ಈ ಇಬ್ಬರು ಮಹಿಳೆಯರು ಅಂತಹ ಅಪರೂಪದ ಕುಟುಂಬದಲ್ಲಿ ಜನಿಸಿದವರು.

ಮೊನಿಕಾ ಸೇಠ್ ಜನವರಿ ೧೯೯೮ರಲ್ಲಿ ಮತ್ತು ಕನಕ್ ಅದೇ ವರ್ಷ ಜುಲೈ ತಿಂಗಳಿನಲ್ಲಿ ತಟರಕ್ಷಕ ಪಡೆಯನ್ನು ಸೇರಿದರು. ಪುರುಷ ಪ್ರಧಾನ ರಂಗದಲ್ಲಿ ಮೊದಲಿಗರಾಗಿ ಕಾಲಿಟ್ಟ ತಮ್ಮ ಹೆಗಲ ಮೇಲೆ ಹೆಚ್ಚಿನ ಜವಾಬ್ದಾರಿಯಿದೆ ಎಂಬ ಅರಿವು ಇವರಿಬ್ಬರನ್ನೂ ಸದಾಕಾಲ ಜಾಗೃತಗೊಳಿಸಿದೆ. ತಮ್ಮ ಕರ್ತವ್ಯವನ್ನು ಸಮರ್ಥವಾಗಿ ನಿರ್ವಹಿಸಲು ಬೆಂಗಾವಲಾಗಿದೆ. ಈ ಇಬ್ಬರು ಮಹಿಳೆಯರು ಈಗಷ್ಟೇ ಗುಜರಾತಿನ ಭೂಕಂಪ ಪೀಡಿತ ಸ್ಥಳಗಳಿಗೆ, ಹಗಲು ರಾತ್ರಿ ಎನ್ನದೆ, ಔಷಧಿ, ಆಹಾರ, ಬಟ್ಟೆ ಬರೆ, ಸಾಮಾನು ಸರಂಜಾಮು, ವೈದ್ಯಕೀಯ ನೆರವನ್ನು, ಮುಂಬಯಿಯಿಂದ ಸತತವಾಗಿ ಹೊತ್ತೊಯ್ದು ತಮ್ಮ ಕರ್ತವ್ಯವನ್ನು ನಿಭಾಯಿಸಿ ಹಿಂತಿರುಗಿದ್ದರು.




'ನಿಮಗೆ ವಿಮಾನ ಹಾರಾಟಕ್ಕೆ ಸ್ಫೂರ್ತಿ ನೀಡಿದವರಾರು?' ಎಂದು ಕೇಳಿದಾಗ, ಇಬ್ಬರಿಂದಲೂ ಒಂದೇ ಉತ್ತರ ಕೇಳಿಬಂತು. 'ಏಕತಾ ಪ್ರಶಸ್ತಿ' ಪಡೆದ, ಪ್ರಪಂಚದ ಅತಿ ಚಿಕ್ಕ ವಯಸ್ಸಿನ ಬೋಯಿಂಗ್ ವಿಮಾನದ ಕಮಾಂಡರ್ ಆದ, ಭಾರತದ ಮೊದಲ ಮಹಿಳಾ ಚೀಫ್ ಪೈಲೆಟ್ ಆದ ಕ್ಯಾಪ್ಟನ್ ನಿವೇದಿತಾ ಭಾಸಿನ್ ಈ ಎಳೆಯ ಹುಡುಗಿಯರಿಗೆ ಸ್ಫೂರ್ತಿ ನೀಡಿ ಮಾದರಿಯಾದವರು. ಕುಟುಂಬದ ಸಹಕಾರ, ಇವರ ಹಾರಾಟದ ಕನಸು ನನಸಾಗುವಂತೆ ಮಾಡಿತು.

ಮೊನಿಕಾ ೧೯೭೬ರಲ್ಲಿ ಪಂಜಾಬಿನಲ್ಲಿ ಜನಿಸಿದರು. ಅವರ ತಂದೆಗೆ ಹಾರಾಟ ಹವ್ಯಾಸವಾಗಿತ್ತು. ನಾಲ್ಕು ವರ್ಷದ ವಯಸ್ಸಿನಲ್ಲಿ ಮೊನಿಕಾ ತಂದೆಯೊಂದಿಗೆ ಮೊಟ್ಟಮೊದಲಿಗೆ ವಿಮಾನದಲ್ಲಿ ಹಾರಿದ್ದರು. ಅದರಾಚೆ ಹೆಚ್ಚು ಸಮಯ ಹಿಡಿಸಿರಲಿಲ್ಲ, ನೀಲಾಕಾಶದ ಮೋಹದ ಬಲೆಗೆ ಬೀಳಲು. ಮೊನಿಕಾ ಹನ್ನೆರಡನೇ ತರಗತಿಯಲ್ಲಿ ಉತ್ತೀರ್ಣರಾದ ಕೂಡಲೆ, 'ಅಮೃತಸರ್ ಏವಿಯೇಷನ್ ಕ್ಲಬ್' ಸೇರಿದರು. ಆ ಸಮಯದಲ್ಲಿ ಆ ಕ್ಲಬ್‌ನಲ್ಲಿದ್ದ ಏಕೈಕ ಮಹಿಳೆ ತಾನು ಎಂಬುದೇನೂ ಅವರ ಉತ್ಕಟ ಹಾರಾಟದ ಆಸೆಯನ್ನು ತಗ್ಗಿಸಲಿಲ್ಲ. ಪುಷ್ಪಕ್ ವಿಮಾನದಲ್ಲಿ ಹೊರಟ ಇವರ ಮೊಟ್ಟಮೊದಲ 'ಏಕಾಂಗಿ ಹಾರಾಟ' ರೋಚಕ ಅನುಭವವಾಯಿತು. ಇಲ್ಲಿ ಹಾರಾಟ ಕಲಿತ ಮೊನಿಕಾ, 'ವಾಣಿಜ್ಯ ವಿಮಾನ ಚಾಲಕರ ಲೈಸೆನ್ಸ್' ಪಡೆದರು. ಅದೇ ಸಮಯಕ್ಕೆ ತಟರಕ್ಷಕ ಪಡೆಯಲ್ಲಿ ಮಹಿಳೆಯರಿಗೆ ತೆರೆದ ಅವಕಾಶ ಇವರನ್ನು ಆಕರ್ಷಿಸಿತು. ಕ್ಲಿಷ್ಟವಾದ 'ಸರ್ವಿಸ್ ಸೆಲೆಕ್ಷನ್ ಬೋರ್ಡ್' ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿ ಜನವರಿ ೧೯೯೮ರಲ್ಲಿ ತಟರಕ್ಷಕ ಪಡೆಗೆ ಸೇರಿದರು. ಮೊದಲೇ ವಿಮಾನ ಹಾರಾಟವನ್ನು ಕಲಿತ ಇವರಿಗೆ, ಡಾರ್ನಿಯರ್ ವಿಮಾನಗಳನ್ನು ಹಾರಿಸುವ ಹೆಚ್ಚಿನ ತರಪೇತು ನೀಡಲಾಯಿತು. ಇಪ್ಪತ್ತೈದು ವರ್ಷದ ಮೊನಿಕಾ ಆದಾಗಲೆ ೬೦೦ ಗಂಟೆಗಳ ಹಾರಾಟದ ಅನುಭವವನ್ನು ಗಳಿಸಿದ್ದಾರೆ. ವಿವಾಹ ಇವರ ಮನಸ್ಸಿನಲ್ಲಿದ್ದರೂ, ತಮ್ಮ ಹುದ್ದೆಯನ್ನು, ತಾವು ಹಿಡಿದು ಹೊರಟ ಹಾದಿಯನ್ನು ಅರ್ಥ ಮಾಡಿಕೊಳ್ಳುವಂತಹ ವ್ಯಕ್ತಿಯಾಗಿರಬೇಕೆಂದು ಒತ್ತಿ ಹೇಳುತ್ತಾರೆ.

ಕನಕ್ ಉತ್ತರ ಪ್ರದೇಶದ ಹುಡುಗಿ. ಈಕೆ ೧೯೭೭ರಲ್ಲಿ ಆಗ್ರಾದಲ್ಲಿ ಜನಿಸಿದರು. ಎಲ್ಲರೂ ಸೇರ ಹೊರಟ ಮೆಡಿಕಲ್, ಇಂಜಿನಿಯರಿಂಗ್ ರಂಗ ಈಕೆಯನ್ನು ಆಕರ್ಷಿಸಲಿಲ್ಲ. ಹೊಸದೇನನ್ನೋ ಮಾಡಬೇಕೆಂಬ ತುಡಿತ ಕನಕ್‌ರನ್ನು ವಿಮಾನ ಹಾರಾಟಕ್ಕೆ ಸೆಳೆಯಿತು. ಟೆಕ್ಸ್‌ಟೈಲ್ ಇಂಜಿನಿಯರ್ ಆದ ತಂದೆ, ಮಗಳು ಮಹಿಳೆಯರಿಗೆ ಸೂಕ್ತವಾದ ಮೆಡಿಕಲ್ ರಂಗಕ್ಕೆ ಸೇರಲಿ ಎಂದು ಇಚ್ಛಿಸಿದರು. ಆದರೆ ಕನಕ್ ವಿಮಾನ ಹಾರಿಸಬಯಸಿದರು. ತಾಯಿ ಮಗಳ ಬೆಂಬಲಕ್ಕೆ ನಿಂತು, ತಂದೆಯನ್ನು ಒಪ್ಪಿಸಿದರು. ಹನ್ನೆರಡನೇ ತರಗತಿಯನ್ನು ಮುಗಿಸಿದ ಕನಕ್ ಇಂದೋರ್‌ನ 'ಉಡಾನ್ ಇನ್‌ಸ್ಟಿಟ್ಯೂಟ್' ಸೇರಿ ವಾಣಿಜ್ಯ ವಿಮಾನ ಚಾಲಕರ ಲೈಸೆನ್ಸ್ ಪಡೆದರು. ಜುಲೈ ೧೯೯೮ರಲ್ಲಿ ತಟರಕ್ಷಕ ಪಡೆಯನ್ನು ಸೇರಿದರು. ಕನಕ್ ಕಳೆದ ವರ್ಷ ತಟರಕ್ಷಕ ಪಡೆಯಲ್ಲಿಯೇ ಕೆಲಸ ಮಾಡುತ್ತಿರುವ ಅಸಿಸ್ಟೆಂಟ್ ಕಮಾಂಡೆಂಟ್ ಮನೋಜ್ ಜೋಶಿ ಅವರನ್ನು ವಿವಾಹವಾಗಿದ್ದಾರೆ. ಮದುವೆ, ಸಂಸಾರ ಇವರಿಗೆ ಹೊರೆಯಾಗಿಲ್ಲ. ಪತಿ ಮತ್ತು ಕುಟುಂಬದ ಸಹಕಾರ ಇವರಿಗೆ ತಾವು ಹಿಡಿದು ಹೊರಟ ಹುದ್ದೆಯಲ್ಲಿ ಪೂರ್ಣ ರೀತಿಯಲ್ಲಿ ತೊಡಗುವುದನ್ನು ಸಾಧ್ಯವಾಗಿಸಿದೆ.

ಹೊತ್ತಲ್ಲದ ಹೊತ್ತಿನಲ್ಲಿ ಎದ್ದು ಓಡಬೇಕಾದ ತಮ್ಮ ಹುದ್ದೆಯ ಕರೆಗೆ ಓಗೊಡುವ ಈ ಮಹಿಳೆಯರು ತಮ್ಮ ವೃತ್ತಿ ಜೀವನಕ್ಕಾಗಿ ವಿವಾಹ, ಕುಟುಂಬ ಜೀವನವನ್ನು ತ್ಯಜಿಸಿದವರಲ್ಲ, ವಿವಾಹಕ್ಕಾಗಿ ತಮ್ಮ ಸಾಧನೆಯ ವೃತ್ತಿ ರಂಗವನ್ನು ಬಿಡುವವರೂ ಅಲ್ಲ. 'ಎಲ್ಲವೂ ಸಾಧ್ಯ' ಎಂದು ಸಾರುವ ತಟರಕ್ಷಕ ಪಡೆಯ ಈ ಮೊದಲಿಗರು, ಮುಗಿಲು ಮುಟ್ಟುವ ದಿಟ್ಟೆಯರು, ನಮ್ಮ ಎಳೆಯ ಹುಡುಗಿಯರಿಗೆ ಮಾದರಿಯಾಗಲಿ.

ನೇಮಿಚಂದ್ರ,
ನಂ. ೪೦೧, 'ವಿಜಯ ಟವರ್ಸ್', ೨ನೇ ಮೈನ್, ಆರ್. ಪಿ. ಸಿ. ಲೇ ಔಟ್, ಬೆಂಗಳೂರು - ೫೬೦ ೦೪೦

# ಮರಾಠಿಯಲ್ಲಿ ಮಹಿಳಾ ಆತ್ಮಕಥೆಗಳು

## ನಿವೇದನೆಯ ಹೊಸ ಅಲೆ

**ಕ**ಳೆದ ಕೆಲವು ವರ್ಷಗಳಿಂದ ಮರಾಠಿಯಲ್ಲಿ ಮಹಿಳಾ ಆತ್ಮಕಥೆಗಳು ಉಕ್ಕಿಹರಿಯುತ್ತಿವೆ. ಇದು ದಲಿತ ಆತ್ಮಕಥೆಗಳಿಂದ ಆರಂಭಗೊಂಡಿತು. ಹಿಂದೂ ಸಮಾಜದಲ್ಲಿ ಹೆಣ್ಣೂ ಸಹ ದಲಿತಳೇ ಎಂಬ ವಾದವೂ ಇದೆ. ಇದರಲ್ಲಿ ಸಾಮಾಜಿಕ ಆಶಯದ ಬಹು ದೊಡ್ಡ ಪಾಲಿರಬೇಕು. ಹೀಗಿದ್ದರೂ ಸ್ತ್ರೀಯರ ಆತ್ಮಚರಿತ್ರೆಗಳೆಲ್ಲ ಪೀಡಿತ ವ್ಯಕ್ತಿಗಳ ಕಥೆಯಾಗಿದೆ ಎಂದು ಹೇಳಲು ಬರುವುದಿಲ್ಲ. ಐವತ್ತು - ಅರವತ್ತು ವರ್ಷಗಳ ಹಿಂದೆ ಸ್ತ್ರೀ ಆತ್ಮಕಥೆಗಳು ಬೆರಳೆಣಿಸುವಷ್ಟು ಮಾತ್ರ ಇದ್ದವು. ಲಕ್ಷ್ಮೀಬಾಯಿ ಟಿಳಕ, ರಮಾಬಾಯಿ ರಾನಡೆ ಇವರನ್ನು ಬಿಟ್ಟರೆ ಮೂರನೇ ಹೆಸರು ನೆನಪಿಗೆ ಬರುತ್ತಿರಲಿಲ್ಲ. ಅನಂತರ ನೆನಪಾಗುವ ಹೆಸರೆಂದರೆ ನರ್ಸ ಸುಂದರಾಬಾಯಿಯವರ ಆತ್ಮಕಥೆ. ೧೯೬೦-೬೫ರಲ್ಲಿ ನಾನದನ್ನು ಓದಿದ್ದೆ. ಅದರಲ್ಲಿಯ ಆತ್ಮಕಥನ ಹಾಗೂ ಆ ವ್ಯವಸಾಯದ ಸ್ತ್ರೀಯರು ಅನುಭವಿಸುತ್ತಿದ್ದ ಯಾಚಕ ಸ್ಥಿತಿ, ಅಪಮಾನಕಾರಕ ಜೀವನ ಮರ್ಮಭೇದಕವಾಗಿತ್ತು. ಪುರುಷಪ್ರಧಾನ ಸಮಾಜದಲ್ಲಾಗುವ ಹೆಣ್ಣಿನ ಅವಹೇಳನ, ಸಂಭಾಳಿಸಲು ಅಸಾಧ್ಯವಾಗಬಹುದಾದಂತಹ ವ್ಯಕ್ತಿಗತ ಪ್ರತಿಷ್ಠೆ, ಇಂಥ ಅನೇಕ ದಸ್ತಾವೇಜು ಮಹಿಳಾ ಆತ್ಮಕಥೆಗಳಲ್ಲಿ ಬರಬಹುದೆಂದು ಈ ಪುಸ್ತಕ ಓದಿದಾಗ ಭಾವಿಸಿದ್ದೆ. ಅನಂತರದ ಅರ್ಧಶತಕದಲ್ಲಿ ಬರೆಯಲಾದ ಸ್ತ್ರೀಯರ ಆತ್ಮಕಥೆಗಳಲ್ಲಿ ಇದು ಆಗಾಗ ವ್ಯಕ್ತವಾಗಲಾರಂಭಿಸಿತು. ಹೆಣ್ಣು ಸ್ವಂತದ ಸ್ವತಂತ್ರ ಪ್ರತಿಷ್ಠೆ, ಅಸ್ಮಿತೆ, ವ್ಯಕ್ತಿತ್ವ, ಅಧಿಕಾರ ಗಳಿಸಿದ್ದಾಳೆಂದು ಅನಿಸುತ್ತದೆ. ಸಮಾನತೆಯನ್ನು ಒಪ್ಪಿಕೊಂಡ ಕಾಯ್ದೆ ಹೆಣ್ಣಿಗೆ ವಿಶೇಷ ಹಕ್ಕು ನೀಡಲು ಸಿದ್ಧವಾಗಿದೆ. ಎಲ್ಲ ಸ್ತರಗಳಲ್ಲಿ ಆಕೆ ದುಡಿಯಬಹುದು, ಹಣ ಗಳಿಸಬಹುದು. ಮಧ್ಯಮ ವರ್ಗದ ಸುಖೀ ಕುಟುಂಬದ ಹೊಸ ಅಸ್ಮಿತೆಯ ಅರಿವಿನಿಂದ ಬೇರೆಯೇ ಕಕ್ಷೆಯನ್ನು ಪ್ರವೇಶಿಸಿದ ಸ್ತ್ರೀಯರು ಬರೆದ ಆತ್ಮಕಥೆಗಳು ಚರ್ಚೆಯ ಹಾಗೂ ಚಿಕಿತ್ಸೆಯ ವಿಷಯಗಳಾಗಿವೆ.

ಮಾಧವಿ ದೇಸಾಯಿಯ 'ನಾಚ ಗ ಘುಮಾ', ಸುನೀತಾಬಾಯಿಯ 'ಆಹೇ ಮನೋಹರ ತರಿ' ಮತ್ತು ಸದ್ಯ ಸಾಕಷ್ಟು ಚರ್ಚೆಗೊಳಗಾದ ಕಮಲಾ ಪಾಧ್ಯೆಯವರ 'ಬಂಧ - ಅನುಬಂಧ' – ಈ ಆತ್ಮಚರಿತ್ರೆಗಳು ಕುತೂಹಲ ಕೆರಳಿಸಲು ಕಾರಣವೆಂದರೆ ಅವರ ಪತಿಯಂದಿರು ಸುಪ್ರಸಿದ್ಧ ಸಾಹಿತಿಗಳಾಗಿದ್ದರು ಎಂಬುದಕ್ಕೆ. ಗೌರವಾನ್ವಿತ ಲೇಖಕರ ವ್ಯಕ್ತಿಗತ ಜೀವನದ ವಿವರ ತಿಳಿಯಬೇಕೆಂಬ ಅಪೇಕ್ಷೆ ರಸಿಕರಿಗೆ, ವಾಚಕರಿಗಿರುತ್ತದೆ. ಅದು ತಿಳಿದಷ್ಟು ತಮ್ಮ ಜಿಜ್ಞಾಸೆ ಕಡಿಮೆಯಾಗುತ್ತಿದೆ ಎಂಬ ಕಲ್ಪನೆಯಿರುತ್ತದೆ. ಆತ್ಮಕಥೆಗಳು, ಆತ್ಮ ನಿವೇದನೆಯ ಜೊತೆಗೆ ಆಳವಾದ ಪಾತಳಿಯಲ್ಲಿ ಆತ್ಮ ಸಮರ್ಥನೆಯನ್ನು ಮಾಡಿಕೊಳ್ಳುತ್ತವೆ ಎಂಬ ಸಾಮಾನ್ಯ ಮತವೊಂದಿದೆ. ಈ ಮತ ಎಲ್ಲ ಕಡೆ ಹೊಂದಿಕೊಳ್ಳುವುದಿಲ್ಲ. ಹೀಗಾಗಿ ಈ ಮತದ ಬಗ್ಗೆ 'ಇದಮಿತ್ಥಂ' ಎಂಬ ಯಾವ ನಿರ್ಣಯ ಕೊಡುವುದೂ ಸಾಧುವಲ್ಲ. ಇದನ್ನೇ ಇನ್ನೊಂದು ರೀತಿಯಲ್ಲಿ ಹೀಗೆ ಹೇಳಲಾಗುತ್ತದೆ : ಆತ್ಮಕಥೆಗಳಲ್ಲಿ ಕಟುಸತ್ಯವಿರುವುದಿಲ್ಲ. ವ್ಯಕ್ತಿಗತ ಜೀವನದ ಕಟುಸತ್ಯವನ್ನು ಬೇರೊಬ್ಬ ವ್ಯಕ್ತಿಗೆ ಹೇಗೆ ಹೇಳುವುದು ಸಾಧ್ಯ ಎಂಬುದರ ಬಗ್ಗೆ ಸಾಕಷ್ಟು ಚರ್ಚೆಯಾಗಲಿಲ್ಲ. ಆದರೆ ಯಾವುದೇ ವಿಶಿಷ್ಟ ಆತ್ಮಕಥೆಯನ್ನು ಕಡಿಮೆ ದರ್ಜೆಯದು ಎಂದು ಸಾಬೀತು ಮಾಡುವಾಗ ಈ ವಿಚಾರವನ್ನು ಬಳಸಲಾಗುತ್ತದೆ. ಇದೇ ಆ ವ್ಯಕ್ತಿಯ ಜೀವನದ ಕಟುಸತ್ಯವೆಂದು ಯಾವ ವಿಮರ್ಶಕನೂ ಹೇಳುವುದು ಸಾಧ್ಯವಿಲ್ಲ. ಅವನು ತಾನು ಹೇಳಿದ ವಿಚಾರಗಳಿಗೆ ಕೆಲವು ವಿವರಗಳನ್ನು ನೀಡಿ ತನ್ನ ಸಮರ್ಥನೆ ಮಾಡಿಕೊಳ್ಳುವ ವ್ಯರ್ಥ ಪ್ರಯತ್ನದಲ್ಲಿ ತೊಡಗುತ್ತಾನೆ. ಆತ್ಮಕಥೆಗಳು ಕೇವಲ ಸತ್ಯದ ಒಂದು ಪ್ರಯೋಗ ಎಂಬ ವಿಚಾರವನ್ನಿಟ್ಟುಕೊಂಡರೂ ಸಾಕು, ಸಾಕಷ್ಟು ಸಮಸ್ಯೆ ಬಗೆಹರಿಯುತ್ತದೆ. ಬೇರೆಯವರ ಜೀವನದ ಬಗ್ಗೆ ಅಂತಿಮ ನಿರ್ಣಯ ನೀಡುವ ಹಕ್ಕು ತಮಗೇ ಇದೆಯೆಂದು ಭಾವಿಸಿದರೆ ತಪ್ಪಾಗುತ್ತದೆ. ಅದು ಉಳಿದವರ ಗಮನಕ್ಕೆ ಬರುವ ಮೊದಲೇ ಪಂದ್ಯ ಗೆದ್ದಿರುತ್ತೇವೆ, ಅಷ್ಟೇ.

ಇತ್ತೀಚೆಗೆ ಅಲ್ಲೋಲಕಲ್ಲೋಲವೆಬ್ಬಿಸಿದ ಮೊದಲ ಆತ್ಮಕಥೆ ಬರೆದ ಮಾಧವಿ ದೇಸಾಯಿಯವರ 'ನಾಚ ಗ ಘುಮಾ' ಕೃತಿಯಲ್ಲಿ ಸ್ತ್ರೀವಾದದ ಮೊದಲ ಹೂಂಕಾರ ಕೇಳಿಸುತ್ತದೆ. ಅದರಲ್ಲಿಯ ಚಿತ್ರ ಸಮ್ಮಿಶ್ರವಾದದ್ದು. ಬಾನದಾನಿ ಶ್ರೀಮಂತಿಕೆಯ ಪೀಳಿಗೆಯ ಪ್ರತಿಷ್ಠಿತ ಜಮೀನ್ದಾರಿ ಮನೆತನದ ಕೀರ್ತಿವಂತ ಲೇಖಕ. ಅವನ ಎರಡನೇ ಹೆಂಡತಿಯಾಗಿ ಬಂದು ಕಲಾವಿದನ ಪರಿವಾರದ ಗುಣ, ರಸಿಕತನ, ಆತ್ಮೀಯ ಪ್ರೇಮ – ಆದರೂ ಪರಂಪರಾಗತ ಪ್ರತಿಷ್ಠೆಯ ಮೇಲೆ ದಾವೆ ಮಾಡಲು ಸಾಧ್ಯವಾಗದ, ಮೊದಲ ವಿವಾಹದ ಬಳಿಕ ಸ್ವತಂತ್ರವಾಗಿ ಬದುಕಲು ಬಯಸುವ ಸ್ತ್ರೀ; ಆದರೆ ರೂಢಿ ಪರಂಪರೆಯಿಂದಾಗಿ ಆಕೆಯ ಮುಗ್ಧತನವನ್ನು ಸ್ವೀಕರಿಸಿದ ಹೊಸ ಜಮೀನ್ದಾರ, ಕುಟುಂಬ. ಆಗರ್ಭ ಅವಿಭಕ್ತ ಕುಟುಂಬದ ಗೋಜಲುತನ, ಆರೋಪ, ಬೆಳೆಯುತ್ತಾ ಸಾಗುವ ಲೇಖಕನ ಶಕ್ತಿಪಾತ ಮತ್ತು ಅಸಹಾಯಕತನ – ಇದೆಲ್ಲಾ ಚಿತ್ರಣ 'ನಾಚ ಗ ಘುಮಾ'ದಲ್ಲಿ ಪರಿಣಾಮಕಾರಕ ಶೈಲಿಯಲ್ಲಿ ಮೂಡಿಬಂದಿದೆ. ಮಾಧವಿ ದೇಸಾಯಿ ತಮ್ಮ ಕೈಫಿಯತ್ತನ್ನು ಮಾರ್ಮಿಕವಾಗಿ ಮಂಡಿಸಿದ್ದಾರೆ. ತವರಿನ ಪರಿವಾರ, ಪರಿಸರ, ರೀತಿ-ರಿವಾಜಿನ ಚಿತ್ರಣ ನವಿರೇಳಿಸುತ್ತವೆ. ಪರಂಪರೆಯ ಒಳಿತು-ಕೆಡಕುಗಳ ಪ್ರತಿಷ್ಠೆಯಿಂದ ಬಂಧಿಸಲ್ಪಟ್ಟ ಆಧುನಿಕ ವಿಚಾರಧಾರೆಯ ಹೆಣ್ಣು ಸ್ವತಂತ್ರ ಪ್ರತಿಷ್ಠೆ ಗಳಿಸುವ ಪ್ರಯತ್ನದಲ್ಲಿ ಎಂಥ ಉಸಿರುಗಟ್ಟಿಸುವ ಸನ್ನಿವೇಶದಲ್ಲಿ ಬದುಕುತ್ತಾಳೆ ಎಂಬುದು ಈ ಆತ್ಮಕಥೆಯಲ್ಲಿ ಸ್ಪಷ್ಟವಾಗಿ ಮೂಡಿಬಂದಿದೆ. ಬಂಡೇಳದೆ ಈ ಬಂಧನದಿಂದ ಪಾರಾಗುವುದು ಹೇಗೆ ಎಂಬುದೇ ನಮ್ಮ ಸಮಾಜದ ಸ್ತ್ರೀಯರ ಪ್ರಾತಿನಿಧಿಕ ಪ್ರಶ್ನೆಯಾಗಿದೆ.

*ಮರಾಠಿ ಮೂಲ : ಪು.ದ. ಹಾತಕಣಗಲೇಕರ*

ಆತ್ಮಕಥೆ ಆತ್ಮಶೋಧನೆಯ ಒಂದು ಪ್ರಕಾರವೆಂಬ ತಿಳಿವಳಿಕೆಯೂ ಇದೆ. ಇಂಥ ವಿಚಾರ ಕೆಲವು ಆತ್ಮಕಥೆಗಳನ್ನು ಓದುವಾಗ ವಿದಿತವಾಗುತ್ತದೆ ಎಂಬುದರಲ್ಲಿ ಅನುಮಾನವಿಲ್ಲ. ಅದರಲ್ಲಿ ತಮ್ಮ ಪ್ರತ್ಯೇಕತೆಯ, ಅಪರಾಧದ, ವಂಚನೆಯ, ಗುನ್ಹೆಯ ಕೈಫಿಯತ್ತನ್ನು ಮಂಡಿಸಲಾಗಿರುತ್ತದೆ. ಇಂಥದರಲ್ಲಿ ಲೇಖಕನೂ ಪ್ರಕೃತಿಧರ್ಮದ ಮೋಹಕ್ಕೆ ಬಲಿಯಾಗಿ ತಪ್ಪು ಕಲ್ಪನೆಗೆ ಅವಕಾಶ ಒದಗಿಸುವ ತಪಶೀಲನ್ನು ನೀಡುತ್ತಾನೆ. ಇದು ಅವರ ಆತ್ಮಶೋಧದ ಪ್ರಾಂಜಲ ಪ್ರಯತ್ನ ಎಂದೆನಿಸುತ್ತದೆ. ಬಹಳಷ್ಟು ಸಲ ಇದು ನಿಜವಾಗಿರುವ ಸಾಧ್ಯತೆಯನ್ನು ಅಲ್ಲಗಳೆಯುವಂತಿಲ್ಲ. ಆದಾಗ್ಯೂ ಈ ಆತ್ಮಶೋಧದ, ಮನೋವೈಜ್ಞಾನಿಕ ಶೋಧದ ಅಂಶ, ಅದರ ಸೀಮೆ ಅರಿತು ಸಕಾಲಕ್ಕೆ ನಿಲ್ಲುವುದೇ ಯೋಗ್ಯ.

ಜನಪ್ರಿಯ ಹಾಗೂ ಬಹು ಚರ್ಚಿತ ಆತ್ಮಕಥೆಗಳಲ್ಲಿ ಯಾವುವನ್ನು ಉಲ್ಲೇಖಿಸಿದ್ದೇನೋ ಅವುಗಳನ್ನು ಸಂಕ್ಷಿಪ್ತವಾಗಿಯಾದರೂ ಹೇಳುವುದು ಉಚಿತ. ಸುನೀತಾಬಾಯಿ ಮರಾಠಿಯ ಜನಪ್ರಿಯ ಬಹುಮುಖ ಸಾಹಿತಿಯೂ ಕಲಾವಿದರೂ ಆದ ಪು. ಲ. ದೇಶಪಾಂಡೆಯವರ ಪತ್ನಿ. ಅವರ ಸ್ವತಂತ್ರ, ರಸಿಕ ವ್ಯಕ್ತಿತ್ವ ಮರಾಠಿ ವಾಚಕರಿಗೆ ಸುಪರಿಚಿತ. ಸಮಾಜವಾದಿ ವಿಚಾರಧಾರೆಯ ನಿರ್ಭೀತ ಕಾರ್ಯಕರ್ತೆ, ಕಾವ್ಯ ಪ್ರೇಮಿ, ಅಸಾಧಾರಣ ಪ್ರತಿಭಾವಂತೆ, ತೇಜಸ್ವಿ ಸ್ವಭಾವದ ಸ್ಪಷ್ಟ ವ್ಯಕ್ತಿ, ವ್ಯವಹಾರ ನಿಪುಣೆ. 'ಪುಲ' ಅವರ ಬೆಳೆಯುತ್ತಿರುವ ಆರ್ಥಿಕ ವ್ಯವಹಾರವನ್ನು ಕೌಶಲ್ಯದಿಂದ ನಿರ್ವಹಿಸುತ್ತಾಳೆ. ಸಾಮಾಜಿಕ-ಸಾಂಸ್ಕೃತಿಕ ಕಾರ್ಯಕ್ಕಾಗಿ ಪುಲ-ಪ್ರತಿಷ್ಠಾನ ಸ್ಥಾಪಿಸಿ, ಆ ನಿಧಿಯನ್ನು ಸದ್ವಿನಿಯೋಗ ಮಾಡುವ ಪತ್ನಿ ಎಂಬ ಖ್ಯಾತಿ ಅವರದ್ದು. ಈ ಪ್ರತಿಭಾವಂತ ವ್ಯಕ್ತಿಯಿಂದ ಬಹುಮುಖ ಕಲಾವಿದ ಪತಿಯ ಚಿತ್ರಣ ಹೇಗೆ ಮೂಡಿದೆ ಎಂಬ ಕುತೂಹಲ ವಾಚಕರಲ್ಲಿತ್ತು. ತಮ್ಮ ಪ್ರಿಯ ಲೇಖಕನ ಮತ್ತಷ್ಟು ಆತ್ಮೀಯ ವಿವರ ತಿಳಿದುಕೊಳ್ಳುವ ಅಪೇಕ್ಷೆ ಸಹಜವಾಗಿಯೇ ಮೂಡಿತ್ತು. ತಲೆಬರಹದಿಂದ ಈ ಮನೋಹರ ಜೀವನದ ಉದಾಸೀನತೆ ಅರಿಯುವ ಚಿಕಿತ್ಸಕ ಉತ್ಸಾಹ ಓದುಗರಲ್ಲಿತ್ತು. ಆದರೆ ಈ ಪುಸ್ತಕ ಓದಿದ ಬಳಿಕ ಮಾತ್ರ ಅಂಥ ಉತ್ಸಾಹದ ಪ್ರತಿಕ್ರಿಯೆ ವ್ಯಕ್ತವಾಗಲಿಲ್ಲ. ಓದುಗರಿಗೆ ಪುಸ್ತಕ ಇಷ್ಟವಾದರೂ ಅಪೇಕ್ಷೆ ಮಾತ್ರ ಭಂಗವಾಯಿತು. ಪುರುಷನಿಂದ ಸ್ತ್ರೀಯ ಮೇಲೆ ಅನ್ಯಾಯವಾಗುವುದರ ಬದಲಿಗೆ ಇಲ್ಲಿ ವ್ಯತಿರಿಕ್ತವೇ ಆಗಿದೆಯಲ್ಲ ಎಂಬ ಭಾವನೆ ಮೂಡಿತು. ಈ ಕೃತಿಯ ಪೂರ್ವಾರ್ಧ ತುಂಬಾ ತನ್ಮಯತೆಯಿಂದ ಬರೆಯಲಾಗಿದೆ. ಅದರಲ್ಲಿ ತನ್ನ ಬಾಲ್ಯ, ಹುಟ್ಟಿದೂರು, ತಾಯ್ತಂದೆ, ಸಂಬಂಧಿಕರು, ಪರಿಸರ, ಮನೆಯ ಸಂಸ್ಕಾರ ಇದನ್ನು ತುಂಬಾ

ತತ್ಪರತೆಯಿಂದ ಚಿತ್ರಿಸಲಾಗಿದೆ. ತನ್ನ ಸ್ವಭಾವ ಆರಂಭದಿಂದಲೂ ಹೇಗೆ ಸ್ವತಂತ್ರ, ಸ್ವಾಭಿಮಾನಿಯಾಗಿತ್ತು, ಅದರ ಮೇಲೆ ದೇಶಪ್ರೇಮದ, ಸಮಾಜಸೇವೆಯ ಸರಳ ನಿಸ್ವಾರ್ಥ ಜೀವನದ, ಜ್ಞಾನನಿಷ್ಠೆಯ ಆಳವಾದ ಸಂಸ್ಕಾರ ಹೇಗಾಗಿದೆ ಎಂಬುದರ ಸಂವೇದನಾಶೀಲ ಚಿತ್ರಣ ಇಲ್ಲಿ ಮೂಡಿದೆ. ಅನಂತರದ ಸೇವಾದಲದ ದಿನಗಳು, ಮುಂಬಯಿ ಪ್ರಯಾಣ, ಅಲ್ಲಿಯ ಆರಂಭಿಕ ಕಠಿಣ ದಿವಸಗಳು, ಸಮಾನ ವಿಚಾರಧಾರೆಯ ಕಾರ್ಯಕರ್ತರ ಪರಿಚಯ ಮತ್ತು ಮೋಹದ ಕ್ಷಣಗಳು ನಾಟ್ಯಮಯವಾಗಿದ್ದರೂ, ನಿವೇದನೆಯ ದೃಷ್ಟಿಯಲ್ಲಿ ಅಷ್ಟೊಂದು ಪರಿಣಾಮ ಬೀರುವುದಿಲ್ಲ. ಪುಲ ಅವರ ಪರಿಚಯ, ಸ್ನೇಹ, ಆತ್ಮೀಯತೆ, ವಿವಾಹ ಹಾಗೂ ಸಾಹಿತ್ಯ ನಿರ್ಮಿತಿಯ ವರ್ಣನೆ ಇದ್ದರೂ, ಕುಟುಂಬ ಪ್ರಮುಖನಾದ ಪತಿಯ ವರ್ತನೆಯಲ್ಲಿ ಕಂಡುಬರುವ ಸಹಾನುಭೂತಿಯ ಕೊರತೆ, ಉಪೇಕ್ಷೆ ಮಾಡುವ, ಬೇರೆಯವರ ಕಷ್ಟದ ಅರಿವಿಲ್ಲದ, ಅವರ ಕಲಾನೈಪುಣ್ಯಕ್ಕೆ ಮಹತ್ತ್ವ ನೀಡದ ವಿವರಗಳು ಇಲ್ಲಿ ಸಿಗುತ್ತವೆ. ಬದಲಿಗೆ ತಾನೇ ಸಂಸಾರದ, ಕಲಾವಿದನ ಕಾಳಜಿ ಹೇಗೆ ತೆಗೆದುಕೊಂಡೆ, ಗೌರವ ನೀಡಿದೆ ಎಂಬುದಕ್ಕೆ ಮಹತ್ತ್ವ ನೀಡಲಾಗಿದೆ. ಪರಿಸ್ಥಿತಿಯ ಸ್ವಭಾವದ ವರ್ಣನೆ ಮಾಡುವಾಗ ಎಲ್ಲವೂ ಅಸತ್ಯವಾಗಿರುವುದಿಲ್ಲ. ಆದರೆ ಆಕ್ಷೇಪಾರ್ಹ ವಿಷಯವೆಂದರೆ, ಕೆಲವು ವರ್ತನೆ, ಪ್ರಸಂಗಗಳಿಗೆ ನೀಡಿದ ಪ್ರತ್ಯಕ್ಷ, ಅಪ್ರತ್ಯಕ್ಷ ಒತ್ತು. ಪುಲ ಅವರ ಸಂದರ್ಭದ ಪ್ರತಿಕೂಲ ಹಾಗೂ ತನ್ನ ಸ್ವಂತದಕ್ಕೆ ಅನುಕೂಲಕರ ವರ್ಣನೆಗೆ ನೀಡಿದ ಮಹತ್ತ್ವದ್ದು. ಈ ಪ್ರಕ್ರಿಯೆಯಿಂದಾಗಿ ಸುನೀತಾಬಾಯಿಯವರ ವ್ಯಕ್ತಿತ್ವ ಪ್ರಖರಗೊಳ್ಳುತ್ತದೆ. ಪುಲ ಅನೇಕ ವಿಷಯಗಳಲ್ಲಿ ಅಸಾಮಾನ್ಯವಾಗಿದ್ದರೂ ಗೃಹಸ್ಥನೆಂದು ಅಯಶಸ್ವಿಗೊಳ್ಳುತ್ತಾರೆಂಬುದು ಪುಲ ಪ್ರೇಮಿಗಳಿಗೆ ಸ್ವಲ್ಪ ಕಸಿವಿಸಿ ಉಂಟುಮಾಡಬಹುದು. ಅವರೆಂದೂ ಸುನೀತಾ ಅವರ ಆತ್ಮೀಯರಾಗಿರಲಿಲ್ಲ. ಕೆಲವರು ಈ ಆತ್ಮಕಥೆಯಿಂದ ಕೆರಳಿದರು ಎಂಬುದು ಸುಳ್ಳಲ್ಲ. ಈ ಕೃತಿಗೆ ಎಲ್ಲ ಸ್ತರದ ಮಾನ್ಯತೆ ದೊರಕಿಸುವ ಪ್ರಯತ್ನ ನಡೆಯಿತು. ತಮ್ಮ ಭೂಮಿಕೆಯನ್ನು ಪರೋಕ್ಷವಾಗಿ ಸಮರ್ಥಿಸಿಕೊಳ್ಳಲು ಸುನೀತಾಬಾಯಿಯವರು ಪಾಶ್ಚಾತ್ಯ ಸಾಹಿತಿಗಳ ಸಹಚರಣಿಯರು, ತಮ್ಮ ಖ್ಯಾತ ಸಹಚರರ ಬಗ್ಗೆ ಬರೆದ ಲೇಖನವನ್ನು ಮರಾಠಿ ಓದುಗರಿಗೆ ನೀಡಬೇಕಾದ ಸಂದರ್ಭ ಬಂತು. ಈ ಘಟನೆಯ ಅನುಕೂಲ, ಪ್ರತಿಕೂಲ ಪ್ರತಿಕ್ರಿಯೆ ತಲೆದೋರಿದ್ದು ಸಹಜವೇ ಆಗಿದೆ. ಆದರೆ ಮಹತ್ತ್ವದ ವಿಷಯವೆಂದರೆ, ಈ ಆತ್ಮಕಥೆ ಒಂದು ಹೊಸ ಅರಿವು ಮೂಡಿಸಿದ್ದು.

ಕಮಲ ಪಾಧ್ಯೆಯ 'ಬಂಧ-ಅನುಬಂಧ' ಪ್ರಸಿದ್ಧ ಲೇಖಕರಾದ ಪ್ರಭಾಕರ ಪಾಧ್ಯೆಯವರ ಪತ್ನಿ ಬರೆದ ಆತ್ಮಕಥೆ. ಶ್ರೀ ಪಾಧ್ಯೆ ಮೂರು ಖಂಡ ಸುತ್ತಾಡಿದ ''ಕಾಂಗ್ರೆಸ್ ಫಾರ್ ಕಲ್ಚರಲ್ ಫ್ರೀಡಮ್'' ಎಂಬ ಅಂತರ್‌ರಾಷ್ಟ್ರೀಯ ಸಂಸ್ಥೆಯ ಏಶಿಯಾ ವಿಭಾಗದ ಸಂಚಾಲಕರು. ಮರಾಠಿಯ ಖ್ಯಾತ ಪತ್ರಿಕಾ ಸಂಪಾದಕರು, ಟೀಕಾಕಾರ, ಸೌಂದರ್ಯ ಶಾಸ್ತ್ರದ ಅಭ್ಯಾಸಕ. ಅವರಿಗೆ ತಮ್ಮ ಕಾಲದಲ್ಲಿ ದೇಶ - ವಿದೇಶದ ಅನೇಕ ವಿದ್ವಾಂಸರ, ರಾಜಕೀಯ ನೇತಾರರ ಸಹವಾಸ ದೊರಕಿತು. ಆಗ ಅವರು ವಿಚಾರಸಂಕಿರಣವನ್ನು ಆಯೋಜಿಸಿದ್ದರು. ಒಟ್ಟಿನಲ್ಲಿ ಮಹಾರಾಷ್ಟ್ರದ ದೇಶದ ಬೌದ್ಧಿಕ ಜೀವನಕ್ಕೆ ಚೈತನ್ಯ ನೀಡುವ ಕಾರ್ಯ ಕೈಗೊಂಡಿದ್ದರು. ತನ್ನಿಮಿತ್ತ ಅವರಿಗೆಲ್ಲ ಕಮಲ ಪಾಧ್ಯೆಯವರ ಪರಿಚಯ, ಸ್ನೇಹ, ಲಭಿಸಿತು. ಜಯಪ್ರಕಾಶ ನಾರಾಯಣ, ಅವರ ಪತ್ನಿ, ರಾಮ ಮನೋಹರ ಲೋಹಿಯಾ, ಎಸ್. ಎಂ. ಜೋಶಿ, ನಾಥ ಪೈ, ದಯಾಕೃಷ್ಣ ಇವರೆಲ್ಲರಿಂದಾಗಿ ಈ ಆತ್ಮಕಥೆಯಲ್ಲಿ ರಾಷ್ಟ್ರಮಟ್ಟದ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಜೀವನದ ಚಿತ್ರಣ ನೋಡಲು ಸಿಗಬಹುದೆಂಬ ಅಪೇಕ್ಷೆಯಿತ್ತು. ಸ್ವಲ್ಪ ಪ್ರಮಾಣದಲ್ಲಿ ಇದು ಯಶಸ್ವಿಯಾಗಿದೆ. ಆದರೆ ಲೇಖಕಿಯ ಯೋಜನೆ ಬೇರೆ ಸ್ವರೂಪದ್ದಿದ್ದಂತೆ ಕಂಡಿತು. ಈ ಯೋಜನೆಯ ಒಂದು ಭಾಗವೆಂದರೆ ಸ್ತ್ರೀಯರ ಸಮಾನ ಹಕ್ಕಿನದು, ಸ್ತ್ರೀವಾದಿ ಭೂಮಿಕೆಯದು, ಪುರೋಗಾಮಿ ದೃಷ್ಟಿಕೋನದ್ದು. ಎರಡನೇ ಭಾಗವೆಂದರೆ ಬಂಧ-ಅನುಬಂಧದಲ್ಲಿ ಇಂದ್ರಿಯ ಸಂವೇದನೆಯ ಮಾಧ್ಯಮ ಮಹತ್ತ್ವದ ಕಾರ್ಯ ಹೇಗೆ ಮಾಡುತ್ತದೆ ಎನ್ನುವುದು. ಈ ಸಂವೇದನೆಯ ಅನುರೋಧದಿಂದ ಜೀವನದ ಅನುಭವದ ದೃಶ್ಯವನ್ನು ಅನಾವರಣಗೊಳಿಸುವ ಯೋಜನೆ ಆತ್ಮಕಥೆಯ ಮೊದಲ ಪ್ರಕರಣ 'ಸ್ಪರ್ಶ' ಬರೆದಾಗ

ಇತ್ತು. ಅದನ್ನು ಓದಿದಾಗ ಇದೊಂದು ಹೊಸ ಬಗೆಯ ಪ್ರಯೋಗಶೀಲ ಆತ್ಮಕಥೆಯಾಗಬಹುದೆಂದು ಭಾವಿಸಿದ್ದೆ. ಈ ಪ್ರಕರಣ ಚಿಂತನೆಯ, ಆತ್ಮಶೋಧನೆಯ ದೃಷ್ಟಿಕೋನದಿಂದ ಉಚ್ಚ ದರ್ಜೆಯನ್ನು ಪಡೆಯುವಲ್ಲಿ ಯಶಸ್ವಿಯಾಗಿತ್ತು. ಆದರೆ ಅನಂತರ ಮಾತ್ರ ಈ ಯೋಜನೆ ಮುಂದುವರೆಯಲಿಲ್ಲ. ಮತ್ತೆ ಹಳೆಯ ಸಾಂಕೇತಿಕ, ರೂಢಿಯಲ್ಲಿದ್ದ ಪದ್ಧತಿಯನ್ನೇ ಅವಲಂಬಿಸಿತು. ಈ ಆತ್ಮಕಥೆಯನ್ನು, ಅದರೊಳಗಿನ ಸ್ತ್ರೀವಾದಿ ದೃಷ್ಟಿಕೋನವನ್ನು ಉತ್ಸಾಹದಿಂದ ಸ್ವಾಗತಿಸಲಾಯಿತು. ಈ ಆತ್ಮಕಥೆಯಲ್ಲಿ ಶ್ರೀ ಪಾಧ್ಯೆಯವರ ನಡೆವಳಿಕೆಯ ಚಿಕಿತ್ಸೆಯನ್ನು ಪರೋಕ್ಷವಾಗಿ ಮಾಡಲಾಗಿದೆ ಹಾಗೂ ಅವರಿಂದ ತಮಗೆ ಯೋಗ್ಯವಾದ ಅವಕಾಶ, ಪ್ರೋತ್ಸಾಹ ಹೇಗೆ ಸಿಕ್ಕಿಲ್ಲ, ಅರ್ಚಕನ ಮಗಳೆಂಬ ಅವಹೇಳನ ಹೇಗೆ ಮೇಲಿಂದ ಮೇಲೆ ನಡೆಯಿತು, ತನಗೆ ಸಮಾನ ಸ್ವಾತಂತ್ರ್ಯ ಹೇಗೆ ಸಿಕ್ಕಿಲ್ಲ, ಇತ್ಯಾದಿ ಉಲ್ಲೇಖ ದೊರಕಿದ್ದರೂ ಅಷ್ಟೊಂದು ಆಕ್ರಮಣಕಾರಿ ಅನಿಸುವುದಿಲ್ಲ. ಈ ಆತ್ಮಕಥೆ ನಿವೇದನೆಯ ಹೊಸದಾರಿ ಹಿಡಿಯಿತು. ಹೀಗಾಗಿ ಇಂಥದೊಂದು ಪ್ರವಾಹ ಆರಂಭವಾಗುತ್ತದೆ ಎಂದೆನಿಸುತ್ತಿದೆ. ದಿವಂಗತ ಲೇಖಕನ ಪತ್ನಿಯು ಆತ್ಮನಿವೇದನೆ ಮಾಡುವ ಹೊಸಪದ್ಧತಿ ಗೋಚರಿಸುತ್ತಿದೆ. ಕೆಲಮಟ್ಟಿಗೆ ಇದು ಯೋಗ್ಯ ಹಾಗೂ ಅವಶ್ಯಕ ಎಂದೆನಿಸಿದರೂ ಒಂದು ವೇಳೆ ಅದು ಸಾಹಿತ್ಯ ನಿರ್ಮಿತಿಯ ಮೇಲೆ ಹೆಚ್ಚಿನ ಬೆಳಕು ಚೆಲ್ಲದಿದ್ದರೆ, ಸಾಹಿತ್ಯ ನಿರ್ಮಿತಿಯ ಪ್ರಕ್ರಿಯೆ ಅನಾವರಣಗೊಳಿಸದಿದ್ದರೆ, ಅದು ಫಲಕಾರಿಯೆನಿಸುವುದಿಲ್ಲ. ದಿ. ವಿದ್ಯಾಧರ ಪುಂಡಲೀಕರ ಪತ್ನಿ ರಾಗಿಣಿಯವರು ತಮ್ಮ ಸಹಜೀವನದ ಮೇಲೊಂದು ಗ್ರಂಥ ಬರೆದರು. ಈ ಮೊದಲು ಅವರು ಯಾವ ಪುಸ್ತಕವನ್ನೂ ಬರೆದಿರಲಿಕ್ಕಿಲ್ಲ. ಈ ಗ್ರಂಥ, ಲೇಖಕ ಪುಂಡಲೀಕರ ಬಗ್ಗೆ ಹೆಚ್ಚಿಗೇನೂ ಹೇಳುವುದಿಲ್ಲ. ಅವರ ವ್ಯಕ್ತಿಗತ ತಪಶೀಲೆ ಹೆಚ್ಚಾಗಿ ಬಂದಿದೆ. ಆನಂದೀಬಾಯಿ ಶಿರ್ಕೆಯ 'ಸಾಂಜವಾತ', ಆಶಾಲತಾ ಸಾವೇಯ 'ಪಾನಾ ಆಡಚೇ ಫೂಲ', ಪಾರ್ವತಿಬಾಯಿ ಆರವಲೆಯ 'ಮಾಝಿ ಕಹಾಣಿ', ಮಾಲತಿಬಾಯಿಯ 'ಸಹವಾಸ' – ಇವು ಮಹಿಳೆಯರ ಇನ್ನೂ ಕೆಲವು ಆತ್ಮಚರಿತ್ರೆಗಳು. ಇವುಗಳ ವೈಶಿಷ್ಟ್ಯವನ್ನು ಎತ್ತಿತೋರಿಸುವ ಹಾಗಿಲ್ಲ. ಅವರು ಬದಲಾದ ಕಾಲದ ಪ್ರತಿಬಿಂಬವನ್ನು ಎತ್ತಿ ತೋರಿಸುತ್ತಿದ್ದಾರಷ್ಟೆ! ಈ ಮೊದಲು ಬರೆಯಲಾದ ಆತ್ಮಕಥೆಗಳನ್ನು ಉಲ್ಲೇಖಿಸುವುದು ಅವಶ್ಯಕ. ಶೀಲವತಿ ತಾಯಿ ಕೇತಕರ ಇವರು ಜ್ಞಾನ ಕೋಶಕಾರ ಕೇತಕರರೊಂದಿಗಿನ ಸಹಜೀವನದ ಸಂಗತಿಗಳನ್ನು ''ಮೀಚ ಹೇ ಸಾಗಿತಲೇ ಆಹೇ'' ಎಂಬ ಗ್ರಂಥದಲ್ಲಿ ಅತ್ಯಂತ ಪ್ರಾಂಜಲವಾಗಿ ಬರೆದಿದ್ದಾರೆ. ಡಾ|| ಕೇತಕರ ಸಹೃದಯರೇ ಆಗಿದ್ದರೂ ವಿಚಿತ್ರ ಗೃಹಸ್ಥ. ಅವರು ದತ್ತಕ ತೆಗೆದುಕೊಂಡ ಹುಡುಗನ ಅನಾರೋಗ್ಯವನ್ನು ಸಹಿಸಿದ, ಸೇವೆ ಮಾಡಿದ ಶೀಲವತಿ ಯಾವ ತಕರಾರನ್ನೂ ಮಾಡಲಿಲ್ಲ. ಆ ಕಾಲದಲ್ಲಿ ಸ್ತ್ರೀವಾದ, ಅಸ್ಮಿತೆ ಇನ್ನೂ ಉದಯವಾಗಿರಲಿಲ್ಲ ಎಂದೆನ್ನೋಣವೆ ? ಸುಧಾ ಅತ್ರೆ (ಗೋದಾ ತರಂಗ), ಉಷಾ ಡಾಂಗೆ (ಪಣ ಐಕತೋ ಕೋಣ), ಮುಕ್ತಾ ದೀಕ್ಷಿತ್ (ಹೊ ತೋ ಪ್ರಚಿತಿಚೆ ಬೋಲಣೆ), ಲೀಲಾಬಾಯಿ ಪಟವರ್ಧನ - ಮಾಧವ ಜೋಲಿಯನರ ಪತ್ನಿ - (ಆಮಚಿ ಅಕರಾ ವರ್ಷೇ) ಈ ಆತ್ಮಕಥೆಗಳಲ್ಲಿ ಖ್ಯಾತನಾಮರಾದ ಗಂಡಂದಿರ ನೆರಳಲ್ಲಿ ಎಂಥ ಅನಾಮಿಕ ಜೀವನ ಕಳೆಯಬೇಕಾಯಿತು. ಕೆಲವು ಪ್ರಸಂಗಗಳಲ್ಲಿ ಪುರುಷ ವರ್ಚಸ್ಸಿನಲ್ಲಿ, ಅತಿರೇಕತನದಲ್ಲಿ ಎಂಥ ಜೀವನ ಸಾಗಿಸಬೇಕಾಯಿತು ಎಂಬ ವಿಷಯಗಳು ಓದಲು ಸಿಗುತ್ತವೆ. ಈ ಪ್ರತಿಕ್ರಿಯೆ - ಪ್ರಕ್ರಿಯೆಯಿಂದಾಗಿಯೇ ಸ್ತ್ರೀವಾದಿ ಭೂಮಿಕೆ ಸಿದ್ಧಗೊಂಡಿರಬೇಕೆಂದೆನಿಸುತ್ತದೆ. ಈ ಸಂದರ್ಭದಲ್ಲಿ ಇನ್ನೊಂದೆರಡು ಆತ್ಮಕಥೆಗಳನ್ನು ಉಲ್ಲೇಖಿಸಬೇಕು ! ಯಮುನಾತಾಯಿ ಖಾಡೀಲಕರ ಅವರ 'ವಟವೃಕ್ಷಾಚಾ ಛಾಯೇತ' ಮತ್ತು ಸರೋಜಿನಿ ಸಾರಂಗಪಾಣಿ ಅವರ 'ದುರ್ದೈವಾಚಿ ದೋನ ಹಾಥ' ಈ ಎರಡು ಪುಸ್ತಕಗಳು ಇಂದಿಗೂ ನಮ್ಮ ಸಮಾಜದಲ್ಲಿ ಸ್ತ್ರೀಯರು ಪುರುಷರಿಂದ ಅನುಭವಿಸಬೇಕಾದ ಕಷ್ಟ, ಅಸಹ್ಯ, ಅಶ್ಲೀಲ ಆರೋಪಗಳ ಹೃದಯ ವಿದ್ರಾವಕ ಚಿತ್ರಣ ನೀಡುತ್ತವೆ.

ಈ ಪ್ರವಾಹದಲ್ಲಿ ದಲಿತ ಸ್ತ್ರೀಯರ ಆತ್ಮಕಥೆಗಳನ್ನು ಪರಿಶೀಲಿಸಬಹುದು. ಅವುಗಳ ಸಂಖ್ಯೆ ಅತ್ಯಲ್ಪ. ಆದರಲ್ಲಿ ಚಿತ್ರಿಸಲ್ಪಟ್ಟ ಪರಿಸ್ಥಿತಿ, ಸ್ತ್ರೀಯರು ಅನುಭವಿಸಬೇಕಾದ ದುಃಖ ತೀರಾ ಭಿನ್ನವಾದ ರೀತಿಯದ್ದು ಮತ್ತು ತೀವ್ರತೆಯಿಂದ ಕೂಡಿದ್ದು. ಇಂಥ ಹೀನ ಬದುಕು, ಅವಹೇಳನ, ಗಂಡಸರ ದುಶ್ಚಟ, ವ್ಯಸನ, ಕ್ರೌರ್ಯ, ಹೆಂಗಸರು ಪಶುಗಳಂತೆ ದುಡಿಯಬೇಕಾದ ರೀತಿ, ಅವರಿಗೂ ಮನಸ್ಸಿದೆ ಎಂಬುದನ್ನು ಮರೆತ ವರ್ತನೆ - ಇವುಗಳ ದರ್ಶನ ಮರಾಠಿ ಓದುಗರಿಗೆ ಮೊದಲಬಾರಿಗೆ ಮಾಡಿಕೊಡುವಂಥದ್ದಾಗಿತ್ತು. ಇದು ಭಯಾನಕವಾದದ್ದು. ಬೇಬಿ ಕಾಂಬಳೆಯ ಬದುಕು ನಮ್ಮಂಥದು ಮತ್ತು ಶಾಂತಾಬಾಯಿ ಕಾಂಬಳೆ (ಪ್ರಾ. ಅರುಣ ಕಾಂಬಳೆಯವರ ಮಾತೋಶ್ರೀ)ಯವರ 'ಮಾಝಾ ಜನ್ಮಾಚಿ ಚಿತ್ತರ ಕಥಾ'ದಲ್ಲಿ ಶಾಂತಾಬಾಯಿ ಆರಂಭದ ಕಠಿಣ ಬದುಕಿನ ನಂತರ ಸುಸ್ಥಿತಿಗೆ ಬಂದ ಶಿಕ್ಷಕಿಯ ಪರಿಚಯ ನೀಡುತ್ತದೆ. ಈ ಪುಸ್ತಕ ಹೆಚ್ಚು ಆಕರ್ಷಕ, ನಾಟ್ಯಮಯ, ವಾಙ್ಮಯದ ಅರಿವಿನಿಂದ ಬರೆದದ್ದರಿಂದ ಇದು ದೂರದರ್ಶನದಲ್ಲಿ ಪ್ರಸಾರಗೊಂಡಿತು. ಬೇಬಿ ಕಾಂಬಳೆಯ ಪುಸ್ತಕ ನೇರ ಅನುಭವದಿಂದ ಮೂಡಿದ್ದು. ಹೆಚ್ಚು ಪರಿಣಾಮಕಾರಿ ದಲಿತ ಸ್ತ್ರೀಯರ ಆತ್ಮಕಥೆಗಳು ಇನ್ನೂ ಬರಬೇಕಾಗಿದೆ. ಈ ಸಂದರ್ಭದಲ್ಲಿ ಮಲ್ಲಿಕಾ ಅಮರಶೇಖರ 'ಉದ್ವಸ್ತ ವಯಾಚೆ ಆಹೇ ಮಲಾ' ಶೀರ್ಷಿಕೆಯಂತೆಯೇ ಅಧಿಕ ಸ್ಫೋಟಕ, ನಾಟ್ಯಮಯ, ಆವೇಗದಿಂದ ಕೂಡಿದೆ. ಆಕೆ ಸ್ವತಃ ಕವಯಿತ್ರಿ. ವಿಶಿಷ್ಟ ಶೈಲಿಯಿಂದ ಬರೆದ ಕೃತಿ. ಪುರುಷ ನಡೆವಳಿಕೆ, ಸ್ತ್ರೀವಾದಿ ಭೂಮಿಕೆ, ಪರಂಪರಾಗತ ಸಮಾಜ, ಆರ್ಥಿಕ ದುಃಸ್ಥಿತಿ, ಇದರಿಂದಾಗಿ ತಲೆದೋರಿದ ಉದ್ವಿಗ್ನತೆ– ಇತ್ಯಾದಿ ಇಲ್ಲಿ ಪ್ರಕಟಗೊಂಡಿದೆ.

ಈಗ ಚಲನಚಿತ್ರ ಹಾಗೂ ನಾಟಕದ ಕ್ಷೇತ್ರಗಳಲ್ಲಿ ವ್ಯವಹರಿಸುವ ಸ್ತ್ರೀಯರ ಆತ್ಮಕಥೆಗಳತ್ತ ಹೊರಳೋಣ. ಇಂಥ ಪ್ರಕಾರದ ಆತ್ಮಕಥೆಗಳು ಈಗ ಹೆಚ್ಚೆಚ್ಚು ಪ್ರಸಿದ್ಧಿ ಪಡೆಯುತ್ತಿವೆ. ಅದನ್ನು ಬರೆಯುವ ವ್ಯವಸಾಯಿ ಲೇಖಕರು, ಶಬ್ದ ನಿರೂಪಕರು ಸಿದ್ಧಗೊಂಡಿದ್ದಾರೆ. ಈ ತರಹದ ''ಪಿಶಾಚ ನಿರ್ಮಿತಿ'' ಪಾಶ್ಚಾತ್ಯ ದೇಶಗಳಲ್ಲಿ ರೂಢಿಯಾಗಿದೆ. ನಮ್ಮಲ್ಲಿ ಇದು ಹೊಸದಾಗಿ ಆರಂಭಗೊಳ್ಳುತ್ತಿದೆ. ಇಂಥ ಕೆಲವೇ ಆತ್ಮಕಥೆಗಳನ್ನು ಉಲ್ಲೇಖಿಸಬಹುದು. ಇದಕ್ಕೂ ಮೊದಲು ಇನ್ನೊಂದು ಪ್ರಕಾರದ ಆತ್ಮಕಥೆಗಳನ್ನು ತಿಳಿಸಬೇಕು. ಇದಾವುದೆಂದರೆ ಮುಕ್ತ ವಿವಾಹ ಬಾಹ್ಯ ಸಂಬಂಧವನ್ನು ರಕ್ಷಿಸುವ ಉಚ್ಚ ಸಮಾಜದ ಸ್ತ್ರೀಯರ ನಿವೇದನೆ. 'ಆಜುನಿ ಚಾಲತೇಚ ವಾಟ' – ಇದು ಆನಂದಿಬಾಯಿ ವಿಜಾಪುರೆಯವರ ಪುಸ್ತಕ. ಇದರಲ್ಲಿ ಈ ಬಗೆಯ ಸಂಬಂಧವನ್ನು ಮುಕ್ತವಾಗಿ ವರ್ಣಿಸಲಾಗಿದೆ. ಅಪರಾಧಿ ಪ್ರಜ್ಞೆಯ, ಸಮರ್ಥನೆಯ ಅಂಶವಿಲ್ಲ. ಈ ವ್ಯವಹಾರದಲ್ಲೂ ತಿರಸ್ಕರಿಸುವ ಸ್ವಾತಂತ್ರ್ಯ ಸ್ತ್ರೀಯರೇ ತೆಗೆದುಕೊಳ್ಳಬೇಕು, ಎಂಬ ವಿಚಾರವಿದೆ. ಅಭಿನಯ ಕ್ಷೇತ್ರದಲ್ಲಿ ದುಡಿಯುವ ಹೆಣ್ಣಿನ ಚಾರಿತ್ರ್ಯದ ಬಗೆಗಿನ ಪಾರಂಪರಿಕ ದೃಷ್ಟಿಕೋನ ಇನ್ನೂ ಅಳಿಸಲಿಲ್ಲ. ಮರಾಠಿಯಲ್ಲಿ ಶಾಂತಾ ಆಪ್ಟೆಯವರ (೧೯೪೦) 'ಜಾವು ಮೀ ಸಿನೇಮಾತ' ಎಂಬ ಆತ್ಮಕಥೆಯಿಂದ ಇದು ಆರಂಭಗೊಂಡಿತು. ಓರ್ವ ದಿಟ್ಟ ಅಭಿನೇತ್ರಿಯ ಸ್ವತಂತ್ರ ವ್ಯಕ್ತಿತ್ವದ ಆವಿಷ್ಕಾರ ಇಲ್ಲಿ ಕಾಣಿಸಿತು. ಯಾರಿಗೂ ಆಘಾತವನ್ನುಂಟುಮಾಡುವಂಥ ವ್ಯಕ್ತಿತ್ವ. ಹಂಸಾ ವಾಡಕರ ಅವರ 'ಸಾಂಗತೇ ಐಕಾ' ೧೯೭೦ರಲ್ಲಿ ಪ್ರಕಟಗೊಂಡು ತನ್ನ ಪ್ರಾಂಜಲ ನಿವೇದನೆಯಿಂದಾಗಿ ಅಲ್ಲೋಲ ಕಲ್ಲೋಲವೆಬ್ಬಿಸಿತು. ಈಕೆ ಅಶಿಕ್ಷಿತಳಾಗಿದ್ದರೂ ಸದ್ಗುಣಿಯಾದ ಅಭಿನೇತ್ರಿ. ಅನೇಕ ಪುರುಷರ ಹಾಗೂ ಪುರುಷ ವ್ಯಸನದ ಅಡಕೊತ್ತಿನಲ್ಲಿ ಸಿಕ್ಕು ಹೇಗೆ ಉದ್ವಸ್ಥಳಾದಳು ಎಂಬುದರ ಹೃದಯವಿದ್ರಾವಕ ಚಿತ್ರ ಈ ಪುಸ್ತಕದಲ್ಲಿದೆ. ಈ ನಿವೇದನೆಯಲ್ಲಿ ಯಾವ ಶಿಷ್ಟತನವೂ ಇಲ್ಲ. ಹೀಗಾಗಿ ಇದು ಹೆಚ್ಚು ತೀಕ್ಷ್ಣವೂ, ತೀವ್ರವೂ ಆಗಿದೆ. ಈ ನಿವೇದನೆಯು ಅನಂತರದ ನಿವೇದಕರಿಗೆ ಹೆಚ್ಚು ದಿಟ್ಟತನ ತಂದುಕೊಟ್ಟಿತು. 'ಸ್ನೇಹಾಂಕಿತ' (ಸ್ನೇಹಪ್ರಭಾ ಪ್ರಧಾನ), 'ಚಂದೇರಿ ದುನಿಯೇತ' (ಲೀಲಾ ಚಿಟಣಿಸ) ಇವು ಕೆಲವು ಉದಾಹರಿಸಬಹುದಾದ ಕೃತಿಗಳು. ಅನಂತರ ಹಲವು ಅಭಿನೇತ್ರಿಯರು ತಮ್ಮ ನಿವೇದನೆ ಸಾದರಪಡಿಸಿದ್ದರಿಂದ ಆತ್ಮಕಥೆಗಳ ಸಂಖ್ಯೆ ಹೆಚ್ಚಾಯಿತು. ದುರ್ಗಾ ಖೋಟೆಯವರ ಪುಸ್ತಕ ಮಾತ್ರ ತೀರಾ ಭಿನ್ನವಾಗಿದೆ. ತಮ್ಮ ಶ್ರೇಷ್ಠ ದರ್ಜೆಯ ಖಾನದಾನೀ ಅಭಿನಯದ ವಿವರ ಈ ಪುಸ್ತಕದಲ್ಲಿದೆ. ಮರಾಠಿ ಚಲನಚಿತ್ರ ಸೃಷ್ಟಿಯ, ವಿಕಾಸದ, ಅವರಿಗೆ ಯಾರ ಯೋಗದಾನ ಸಿಕ್ಕಿತೋ ಆ ತಪಸ್ವಿ ಕಲಾವಿದರ, ಸಾಮಾಜಿಕ, ಸಾಂಸ್ಕೃತಿಕ ಪರಿಸ್ಥಿತಿಯ, ಮುಂಬೈ ನಗರದ, ಕುಟುಂಬ ರಚನೆಯ, ಜಮಾತಿಯ ರೀತಿ-ರಿವಾಜಿನ ಸಾಕಷ್ಟು ವಿವರಚಿತ್ರಣ ಈ ಪುಸ್ತಕದಲ್ಲಿದೆ. ಇದೊಂದು ಶ್ರೇಷ್ಠ ದರ್ಜೆಯ ಕೃತಿ.

ಈ ಸಂಕ್ಷಿಪ್ತ ಲೇಖನದಲ್ಲಿ ಬಹಳಷ್ಟು ಆತ್ಮಕಥೆಗಳ ಉಲ್ಲೇಖ ಮಾಡುವುದಾಗಲಿಲ್ಲ ಎಂಬ ಅರಿವು ನನಗಿದೆ. ಗೋದಾವರಿಬಾಯಿ ಪರೂಳೇಕರ ಅವರ 'ಜೆವ್ಹಾ ಮಾಣೂಸ ಜಾಗಾ ಹೋತೋ', ಅನೂತಾಯಿ ವಾಘೇಯ 'ಕೋಸ ಬಾಡಚ್ಯಾ ಟೇಕಡೀವರ್ಣ' – ಇವು ಸಮಾಜಾಭಿಮುಖವಾದ ಆತ್ಮನಿವೇದನೆಯ ಭಿನ್ನ ಪರಿಮಾಣವನ್ನು ವ್ಯಕ್ತಪಡಿಸುತ್ತವೆ. ಸತ್ಯಭಾಮಾಬಾಯಿ ಸುಖಾತ್ಮೆಯ 'ಗೇಲೆ ತೇ ದಿವಸ' ಒಂದು ಕುಟುಂಬದ ಯಶೋಗಾಥೆಯನ್ನು ಸ್ಮರಿಸುವ ಪುಸ್ತಕ. ನಿವೇದನೆಯ ಅಭಿಜಾತ ಆತ್ಮ ನಿವೇದನೆಯ ಸ್ಪರ್ಶ ಮೂಡಿಸುತ್ತದೆ. ಇನ್ನು ಮುಂದೆ ಈ ಪ್ರವಾಹ ಬೆಳೆಯುವುದರಲ್ಲಿ ಯಾವ ಸಂದೇಹವೂ ಇಲ್ಲ.

ಅನುವಾದ : ಚಂದ್ರಕಾಂತ ಪೋಕಳೆ
ಬೇಡಕಿಹಾಳ - ೫೯೧೨೧೪, ಬೆಳಗಾವಿ ಜಿಲ್ಲೆ

# ಇನ್ನಿಲ್ಲವಾದ ಸೂರ್ಯ ಇವನೊಬ್ಬನೇ

**ಕೆ. ಎಲ್. ಗೋಪಾಲಕೃಷ್ಣ ರಾವ್**

''**ಸೂರ್ಯ** ಇವನೊಬ್ಬನೇ'' – ಇದು ಕನ್ನಡದ ಹಿರಿಯ ಲೇಖಕ, ಪತ್ರಕರ್ತ ಶಾ. ಬಾಲುರಾಯರ ಸೂರ್ಯನನ್ನು ಕುರಿತ ನಲವತ್ತೆಂಟು 'ಕಲ್ಪನೆ'ಗಳ ಕೃತಿಯ ಶೀರ್ಷಿಕೆ.

ನಾವು ದಿನವೂ ಆಗಸದಲ್ಲಿ ಕಾಣುವ ಸೂರ್ಯ ಬೆಳಿಗ್ಗೆ ಎದ್ದು ಸಂಜೆ ಮುಳುಗಿ ಮತ್ತೆ ಮರುದಿನ ಬೆಳಿಗ್ಗೆ ಉದಯಿಸುತ್ತಾನೆ.

ಆದರೆ ''ಸೂರ್ಯ ಇವನೊಬ್ಬನೇ'' ಕೃತಿ ರಚಯಿತನಾದ ಈ ಸೂರ್ಯ- ಶಾ. ಬಾಲುರಾವ್ - ೨೦೦೧ರ ಜನವರಿ ೧೮ ಗುರುವಾರದಂದು ಮುಳುಗಿದವ ಮತ್ತೆ ಏಳಲೇ ಇಲ್ಲ.

''ಒಂದು ದಿನ ದಾರಿ ತಪ್ಪಿ ಭೂಮಿಗೆ ಬಂದು... ನಗುತ್ತ ಮೆಟ್ಟಿಲಿಳಿದು ಪಶ್ಚಿಮದಲ್ಲಿ ಮರೆಯಾದ'' – ೭೧ ರ ಹರೆಯದಲ್ಲಿ.

ಬಾಲುರಾಯರನ್ನು ಬಲ್ಲವರಿಗೆಲ್ಲ ಅದೊಂದು ಬಲು ದುಃಖದ ಸಂಗತಿಯಾಯಿತು.

ತಮ್ಮ 'ಸೂರ್ಯ'ನ ಕಲ್ಪನೆಗಳೊಂದರಲ್ಲಿ ಶಾ. ಬಾಲುರಾಯರು ಬರೆಯುತ್ತಾರೆ : ''ದಿನವೂ ಬರುವವನು, ಸದಾ ನಗುನಗುತ ಜನರ ಜತೆಗಿರುವವನು, ಕೇಳದೆಯೆ ಕೊಡುವವನು, ಸಸ್ಯದೊಳಗಿನ ಹಸಿರು, ಧಾನ್ಯದೊಳಗಿನ ಕಾಳು, ಪುರುಷನೊಳಗಿನ ಅಗ್ನಿ, ಕಣ್ಣಿನೊಳಗಿನ ವಜ್ರ, ಕವಿತೆಯೊಳಗಿನ ರಸ....''

ಬಾಲುರಾಯರನ್ನು ಸನಿಹದಿಂದ ಬಲ್ಲ ನನಗೂ ಮತ್ತು ನನ್ನಂತೆ ಅವರ ಇತರೆಲ್ಲ ಗೆಳೆಯರಿಗೂ ಸೂರ್ಯನನ್ನು ಕುರಿತ ಮೇಲಿನ ಮಾತುಗಳು ಶಾ. ಬಾಲುರಾಯರಿಗೇ ಅನ್ವಯಿಸುತ್ತವೆಂದು ಅನ್ನಿಸದೆ ಇರದು.

ಬೆಂಗಳೂರಿನಲ್ಲಿ ಸ್ವತಃ 'ಲೇಖಕ' ಎಂಬ ಪತ್ರಿಕೆಯ ಪ್ರಕಟಣೆಯೊಂದಿಗೆ ತಮ್ಮ ಪತ್ರಿಕಾ ವೃತ್ತಿ ಪ್ರಾರಂಭಿಸಿದ ಶಾ. ಬಾಲುರಾಯರು ಅನಂತರ ಹುಬ್ಬಳ್ಳಿಯಲ್ಲಿ ಶ್ರೀ ಪಾಟೀಲ ಪುಟ್ಟಪ್ಪನವರ 'ಪ್ರಪಂಚ' ಪತ್ರಿಕೆಯಲ್ಲಿ ಸಹ-ಸಂಪಾದಕರಾಗಿ ದುಡಿದರು. ಕೆಲ ಕಾಲಾನಂತರ ದಿಲ್ಲಿಗೆ ತೆರಳಿ ಅಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿಯಲ್ಲಿ ಅನೇಕ ವರ್ಷಗಳ ಸೇವೆ ಸಲ್ಲಿಸಿ ಹಿರಿಯ ಸ್ಥಾನ ಗಳಿಸಿಕೊಂಡಿದ್ದರು. ದಿಲ್ಲಿಯಲ್ಲೇ ನೆಲೆ ನಿಂತ ಅವರಿಗೆ ಭಾರತದ ಎಲ್ಲ ಪ್ರಧಾನ ಭಾಷೆಗಳ ಸಾಹಿತ್ಯವರೇಣ್ಯರುಗಳೆಲ್ಲರ ನಿಕಟ ಪರಿಚಯವಿದ್ದಿತು. ಅವರೊಬ್ಬ ಬಹುಭಾಷಾವಿಶಾರದರೂ ಆಗಿದ್ದರು. ಸಾಹಿತ್ಯ ಅಕಾಡೆಮಿಯ 'ಇಂಡಿಯನ್ ಲಿಟರೇಚರ್' ಪತ್ರಿಕೆಯ ಸಹಯೋಗದೊಂದಿಗೆ ಅವರು ನಿಷ್ಣಾತ ಪತ್ರಕರ್ತರಾಗಿಯೂ ಹೆಸರು ಗಳಿಸಿದ್ದರು. ಅಲ್ಲದೆ ಅವರಿಗೆ ರಂಗಭೂಮಿ ಕಲೆಯಲ್ಲೂ ಅತ್ಯಾಸಕ್ತಿ ಇದ್ದಿತು. ಅವಕಾಶ ಸಿಕ್ಕಾಗಲೆಲ್ಲ ರಂಗಮಂಚದ ಮೇಲೆ ಕಾಣಿಸಿಕೊಂಡು ತಮ್ಮ ಅಭಿನಯ ಸಾಮರ್ಥ್ಯ ಪ್ರದರ್ಶಿಸುತ್ತಿದ್ದರು.



ಶ್ರೀ. ಬಾಲುರಾವ್ (ಬಲದಿಂದ ಮೂರನೆಯವರು) ಅವರೊಂದಿಗೆ ಶ್ರೀ. ಗೋಪಾಲಕೃಷ್ಣರಾವ್ ಕುಟುಂಬದವರು

೨೦೦೧ರ ಜನವರಿ ೨೦ರ ಬೆಳಗಿನ ಪತ್ರಿಕೆಯಲ್ಲಿ ''ಹಿರಿಯ ಲೇಖಕ ಶಾ. ಬಾಲುರಾವ್ ನಿಧನ''ದ ಸುದ್ದಿ ಓದಿದಾಗ ನನಗೆ ಆತ್ಮೀಯ ಮಿತ್ರರೊಬ್ಬರನ್ನು ಕಳೆದುಕೊಂಡ ದುಃಖ ಆದಂತೆಯೇ ನಮ್ಮ ಹಳೆಯ ದಿನಗಳ ನೆನಪೂ ಮರುಕಳಿಸಿತು.

ಕಳೆದ ಶತಮಾನದ ಐವತ್ತರ ದಶಕದಲ್ಲಿ ನಾನು ದಿಲ್ಲಿಯಲ್ಲಿ 'ಸೋವಿಯತ್ ದೇಶ' ಪತ್ರಿಕೆಯಲ್ಲಿ ಕೆಲಸ ಮಾಡುತ್ತಿದ್ದಾಗ ಅವರು ಸಾಹಿತ್ಯ ಅಕಾಡೆಮಿಯಲ್ಲಿ ಕೆಲಸ ಮಾಡುತ್ತಿದ್ದರು. ನಮ್ಮ ಕಾರ್ಯಾಲಯಗಳು ಸಮೀಪವಿದ್ದುದರಿಂದ ನಾನು ಹೆಸರಾಂತ ಕನ್ನಡ ಕಲಾವಿದ ಪಿ. ಎಸ್. ರಾವ್ (ಇವರೂ ಈಗ ಇಲ್ಲ) ರೊಂದಿಗೆ ಕೂಡಿಕೊಂಡು ಆಗಾಗ್ಗೆ ಬಾಲುರಾಯರನ್ನು ಸಂಧಿಸುತ್ತಿದ್ದೆ. ಅಲ್ಲದೆ ಆಗ ಬಾಲುರಾಯರು ದಿನದಿನವೂ ಸಂಜೆ ಬರುತ್ತಿದ್ದರು - ಕರೋಲ್ ಬಾಗ್‌ನಲ್ಲಿದ್ದ 'ಸುಬ್ಬರಾವ್ ಮೆಸ್'ಗೆ (ಆಗ ನಾನೂ ಒಂಟಿ, ಅವರೂ ಒಂಟಿ). ಅಲ್ಲಿ ಅವರು ಎಲ್ಲರೊಂದಿಗೂ ಬೆರೆತು, ಎಲ್ಲರನ್ನೂ ನಗಿಸುತ್ತ, ತಾವೂ ನಗುತ್ತ, ನಾನಾ ಬಗೆಯ ಕಥೆಗಳನ್ನು ಹೇಳುತ್ತ ಊಟ ಮಾಡುತ್ತಿದ್ದರು, ತಮ್ಮ ಕಲ್ಪನೆಯ ಸೂರ್ಯನಂತೆ 'ಬೆಳಕಿನ ಬೀಜ ಬಿತ್ತಿ ಬದುಕಿನ ಬೆಳೆ' ತೆಗೆಯುತ್ತಿದ್ದರು.

ಒಮ್ಮೆ ನಾನು ಊಟದ ಮಧ್ಯೆ, ''ನಮ್ಮ ಸೋವಿಯತ್ ದೇಶ ಪತ್ರಿಕೆಯಲ್ಲಿ ಪ್ರಕಟಿಸಲು ರಷ್ಯನ್ ಕವಿ ಮಯಕೋವ್‌ಸ್ಕಿಯ ಕವನವೊಂದನ್ನು ಕನ್ನಡಕ್ಕೆ ತರ್ಜುಮೆ ಮಾಡಿಕೊಡಬೇಕೆಂದು ಕೇಳಿಕೊಂಡು ಶ್ರೀ. ಗೋಪಾಲಕೃಷ್ಣ ಅಡಿಗರಿಗೆ ಕಳಿಸಿಕೊಟ್ಟಿದ್ದೇನೆ'' ಎಂದು ಬಾಲುರಾಯರಿಗೆ ಹೇಳಿದೆ. ''ನಾವು ವಾಲ್ಟ್ ವ್ಹಿಟ್‌ಮನ್‌ನ 'ಲೀವ್ಸ್ ಆಫ್ ಗ್ರಾಸ್' ಕೃತಿಯನ್ನು ಕನ್ನಡಿಸಲು ಅವರಿಗೆ ಕಳಿಸಿ ಅನೇಕ ತಿಂಗಳುಗಳೇ ಆಗಿವೆ. ಇನ್ನೂ ಉತ್ತರವಿಲ್ಲ. ಇನ್ನು ನಿಮ್ಮ ಕವನದ ಭಾಷಾಂತರ ಬರುವುದು ಯಾವಾಗಲೋ'' ಎಂದು ಅವರು ನಗಾಡಿದರು. ಆದರೆ ಅದಾದ ಹತ್ತು ದಿನಗಳಲ್ಲೇ ಅಡಿಗರು ಭಾಷಾಂತರಿಸಿದ ನಮ್ಮ ಕವನದ ಪ್ರತಿಯನ್ನು ನಾನು ಬಾಲುರಾಯರಿಗೆ ತೋರಿಸಿದೆ. ಅವರು ಅತ್ಯಾಶ್ಚರ್ಯಪಟ್ಟರು.

ಮುಂದೆ, ನಾನು ರಜೆಯ ಮೇಲೆ ಬೆಂಗಳೂರಿಗೆ ಹೊರಡಲಿದ್ದಾಗ, ''ಮೈಸೂರಿಗೆ ಹೋದರೆ ಅಡಿಗರನ್ನು ಕಂಡು ನಮ್ಮ ಭಾಷಾಂತರವನ್ನೂ ಬೇಗ ಮಾಡಿಕೊಡಬೇಕೆಂದು ಅವರಿಗೆ ನೆನಪಿಸುವಿರಾ?'' ಎಂದು ಬಾಲುರಾವ್ ಕೇಳಿದರು. ನಾನು ಹಾಗೆಯೇ ಮಾಡಿದೆ. ಅದಾದ ಕೆಲ ತಿಂಗಳುಗಳಲ್ಲೇ, ನನ್ನ ಅದೃಷ್ಟವೋ ಅನ್ನುವಂತೆ, ಅಡಿಗರ ಭಾಷಾಂತರ ಬಾಲುರಾಯರಿಗೆ ತಲುಪಿ ಅವರಿಗೆ ಮಹದಾನಂದವಾಯಿತಷ್ಟೆ ಅಲ್ಲ, ನನ್ನ ಬಗೆಗೆ ಅವರಲ್ಲಿ ಹೆಚ್ಚಿನ ಆದರ ವಿಶ್ವಾಸ ಮೂಡಿತು.

ಅದೇ ರೀತಿ ನನ್ನ ಗುರುವರ್ಯ ಶ್ರೀ. ಎಸ್. ವಿ. ರಂಗಣ್ಣನವರು ದಿಲ್ಲಿಗೆ ಬಂದಾಗಲೆಲ್ಲ ಹೆಚ್ಚಾಗಿ ನನ್ನ ಬಳಿಯೇ ಉಳಿಯುತ್ತಿದ್ದರು. ಪ್ರೊ. ಬಿ. ಎಂ. ಶ್ರೀ. ಯವರ ಮೇಲೊಂದು ಗ್ರಂಥ ಬರೆಯಲು ಯೋಚಿಸುತ್ತಿದ್ದ ಬಾಲುರಾಯರು (ಆ ವೇಳೆಗೆ ಬಾಲುರಾಯರು ಬಿ. ಎಂ. ಶ್ರೀ. ಯವರ ಮೊಮ್ಮಗಳೊಂದಿಗೆ ದಾಂಪತ್ಯ ಜೀವನ ಪ್ರಾರಂಭಿಸಿದ್ದರು) ರಂಗಣ್ಣ ನವರಿಂದ ಬಿ. ಎಂ. ಶ್ರೀ. ಯವರ ಬಗೆಗೆ ಹೆಚ್ಚಿನ ವಿಷಯ ಹಾಗೂ ವೈಯಕ್ತಿಕ ಅನಿಸಿಕೆಗಳನ್ನು ತಿಳಿಯಲು ನಮ್ಮಲ್ಲಿಗೆ ಅನೇಕ ಬಾರಿ ಬಂದುದುಂಟು.

ಮತ್ತೆ ೧೯೬೪ರಲ್ಲಿ ಆಂಗ್ಲ ಮಹಾಕವಿ ವಿಲಿಯಮ್ ಷೇಕ್‌ಸ್ಪಿಯರನ ನಾನೂರನೆಯ ವರ್ಧಂತಿಯ ನೆನಪಿಗಾಗಿ ಬಾಲುರಾಯರು ಸಂಪಾದಿಸಿ ದಿಲ್ಲಿಯ 'ಕನ್ನಡ-ಭಾರತೀ' ಪ್ರಕಟಿಸಿದ 'ಷೇಕ್‌ಸ್ಪಿಯರಿಗೆ ನಮಸ್ಕಾರ' ಕೃತಿಗೆ ಹೆಸರಾಂತ ಕನ್ನಡ ಕಲಾವಿದ ಆರ್. ಎಸ್. ನಾಯ್ಡುರವರಿಂದ ರೇಖಾಚಿತ್ರಗಳನ್ನು ಒದಗಿಸಿಕೊಡಲು ಸಹಕರಿಸುವಂತೆ ಬಾಲುರಾಯರು ನನ್ನನ್ನು ಕೇಳಿದುದೂ ಅವರು ನನ್ನಲ್ಲಿಟ್ಟಿದ್ದ ವಿಶ್ವಾಸಕ್ಕೆ ಮತ್ತೊಂದು ಕುರುಹು. ಗ್ರಂಥ ಪ್ರಕಟವಾದ ಕೂಡಲೇ ಮೊದಲ ಪ್ರತಿಗಳಲ್ಲೊಂದನ್ನು

ಆರ್. ಎಸ್. ಎನ್. ರವರ ಕೋರಿಕೆಯಂತೆ ಬಾಲುರಾಯರು ನನಗೆ (ನಾನಾಗ ಮದ್ರಾಸಿನಲ್ಲಿದ್ದೆ) ಕಳಿಸಿಕೊಟ್ಟಿದ್ದರು.

'ಷೇಕ್ಸ್ಪಿಯರಿಗೆ ನಮಸ್ಕಾರ' ಕನ್ನಡದಲ್ಲಿ ಪ್ರಕಟವಾದ ಒಂದು ಅತ್ಯದ್ಭುತ ಕೃತಿ. ಡಿವಿಜಿಯವರನ್ನೂ ಒಳಗೊಂಡಂತೆ ಕನ್ನಡದ ಹೆಸರಾಂತ ಕವಿ ಲೇಖಕರೆಲ್ಲರ ಲೇಖನ, ಕವನ, ಭಾಷಾಂತರಗಳು ಇದರಲ್ಲಿವೆ. ಜೊತೆಗೆ ಬಾಲುರಾಯರೇ ಸುದೀರ್ಘ ಪ್ರಸ್ತಾವನೆಯಲ್ಲಿ ಷೇಕ್ಸ್ಪಿಯರನ ಜೀವನ, ಕೃತಿ, ಸಾಧನೆಗಳ ಸ್ಥೂಲ ಪರಿಚಯ ನೀಡಿರುವುದಲ್ಲದೆ ಭಾಗ ಮೂರರಲ್ಲಿ ಷೇಕ್ಸ್ಪಿಯರನ ಬಹುಮಟ್ಟಿಗೆ ಎಲ್ಲ ಕೃತಿಗಳ ಬಗೆಗೂ, ಅವುಗಳ ರಚನೆಯ ಕಾಲ, ಆಕರ, ಚಾರಿತ್ರಿಕ ಕಾಲಾವಧಿ, ಕಥಾವಸ್ತು ಇತ್ಯಾದಿ ವಿವರಗಳನ್ನೊಳಗೊಂಡ ಅಮೋಘ ಸಮೀಕ್ಷೆ ನಡೆಸಿದ್ದಾರೆ. ಈ ಕೃತಿ ಬಾಲುರಾಯರ ಮೇಧಾವಿತನಕ್ಕೆ, ವ್ಯವಸ್ಥಾಪನ ಸಾಮರ್ಥ್ಯಕ್ಕೆ ಹಾಗೂ ಕೃತಿಶಕ್ತಿಗೆ ಹಿಡಿದ ಕೈಗನ್ನಡಿಯಾಗಿದೆ.

ಶ್ರೀ ಬಾಲುರಾಯರು ನನ್ನ ಬಗೆಗೆ ಇರಿಸಿಕೊಂಡಿದ್ದ ವಿಶ್ವಾಸಕ್ಕೆ ಸಾಕ್ಷಿಯಾಗಿ ನನ್ನ ನೆನಪಿನಲ್ಲಿ ಅಚ್ಚಳಿಯದೆ ಉಳಿದಿರುವ ಮತ್ತೊಂದು ಘಟನೆಯೆಂದರೆ - ಕನ್ನಡದ ವರಕವಿ ಶ್ರೀ ಕೆ. ಎಸ್. ನರಸಿಂಹಸ್ವಾಮಿಯವರು ದಿಲ್ಲಿಯಲ್ಲಿ ಸಾಹಿತ್ಯ ಅಕಾಡೆಮಿ ಏರ್ಪಡಿಸಿದ್ದ ಅಖಿಲ-ಭಾರತ ಕವಿಗೋಷ್ಠಿಯೊಂದರಲ್ಲಿ ಭಾಗವಹಿಸಿದ ನಂತರ ಬೆಂಗಳೂರಿಗೆ ತಮ್ಮ ಪತ್ನಿಸಮೇತರಾಗಿ ಹಿಂದಿರುಗುವಾಗ ಮಾರ್ಗ ಮಧ್ಯೆ ಮದ್ರಾಸಿನಲ್ಲಿ ಒಂದು ದಿನ ನಮ್ಮ ಮನೆಯಲ್ಲಿ ತಂಗುವಂತೆ (ಆ ಕಾಲದಲ್ಲಿ ಬೆಂಗಳೂರು-ದಿಲ್ಲಿ ಮಧ್ಯೆ ನೇರ ರೈಲು ಸಂಪರ್ಕ ಇನ್ನೂ ಏರ್ಪಟ್ಟಿರಲಿಲ್ಲ) ಬಾಲುರಾಯರು ಏರ್ಪಡಿಸಿಕೊಟ್ಟುದು. ಇದರಿಂದ ನಮ್ಮ ಮನೆಯವರಿಗಾದ ಆನಂದ ಅಷ್ಟಿಷ್ಟಲ್ಲ. ಆಗ ಕನ್ನಡದ ಖ್ಯಾತ ಕವಿ-ಲೇಖಕ ಶ್ರೀ ಎಸ್. ದಿವಾಕರ್‌ರವರೂ ಮದ್ರಾಸ್‌ನಲ್ಲಿದ್ದರು. ನಾವು ನಮ್ಮ ಕೆಲವು ಸಾಹಿತ್ಯ ಮಿತ್ರರನ್ನು ಆಹ್ವಾನಿಸಿ ನಮ್ಮ ಮನೆಯಲ್ಲಿ ಶ್ರೀ ನರಸಿಂಹ ಸ್ವಾಮಿಗಳ 'ಕಾವ್ಯವಾಚನ'ವನ್ನು ಏರ್ಪಡಿಸಿದ್ದೆವು. ಇಂಥ ಅಮೋಘ ಅವಕಾಶವನ್ನು ನಮಗೆ ಒದಗಿಸಿಕೊಟ್ಟ ಶ್ರೀ ಬಾಲುರಾಯರನ್ನು ನಾವು ಸದಾ ಸ್ಮರಿಸುತ್ತಿದ್ದೆವು.

*ಶ್ರೀ ಬಾಲುರಾಯರು ನವಕರ್ನಾಟಕದ ಬಗೆಗೂ ಅಪಾರ ಮೆಚ್ಚುಗೆ ಗೌರವ ಇರಿಸಿಕೊಂಡಿದ್ದರು. ನವಕರ್ನಾಟಕದವರು 'ವಿಶ್ವ ಕಥಾ ಕೋಶ' ಪ್ರಕಟಣೆಯ ಕಾರ್ಯ ಕೈಕೊಂಡಾಗ ಬಾಲುರಾಯರು ತಮ್ಮ ವಿಶಾಲ ವ್ಯಾಪ್ತಿಯ ಸಂಪರ್ಕ-ಪರಿಚಯಗಳನ್ನು ಬಳಸಿಕೊಂಡು ನಾನಾ ದೇಶಗಳ ಅನೇಕ ಸ್ವಾರಸ್ಯಕರ ಕಥೆಗಳನ್ನು ಸಂಗ್ರಹಿಸಿಕೊಡುವುದರಲ್ಲಷ್ಟೆ ಅಲ್ಲ ವಿವಿಧ ಲೇಖಕರಿಂದ ಹಾಗೂ ಪ್ರಕಾಶಕರುಗಳಿಂದ ಅವಶ್ಯ ಪರವಾನಗಿಗಳನ್ನು ಒದಗಿಸಿಕೊಡುವುದರಲ್ಲೂ ತುಂಬ ಮಟ್ಟಿಗೆ ನೆರವಾಗಿದ್ದರು.*

ಕಾವ್ಯವಾಚನವೆಂದ ಕೂಡಲೇ ನನಗೆ ಮಾಸ್ಕೋದಲ್ಲಿ ನಾವು ೧೯೮೮ರ ಡಿಸೆಂಬರ್ ೧೫ ರಂದು 'ಹಿಂದೂಸ್ಥಾನೀ ಸಮಾಜ'ದ ಆಶ್ರಯದಲ್ಲಿ ಏರ್ಪಡಿಸಿದ್ದ ಕಾವ್ಯವಾಚನದ ನೆನಪು ಬರುತ್ತದೆ. ಅಲ್ಲಿ ಕಾವ್ಯವಾಚನ ಮಾಡಿದವರು ಶಾ. ಬಾಲುರಾಯರು. ಅವರು ಅಲ್ಲಿಗೆ ಹೆಸರಾಂತ ಪಂಜಾಬಿ ಲೇಖಕ ಭೀಷಮ್ ಸಾಹ್ನಿಯವರ ಜೊತೆ ಸೋವಿಯತ್ ಲೇಖಕರ ಸಂಘದ ಅತಿಥಿಯಾಗಿ ಆಗಮಿಸಿದ್ದರು. ಬಾಲುರಾಯರು ಕನ್ನಡ ಕಾವ್ಯ ರಚನೆಯಲ್ಲಿ ಆಧುನಿಕ ಪ್ರವೃತ್ತಿಗಳ ಬಗೆಗೆ ಮಾತನಾಡಿ ತಮ್ಮವೇ ಕೆಲವು ಕನ್ನಡ ಹಾಗೂ ಇಂಗ್ಲಿಷ್ ಕವನಗಳನ್ನು ಓದಿ ಹೇಳಿದರು. ಅನಂತರ ಅವರಿಗೆ ನಮ್ಮ ಮನೆಯಲ್ಲಿ ಅನ್ನ-ತಿಳಿಸಾರಿನ ಭರ್ಜರಿ ಔತಣ! ಅದು ಅವರಿಗೆ ತುಂಬ ಖುಷಿ ಕೊಟ್ಟಿತು. ಕೊನೆಯಲ್ಲಿ ತಾವೂ ಇರುವಂತೆ ನಮ್ಮ ಕುಟುಂಬದವರೆಲ್ಲರ ಛಾಯಾಚಿತ್ರ ತೆಗೆದು, ದಿಲ್ಲಿಗೆ ಹಿಂದಿರುಗಿದ ನಂತರ ಅದರ ಒಂದು ಪ್ರತಿಯನ್ನು ನಮಗೆ ಕಳಿಸಿಕೊಡಲು ಬಾಲುರಾಯರು ಮರೆಯಲಿಲ್ಲ.

ಇಂತಹ ಸಹೃದಯಿ 'ಸೂರ್ಯ ಇವನೊಬ್ಬನೇ' ಇನ್ನಿಲ್ಲವಾದುದು ಕನ್ನಡ ಸಾರಸ್ವತ ಲೋಕಕ್ಕಾದ ಒಂದು ಅಪಾರ ನಷ್ಟವೇ ಸರಿ. ಆದರೆ ಅವರು ಅವರ ಕೃತಿಗಳಲ್ಲಿ ಜೀವಂತ, ಎಂಬುದೊಂದೇ ಸಮಾಧಾನದ ಸಂಗತಿ.

**ಶಾ. ಬಾಲುರಾಯರ ಕೆಲವು ಮುಖ್ಯ ಕೃತಿಗಳು**

೧. ಸೂರ್ಯ ಇವನೊಬ್ಬನೇ (ಕಾವ್ಯ)
೨. ಬೆಕ್ಕು - ಬಾವಿ (ನಾಟಕ)
೩. ಕೈಗೆ ಬಂದ ತುತ್ತು (ನಾಟಕ)
೪. ಉಮರ್ ಖಯ್ಯಾಮನ ರುಬಾಯತ್‌ಗಳು (ಅನುವಾದಿತ)
೫. ಅನ್ನಾ ಅಹ್ಮತೋವಾ (ಅನುವಾದಿತ)
೬. ಸುಭಾಷ್ ಮುಖ್ಯೋಪಾಧ್ಯಾಯರ ಕವನಗಳು (ಅನುವಾದಿತ)
೭. ದಿ ಸ್ಟಿಲ್ ಸ್ಮಾಲ್ ವಾಯ್ಸ್ - (ಆಂಗ್ಲಭಾಷೆಯಲ್ಲಿ)
೮. ಷೇಕ್ಸ್ಪಿಯರಿಗೆ ನಮಸ್ಕಾರ - ಸಂಪಾದಿತ

**ಕೆ. ಎಲ್. ಗೋಪಾಲಕೃಷ್ಣ ರಾವ್**
ನಂ. ೨೬೧, ೨ನೇ ಕ್ರಾಸ್, ಸಿ.ಟಿ. ಬೆಡ್, ತ್ಯಾಗರಾಜನಗರ
ಬೆಂಗಳೂರು - ೫೬೦ ೦೨೮

**Statement about ownership and other particulars about newspaper**

FORM IV

| | | |
|---|---|---|
| 1. Place of publication | : | Bangalore |
| 2. Periodicity of its publication | : | Monthly |
| 3. Printer's Name | : | R. S. Rajaram |
| Nationality | : | Indian |
| Address | : | Navakarnataka Publications (P) Ltd. Embassy Centre Crescent Road, P. B. No.5159 Bangalore - 560 001 |
| 4 Publisher's Name | : | R. S. Rajaram |
| Nationality | : | Indian |
| Address | : | Navakarnakata Publications (P) Ltd. Embassy Centre, Crescent Road, P. B. No. 5159 Bangalore - 560 001 |
| 5. Editor's Name | : | G. Ramakrishna |
| Nationality | : | Indian |
| Address | : | Navakarnakata Publications (P) Ltd. Embassy Centre Crescent Road, P. B. No. 5159 Bangalore - 560 001 |
| 6. Name and address of individuals who own the newspaper and partners and shareholders holding more than one percent of the total capital | : | Navakarnakata Publications (P) Ltd. Embassy Centre Crescent Road P. B. No. 5159 Bangalore - 560 001 (Sole Proprietors) |

I, R. S. Rajaram, hereby declare that the particulars given above are true to the best of my knowledge and belief.

Sd/-
R. S. Rajaram
Publisher

Date : 28-2-2001

# ವಿಜ್ಞಾನದ ವಿದ್ಯಾರ್ಥಿ ದೃಷ್ಟಿಯಲ್ಲಿ ಸ್ವಾಮಿ ವಿವೇಕಾನಂದರು



ಸ್ವಾಮಿ ವಿವೇಕಾನಂದರು (೧೮೬೩-೧೯೦೨) ತಮ್ಮ ಮಾತು ಮತ್ತು ಕೃತಿಗಳಿಂದ ನಮ್ಮೆದುರು ನಾವೆಲ್ಲರೂ ಅನುಷ್ಠಾನಕ್ಕೆ ತರಬಹುದಾದ ಒಂದು ಆದರ್ಶವನ್ನು ಕಡೆದಿಟ್ಟಿದ್ದಾರೆ. ಇದು ವೈಚಾರಿಕತೆ, ವೈಜ್ಞಾನಿಕತೆ, ನೈತಿಕತೆ, ಮತ್ತು ಪ್ರೇಮಶೀಲತೆಗಳ ಮಧುರ ರಸಪಾಕ. ಎಂದೇ ಇವರು ವಿಚಾರವಂತನಿಗೆ ಅನುಸರಣೀಯ ನಿದರ್ಶನಗಳ ಅಕ್ಷಯ ಭಂಡಾರ, ವಿಜ್ಞಾನವಂತನಿಗೆ ವೈಜ್ಞಾನಿಕ ಮನೋಧರ್ಮದ ಹರಿಕಾರ, ನೀತಿವಂತನಿಗೆ ಜೀವನ ಮೌಲ್ಯಗಳ ಸಮೃದ್ಧ ಆಕರ, ಮತ್ತು ಭಕ್ತನಿಗೆ ಭಗವದಾರಾಧನೆಯ ಸಾಕಾರ. ಇಲ್ಲಿ 'ಭಗವಂತ' ಎನ್ನುವುದು ಸಕಲ ಶಕ್ತಿಗಳ ಮೂಲವಾಗಿರುವ ನಿಸರ್ಗವನ್ನು ಪ್ರತೀಕಿಸುತ್ತದೆ.

ಲೌಕಿಕ ಅಥವಾ ಸಾಧಾರಣ ನೆಲೆಯಲ್ಲಿ ನಾವು ವೈಚಾರಿಕತೆ ಮುಂತಾದ ವಿಭಿನ್ನ ಮನಃಸ್ಥಿತಿಗಳನ್ನು ಉಲ್ಲೇಖಿಸುವುದುಂಟು. ಈ ವಿಭೇದೀಕರಣ ನಮ್ಮ ಸೀಮಿತ ಸಾಮರ್ಥ್ಯದ ದ್ಯೋತಕವೇ ವಿನಾ ವಸ್ತುಸ್ಥಿತಿಯ ಯಥಾ ಲಕ್ಷಣವಲ್ಲ ಎಂಬುದನ್ನು ಸ್ವಾಮೀಜಿಯವರು ತಮ್ಮ ನಡೆ ನುಡಿ ಬಗೆಗಳಿಂದ ತೋರಿಸಿಕೊಟ್ಟಿದ್ದಾರೆ. ಎಂದೇ ಅವರ ಸಮಗ್ರ ಕೃತಿಗಳು ಒಬ್ಬ ಮಾನವಿಕ ವಿದ್ಯಾರ್ಥಿಗೆ ಎಷ್ಟೋ ಅಷ್ಟೇ ಒಬ್ಬ ವಿಜ್ಞಾನ ವಿದ್ಯಾರ್ಥಿಗೂ ಉದ್ಬೋಧಕಗಳಾಗಿವೆ. ಇರುವುದೊಂದೇ ಬೆಟ್ಟ-ಜ್ಞಾನಗಿರಿ; ಅದರ ಶೃಂಗಕಿವೆ ಪಥಗಳು ಹಲವು!

ನಮ್ಮ ಶೃಂಗಾಭಿಯಾನ ಸುಗಮವಾಗುವ ಸಲುವಾಗಿ ಈಗ ವೈಚಾರಿಕತೆ ವೈಜ್ಞಾನಿಕತೆ ನೈತಿಕತೆ ಪ್ರೇಮಶೀಲತೆ ಎಂಬ ಚತುರ್ಗುಣಗಳ ಅರ್ಥವ್ಯಾಪ್ತಿಯನ್ನು ಗಮನಿಸೋಣ.

**ವೈಚಾರಿಕತೆ**

ಸೃಷ್ಟಿಯಲ್ಲಿ ಘಟಿಸುವ ಪ್ರತಿಯೊಂದು 'ಕಾರ್ಯ'ದ ಹಿನ್ನೆಲೆಯಲ್ಲಿ ಒಂದು 'ಕಾರಣ'ವಿದೆ, ಮತ್ತು ಪ್ರತಿಯೊಂದು 'ಕಾರಣ'ಕ್ಕೆ ಫಲವಾಗಿ ಒಂದು 'ಕಾರ್ಯ'ವಿದೆ ಎಂಬ ಕಾರ್ಯ-ಕಾರಣ ಸಂಬಂಧದ ಅರಿವಿಗೆ ವೈಚಾರಿಕತೆ ಎಂದು ಹೆಸರು. ಮಾನವನ ಸಮಸ್ತ ಕ್ರಿಯಾಕಲಾಪಗಳನ್ನೂ ಕಾರ್ಯ-ಕಾರಣ ಪಾತಳಿಯಲ್ಲಿ ಅರ್ಥವಿಸುವುದು ಸಾಧ್ಯವಿದೆ ಎಂಬುದು ವೈಚಾರಿಕತೆಯ ನಿಲುವು. ಸದ್ಯ ಯಾವುದೇ ಗೋಚರ ಕಾರ್ಯದ ಹಿನ್ನೆಲೆ – ಕಾರಣ ನಮ್ಮ ಅರಿವಿಗೆ ಬಂದಿರದಿದ್ದರೆ, ಅಂತೆಯೇ ಯಾವುದೇ ಕಾರಣ ಕುರಿತ ಕಾರ್ಯವನ್ನು ನಮಗೆ ಪತ್ತೆ ಮಾಡಲಾಗದಿದ್ದರೆ, ಆಯಾ ಕಾರಣದ ಅಥವಾ ಕಾರ್ಯದ ಶೋಧನೆಗೆ ಯುಕ್ತ ಪ್ರಯತ್ನವನ್ನು ಪ್ರಯುಕ್ತಿಸಬೇಕೇ ಹೊರತು, ಮೊದಲನೆಯದನ್ನು ಕಾರಣರಹಿತ ಕಾರ್ಯವೆಂದೂ, ಎರಡನೆಯದನ್ನು ಕಾರ್ಯರಹಿತ ಕಾರಣವೆಂದೂ ತೀರ್ಮಾನಿಸುವುದು ಸಲ್ಲ ಎಂದು ವೈಚಾರಿಕತೆಗೆ ಗೊತ್ತಿದೆ. ತರ್ಕ ವಿಧಿಸುವ ಮಾರ್ಗವೇ ವೈಚಾರಿಕತೆ.

**ವೈಜ್ಞಾನಿಕತೆ**

ಮಾನವಮತಿ ನಿಸರ್ಗದ ಜೊತೆ ಕಾರ್ಯ-ಕಾರಣ ಪಾತಳಿಯಲ್ಲಿ, ಅಂದರೆ ವೈಚಾರಿಕವಾಗಿ, ವರ್ತಿಸುವಾಗ ಆರು ವಿವಿಕ್ತ ಸೋಪಾನಗಳು ಏರ್ಪಡುತ್ತವೆ: ಸಮಸ್ಯಾನಿರೂಪಣೆ, ಮಾಹಿತಿ ಸಂಗ್ರಹಣೆ, ವಿಶ್ಲೇಷಣೆ, ವಾದರೂಪಣೆ, ಪ್ರಾಯೋಗಿಕ ತಪಾಸಣೆ, ಮತ್ತು ಸಿದ್ಧಾಂತ ಮಂಡನೆ. ಈ ವಿವಿಧ ಹಂತಗಳಲ್ಲಿ ತರ್ಕದಷ್ಟೇ ಪ್ರಧಾನ ಪಾತ್ರವನ್ನು ಪ್ರಯೋಗವೂ ವಹಿಸುತ್ತದೆ. ತರ್ಕ ಎಷ್ಟೇ ಸಮಂಜಸವಾಗಿದ್ದರೂ ಪ್ರಯೋಗದಲ್ಲಿ ವಾದ ಉತ್ತೀರ್ಣವಾಗದಿದ್ದರೆ ಇದರ ನೆಲೆ ಕಸದ ಬುಟ್ಟಿ! ಬೇರೆಯೇ ವಾದವನ್ನು ರೂಪಿಸಿ ಮತ್ತೆ ಇದನ್ನು ತರ್ಕದ ನಿಕಷಕ್ಕೆ ಒರೆ ಹಚ್ಚಬೇಕಾಗುತ್ತದೆ. ಹೀಗೆ ಪ್ರಾಯೋಗಿಕ ಪರೀಕ್ಷೆಯಲ್ಲಿ ಅಂತಿಮವಾಗಿ ತೇರ್ಗಡೆಯಾಗುವ ವಾದಕ್ಕೆ ಸಿದ್ಧಾಂತವೆಂದು ಹೆಸರು: ನಿಸರ್ಗ ಮಾನವನ ಎದುರು ಒಡ್ಡುವ ವಿಶಿಷ್ಟ ಸಮಸ್ಯೆಗೆ ಈ ಸಿದ್ಧಾಂತ ನಿರ್ದಿಷ್ಟ ಪರಿಹಾರ. ಈ ತೆರನಾಗಿ ಮುನ್ನಡೆಯುವಾಗ ಸಂಚಿತವಾಗುವ ಅರಿವಿಗೆ ವಿಜ್ಞಾನ ಎಂದು ಹೆಸರು. ನೈಸರ್ಗಿಕ ವಿದ್ಯಮಾನಗಳಿಗೆ ಮಾನವಮತಿ ವೀಕ್ಷಣೆ - ತರ್ಕ- ಪ್ರಯೋಗಾಧಾರಿತವಾಗಿ ಬರೆಯುವ ಭಾಷ್ಯವಿದು. ವ್ಯಕ್ತಿಯು ವಿಜ್ಞಾನ ಕಾರ್ಯದಲ್ಲಿ ಮಗ್ನನಾಗಿರುವಾಗ ಆತನ ಮನಸ್ಸು ತಳೆಯುವ ಸ್ಥಿತಿಗೆ ವೈಜ್ಞಾನಿಕ ಮನೋಧರ್ಮ, ಅಥವಾ ಸಂಕ್ಷೇಪವಾಗಿ, ವೈಜ್ಞಾನಿಕತೆ ಎನ್ನುತ್ತೇವೆ. ವೈಚಾರಿಕತೆ ವಿಧಿಸುವ ಪ್ರಾಯೋಗಿಕ ಮಾರ್ಗವೇ ವೈಜ್ಞಾನಿಕತೆ.

**ನೈತಿಕತೆ**

ಮನುಷ್ಯ ಸಮಾಜಜೀವಿ. ವ್ಯಕ್ತಿಗಳ ನಡುವಿನ ನಿರಂತರ ಅಂತರಕ್ರಿಯೆಗಳ ಜೇನುಗೂಡೇ ಸಮಾಜ. ಇಲ್ಲಿ ವ್ಯಕ್ತಿಯು ಸಮಾಜದ ಸಮಗ್ರತೆಯನ್ನೂ ಸಮಾಜವು ವ್ಯಕ್ತಿಯ ಹಿತವನ್ನೂ ಸದಾ ಪೋಷಿಸುತ್ತಿರಬೇಕು. ಸುಖೀ ಜೀವನದ ಪ್ರಮುಖ ಆವಶ್ಯಕತೆ ಈ ವ್ಯಷ್ಟಿ-ಸಮಷ್ಟಿ ಪರಸ್ಪರ ಅವಲಂಬನೆ. ಈ ಭಾವವನ್ನು ವ್ಯಕ್ತಿಯಲ್ಲಿ ಪ್ರೇರಿಸುವ ಮೂಲಬಲಕ್ಕೆ ಧರ್ಮ ಎಂದು ಹೆಸರು. ಇದೊಂದು ಅಮೂರ್ತ ಗುಣ. ಇದರ ಪ್ರಕಟಿತ ರೂಪ ನೈತಿಕತೆ.

**ಪ್ರೊ. ಜಿ. ಟಿ. ನಾರಾಯಣ ರಾವ್**

ವ್ಯಕ್ತಿಯ ನಡವಳಿಕೆಗಳಲ್ಲಿ ನೈತಿಕತೆ ಸದಾ ಮುಂಚೂಣಿಯಲ್ಲಿರಬೇಕು. ಆಲ್ಬರ್ಟ್ ಐನ್‌ಸ್ಟೈನ್ (೧೮೭೯-೧೯೫೫) ಬರೆದಿದ್ದಾರೆ (೧೯೫೦): ''ನಮ್ಮ ಕ್ರಿಯೆಗಳಲ್ಲಿ ನೈತಿಕ ಪಾರಿಶುದ್ಧ್ಯ ಕಾಪಾಡಿಕೊಳ್ಳಲು ಶ್ರಮಿಸುವುದೇ ಅತ್ಯಂತ ಪ್ರಮುಖ ಮಾನವ ಸಾಹಸ. ನಮ್ಮ ಆಂತರಿಕ ಸಮತೋಲ, ಮತ್ತು ಖುದ್ದು ನಮ್ಮ ಅಸ್ತಿತ್ವ ಕೂಡ, ಅದನ್ನು ಅವಲಂಬಿಸಿವೆ. ನಾವೆಸಗುವ ಕ್ರಿಯೆಗಳಲ್ಲಿಯ ನೈತಿಕ ಪಾರಿಶುದ್ಧ್ಯವೊಂದೇ ಜೀವನಕ್ಕೆ ಸೌಂದರ್ಯವನ್ನೂ ಗಾಂಭೀರ್ಯವನ್ನೂ ಆವಾಹಿಸಬಲ್ಲದು.''

ವೈಚಾರಿಕತೆ, ವೈಜ್ಞಾನಿಕತೆಗಳಲ್ಲಿ ಬುದ್ಧಿಯ ಪಾತ್ರ ಪ್ರಧಾನ. ಇದೊಂದೇ ಆದರೆ ವೈಚಾರಿಕತೆ ನಿಷ್ಕ್ರಿಯತೆಯಾಗಿಯೂ ವೈಜ್ಞಾನಿಕತೆ ಶೋಷಕತೆಯಾಗಿಯೂ ವಿಕೃತಗೊಳ್ಳುತ್ತವೆ. ಹೀಗಾಗದಂತೆ ಮಾಡಲು ಇವೆರಡಕ್ಕೂ ನೈತಿಕತೆಯ ಹೃದಯಸಿಂಚನ ಅತ್ಯಗತ್ಯ. ಆದ್ದರಿಂದ ವೈಚಾರಿಕತೆ-ವೈಜ್ಞಾನಿಕತೆಗಳಿಗೆ ಮನುಷ್ಯತ್ವವನ್ನು ಆವಾಹಿಸುವ ಮತ್ತು ತನ್ಮೂಲಕ ಸಮಾಜಜೀವನವನ್ನು ಸುಖಮಯವಾಗಿಸುವ ಸ್ನೇಹನವೇ ನೈತಿಕತೆ.

**ಪ್ರೇಮಶೀಲತೆ**

ನೈತಿಕತೆಯ ಆಧಾರಶ್ರುತಿ ಪ್ರೇಮ – ಅಹೇತುಕ ಪ್ರೀತಿ. ''ಪ್ರೇಮವಿಲ್ಲದ ಗಾನ ಕೇಳನೋ ಹರಿ,'' ಎನ್ನುವಲ್ಲಿ ಪುರಂದರದಾಸರು ಪ್ರೇಮ ಪದದ ವ್ಯಾಖ್ಯಾನ ಮಾಡಿದ್ದಾರೆ. **ಪ್ರೇಮ ತ್ರಿಕೋನ** ಎನ್ನುವ ಲೇಖನದಲ್ಲಿ (ಸ್ವಾಮಿ ವಿವೇಕಾನಂದರ ಸಮಗ್ರ ಕೃತಿಗಳು, ಮೂರನೆಯ ಸಂಪುಟ) ಸ್ವಾಮೀಜಿಯವರು ಪ್ರೇಮ ತ್ರಿಕೋನ ಕುರಿತು ನೀಡಿರುವ ವಿವರಣೆ ಮನನೀಯವಾಗಿದೆ. ಸಾರಾಂಶವಿದು:

ಮೂರು ಕೋನಗಳು ಇಲ್ಲದೇ ತ್ರಿಕೋನಕ್ಕೆ ಹೇಗೋ ಹಾಗೆ ಮೂರು ವೈಲಕ್ಷಣ್ಯಗಳಿಲ್ಲದೇ ಪ್ರೇಮಕ್ಕೆ ಅಸ್ತಿತ್ವವಿಲ್ಲ. ಮೊದಲನೆಯ ಕೋನ ನಿರ್ಮೋಹ. ಪ್ರೇಮವೆಂಬುದು ಕೊಟ್ಟು ಪಡೆದುಕೊಳ್ಳುವ ವ್ಯಾಪಾರ ವಸುವಲ್ಲ! ಯಾರು ತಮ್ಮ ಇಚ್ಛಿತ ಕಾಮನೆಗಳು ಈಡೇರಬೇಕೆಂಬ ಬಯಕೆಯಿಂದ, ಪರಿಶುದ್ಧ

ಆದರ್ಶವಾದ ಭಗವಂತನನ್ನು (=ಶಕ್ತಿ ಸಮಷ್ಟಿ ಆಗಿರುವ ವಿಶ್ವ) ಪ್ರೇಮಿಸಿ ಆರಾಧಿಸುವರೋ ಅವರ ಲಕ್ಷ್ಯ ದೇವರಲ್ಲ, ಬದಲು, ವರ ಮತ್ತು ಇದರಿಂದ ಪ್ರಾಪ್ತವಾಗುವ ಅಂತಸ್ತು. ಭಿಕ್ಷಾಟನೆ ಎಂದೂ ನೈಜ ಪ್ರೇಮದ ಭಾಷೆ ಅಲ್ಲ. ಭಗವಂತ ಪ್ರೇಮಪಾತ್ರ ನಾದ್ದರಿಂದ ಭಕ್ತ ಆತನನ್ನು ಪ್ರೇಮಿಸುತ್ತಾನೆ. ಇಲ್ಲಿ ಪ್ರೇಮದ ಸಲುವಾಗಿಯೇ ಪ್ರೇಮ ಕ್ರಿಯಾಶೀಲ ವಾಗಿರುತ್ತದೆ. ಸುಂದರ ದೃಶ್ಯವನ್ನು ವೀಕ್ಷಿಸಿದಾಗ ನಮ್ಮಲ್ಲಿ ತಂತಾನೇ ಸ್ಫುರಿಸುವ ಆನಂದದಂತೆ ಈ ಪ್ರೇಮವಿರುವುದು; ವೀಕ್ಷಕನಿಂದ ಆ ದೃಶ್ಯ ಏನೂ ಶುಲ್ಕವನ್ನು ಅಪೇಕ್ಷಿಸುವುದಿಲ್ಲ, ಹೇಗೋ ಹಾಗೆ.

ಎರಡನೆಯ ಕೋನ ನಿಶ್ಶತ್ರು. ಪರಿಶುದ್ಧ ಪ್ರೇಮಕ್ಕೆ ವೈರಿಗಳೇ ಇಲ್ಲ. ಒಬ್ಬ ಪ್ರೇಮಿಯ ಅತ್ಯುನ್ನತ ಲಕ್ಷ್ಯವಿದು. ನಾವು ಪ್ರೇಮಿಸುವ ವಸ್ತು ನಮ್ಮ ಪರಮೋನ್ನತ ಆದರ್ಶವಾಗುವ ತನಕ ನೈಜ ಪ್ರೇಮವೆಂದೂ ಮೊಳೆಯದು. ಪ್ರತಿಯೊಬ್ಬನ ಇಂಥ ಮಹೋನ್ನತ ಆದರ್ಶಕ್ಕೆ ದೇವರು ಎಂದು ಹೆಸರು. ನಾವು ಪ್ರೇಮಿಸುವ ಮತ್ತು ಪ್ರೇಮಿಸಬಲ್ಲ ದೇವರ ಬಗೆಗಿನ ಪರಿಪೂರ್ಣ ಚಿತ್ರವನ್ನು ಸೌಂದರ್ಯ, ತಾದಾತ್ಮ್ಯ ಅಧಿಕಾರ ಮುಂತಾದ ಸಮಸ್ತ ಭಾವಗಳ ಸಂಶ್ಲೇಷಣೆ ಮಾತ್ರ ನೀಡಬಲ್ಲುದು.

ಮೂರನೆಯ ಕೋನ ನಿರ್ಭಯ. ಪ್ರೇಮಕ್ಕೆ ಭಯವೆಂದರೇನೆಂದೇ ಗೊತ್ತಿಲ್ಲ. ನೇಸರು ಕತ್ತಲೆಯನ್ನು ಬಣ್ಣಿಸಬಲ್ಲುದೇ? ಭಯಾಧಾರಿತ ದೇವರ ಆರಾಧಕರು ಅಭಿವೃದ್ಧಿ ಶ್ರೇಣಿಯಲ್ಲಿ ತೀರ ಕೆಳಗಿನ ಮೆಟ್ಟಿಲಿ ನಲ್ಲಿರುವವರು. ಭಗವಂತನಿಗೆ ಹೆದರಿ ಯಾವುದೇ ಕೆಲಸದಲ್ಲಿ ತೊಡಗುವ ಮನಃಸ್ಥಿತಿಗಿಂತ ಶ್ರೇಯಸ್ಕರ ವಾದದ್ದು ಆತನನ್ನು ಪ್ರೇಮಿಸುತ್ತ ಕಾರ್ಯೋದ್ಯುಕ್ತವಾಗುವ ನಿಲುವು. ಹೃದಯದಲ್ಲಿ ಭಯ ಹುದುಗಿರುವತನಕ ಪ್ರೇಮ ಜನುಗದು. ವಿಶ್ವ ಬೇರೆ, ನಾನು ಬೇರೆ ಎಂಬ ಸ್ವಾರ್ಥ ಚಿಂತನೆಯೇ ಭಯದ ಮೂಲ.

ನಾನು, ನನ್ನದು, ನನಗೆ ಮುಂತಾದ ಯೋಚನೆಗಳನ್ನು ನಿರ್ಮೂಲಿಸಿದಾಗ ಭಯವಿಲ್ಲವಾಗುತ್ತದೆ. ಅಲ್ಲಿ ಪ್ರೇಮದ ಸೆಲೆ ಜುಳುಜುಳಿಸುತ್ತದೆ.

*ಪ್ರೇಮತ್ರಿಕೋನಕ್ಕೆ ಶೃಂಗಗಳು ಮೂರಿಹವು :*
*ನಿರ್ಮೋಹ, ನಿಶ್ಶತ್ರು, ನಿರ್ಭಯಂ - ಪ್ರತಿಫಲದ*
*ಕಾಮನೆಯ ತೊರೆ, ಮೈತ್ರಿಯನು ಮೆರೆ, ಸದಾ ಧೀರ*
*ಧೀಮಂತನಾಗಿರಲು ಕದವ ತೆರೆ ಅತ್ರಿಸೂನು.*

ಒಬ್ಬ ಸಭ್ಯ ಪುರುಷನಲ್ಲಿ ಬೆಸುಗೆಗೊಂಡಿರುವ ನಾಲ್ಕು ಗುಣಗಳ - ವೈಚಾರಿಕತೆ, ವೈಜ್ಞಾನಿಕತೆ, ನೈತಿಕತೆ, ಪ್ರೇಮಶೀಲತೆ - ಸಂಯುಕ್ತ ಫಲಕ್ಕೆ ಮಾನವೀಯತೆ ಎಂದು ಹೆಸರು. ಮಾನವೀಯತೆಯಲ್ಲಿ ಉತ್ತುಂಗ ಶಿಖರ ತಲಪಿ ಜನಕೋಟಿಗೆ ಸದಾ ದಾರಿದೀಪವಾಗಿರುವವರನ್ನು ಸಂತರೆನ್ನುತ್ತೇವೆ. ಉದಾಹರಣೆಗೆ, ಬುದ್ಧ, ಶಂಕರ, ಬಸವಣ್ಣ, ಸ್ವಾಮಿ ವಿವೇಕಾನಂದ, ಗಾಂಧಿ ಮೊದಲಾದ ಮಾನ್ಯರು. ಇವರೆಲ್ಲರೂ ಮೂರ್ತಿವೆತ್ತ ಶ್ರೇಷ್ಠ ಮಾನವೀಯತೆಗಳು. ಸಂತವಾಣಿ ನಿತ್ಯಸತ್ಯ ಮತ್ತು ಸದಾ ಪ್ರಸ್ತುತ. ಏಕೆಂದರೆ ಅವರು ತತ್ಕಾಲದಲ್ಲಿ ಸಾರ್ವಕಾಲಿಕತೆಯನ್ನೂ ತದ್ದೇಶದಲ್ಲಿ ಸಾರ್ವದೈಶಿಕತೆ ಯನ್ನೂ ಸಾಂತದಲ್ಲಿ ಅನಂತವನ್ನೂ ದರ್ಶಿಸಬಲ್ಲ ದ್ರಷ್ಟಾರರು:

*ಏಕದಿಂದಲನೇಕ ಮತ್ತನೇಕದಿನೇಕ-*
*ವೀ ಕ್ರಮವೆ ವಿಶ್ವದಂಗಾಂಗ ಸಂಬಂಧ*
*ಲೋಕದಲಿ ಜಾತಿಯಲಿ ವ್ಯಕ್ತಿಯಲಿ ಸಂಸ್ಥೆಯಲಿ*
*ಸಾಕಲ್ಯದರಿವಿರಲಿ ಮಂಕುತಿಮ್ಮ.*

ಸ್ವಾಮಿ ವಿವೇಕಾನಂದರ ಜೀವನದಲ್ಲಿ ಹೇಗೆ ಮಾನವೀಯತೆಯ ಎಲ್ಲ ಲಕ್ಷಣಗಳೂ ಪ್ರಕಟವಾಗುತ್ತವೆ ಎಂಬುದನ್ನೀಗ ಕೆಲವು ನಿದರ್ಶನಗಳ ಮೂಲಕ ಪರಿಶೀಲಿಸೋಣ.

೧. **ವೈಚಾರಿಕತೆ** : ಸಂಪುಟ ೫ರಲ್ಲಿ **ಪವಾಡಗಳು** ಎಂಬ ಅಧ್ಯಾಯವಿದೆ. ಅದರ ಸಾರಾಂಶವಿದು. ಅಮೇರಿಕದಲ್ಲಿದ್ದ (೧೮೯೪) ಸ್ವಾಮೀಜಿಯವರನ್ನು ಮಾಟ (ದುಷ್ಟ ಶಕ್ತಿಗಳ ಆವಾಹನೆಯಿಂದ ಇಷ್ಟ ಸಿದ್ಧಿಸಿಕೊಳ್ಳುವ ವಾಮತಂತ್ರ), ವಾಯುಲಘಿಮಾ (ಅವಲಂಬನರಹಿತವಾಗಿ ಗಾಳಿಯಲ್ಲಿ ತೇಲುವುದು), ಚಿರಕಾಲ ನಿಶ್ಚೇಷ್ಟತೆ (ಗುಹೆ ಹೊಕ್ಕು ಅನ್ನ ನೀರಿಲ್ಲದೇ ದೀರ್ಘಕಾಲ ನಿಶ್ಚಲಿಯಾಗಿರುವುದು) ಮುಂತಾದ ಪವಾಡಗಳ ಬಗ್ಗೆ ಪ್ರಶ್ನಿಸಲಾಯಿತು. ಅವರ ಉತ್ತರ ನೇರವಾಗಿತ್ತು, ಖಚಿತವಾಗಿತ್ತು : ಪವಾಡಗಳನ್ನು ತಾವು ನಂಬುವುದಿಲ್ಲ.

ಸ್ವಾಮೀಜಿಯವರ ವೈಚಾರಿಕ ಮನೋಧರ್ಮ ಕುರಿತಂತೆ ಈ ಮುಂದಿನ ಸೂಕ್ತಿಗಳನ್ನು ಗಮನಿಸಬೇಕು :

* ಮೂಢನಂಬಿಕೆ ಅಥವಾ ಅಂಧಶ್ರದ್ಧೆ ಮನುಷ್ಯನ ಪರಮಶತ್ರು, ಅಂಧಾಭಿಮಾನ ಇನ್ನೂ ಅಪಾಯಕಾರಿ (ಸಂಪುಟ ೧, ಹಿಂದೂ ಧರ್ಮ ಕುರಿತ ಲೇಖನ).

* ದೆವ್ವಗಳನ್ನು ತಾವು ನಂಬುವುದಿಲ್ಲ ಎನ್ನುವ ವ್ಯಕ್ತಿಗಳನ್ನು ನೀವು ನೋಡಿದ್ದೀರಿ. ಆದರೆ ಅದೇ ವೇಳೆ ಕಗ್ಗತ್ತಲೆಯಲ್ಲಿ ಒಂಟಿಯಾಗಿ ನಡೆಯುವಾಗ ಒಂದು ಬಗೆಯ ಭೀತಿಕಂಪನ ಆವರಿಸದ ವ್ಯಕ್ತಿಗಳು ತೀರ ಕಡಿಮೆ. ಅಂಧಶ್ರದ್ಧೆಯ ಫಲವಿದು (ಸಂಪುಟ ೨, **ಆತ್ಮನ ಸ್ವಾತಂತ್ರ್ಯ**).

* ಮತ್ಸರದ ಗೈರುಹಾಜರಿಯೇ ಅಹಿಂಸೆಯ ವಜ್ರಪರೀಕ್ಷೆ. ಆ ಕ್ಷಣದ ಉದ್ರೇಕದಲ್ಲಿ ಅಥವಾ ಯಾವುದೋ ಅಂಧಶ್ರದ್ಧೆಯ ಹಿಡಿತದಲ್ಲಿ ಅಥವಾ ಪುರೋಹಿತ ವರ್ಗದ ಒತ್ತಡದಲ್ಲಿ ಒಬ್ಬಾತ ಏನೋ ಒಂದು ಒಳ್ಳೆಯ ಕೆಲಸ ಮಾಡಬಹುದು, ಇಲ್ಲವೇ ದಾನವೀಯಬಹುದು. ಆದರೆ ಋಜು ಜನಪ್ರೇಮಿ ಸದಾ ಮತ್ಸರವಿದೂರಿ.

ಸಮಗ್ರಕೃತಿಗಳಲ್ಲಿ ಯಾದೃಚ್ಛಿಕವಾಗಿ ಯಾವುದೇ ಪುಟ ತೆರೆಯಿರಿ : ನಿಮಗೆ ಅಲ್ಲಿ ಕಾದಿದೆ ಹೊಸ ಉದಾಹರಣೆ! ಸಂಪುಟ ೪ರಲ್ಲಿ ಸುಮ್ಮನೆ ಒಂದು ಪುಟ ಮಗುಚಿದೆ : **ಬ್ರಹ್ಮವಿದ್ಯೆ ಬಗ್ಗೆ ಕೆಲವು ಟೀಕೆಗಳು** - ಲೇಖನ ಎದುರಾಯಿತು. ಈ ವಿನೂತನ ಪಾಶ್ಚಾತ್ಯ ಚಿಂತನೆ ಕುರಿತಂತೆ ಸ್ವಾಮೀಜಿಯವರ ನಿಲುವು ಸ್ಪಷ್ಟ ಸಕಾರಣ ನಿರಾಕರಣೆ. ಇವರು ಬರೆದಿದ್ದಾರೆ: "ವಿಶ್ವ ಕುರಿತ ಮೂಲ ದೈವಿಕಜ್ಞಾನ ತಮಗಿದೆಯೆಂದು ಬ್ರಹ್ಮವಿದ್ಯಾವಾದಿಗಳು ಹೇಳಿಕೊಳ್ಳುತ್ತಾರೆ. ಈ ಸಂಗತಿ ತಿಳಿಯಲು ನಮಗೆ (ಹಿಂದೂಗಳಿಗೆ) ಸಂತಸವಾಗಿದೆ. ಇದನ್ನೊಂದು ಚಿರನಿಗೂಢ ರಹಸ್ಯವಾಗಿ ರಕ್ಷಿಸಿಕೊಂಡು ಬರಲು ಅವರು ಉದ್ದೇಶಿಸಿರುವರೆಂಬುದನ್ನು ಕೇಳಿ ಇನ್ನಷ್ಟು ಆನಂದ ವಾಗಿದೆ. ಈ ಎಲ್ಲ ಗೂಢಾದ್ಗೂಢತರ ಜ್ಞಾನವನ್ನು ಒಮ್ಮೆಗೇ ಅನಾವರಣೆಸಿ ನಮ್ಮ ಮೇಲೆ- ರಿಕ್ತ ಮರ್ತ್ಯ ಹಿಂದೂಗಳ ಮೇಲೆ - ಹರಿಯಬಿಟ್ಟರೆ ಸರ್ವನಾಶವೇ ನಮ್ಮ ಗತಿ!" ಸ್ವಾಮೀಜಿಯವರ ಸಕಾರಣ ಕಟಕಿಯನ್ನು ಗಮನಿಸಬೇಕು.

೨. **ವೈಜ್ಞಾನಿಕತೆ** : ಸ್ವಾಮಿ ವಿವೇಕಾನಂದರ ವೈಜ್ಞಾನಿಕ ಚಿಂತನೆಗೆ ಉತ್ಕೃಷ್ಟ ನಿದರ್ಶನ ಸಂಪುಟ ೮ರಲ್ಲಿದೆ. **ಸ್ವಂತ ಅದೃಷ್ಟದ ನಿರ್ಮಾಪಕ ಮಾನವ** ಎನ್ನುವ ಲೇಖನದ ಉದ್ಧೃತಾಂಶ :

ದಕ್ಷಿಣ ಭಾರತದಲ್ಲಿ ಅತಿ ಪ್ರಬಲವಾದ ಒಂದು ವಂಶವಿತ್ತು. ಬೇರೆ ಬೇರೆ ಕಾಲಗಳಲ್ಲಿ ಬಾಳಿದ ಗಣ್ಯ ವ್ಯಕ್ತಿಗಳ ಜನನ ಮುಹೂರ್ತಗಳನ್ನು ಆಧರಿಸಿ ಅವರ ಜಾತಕಗಳನ್ನು ತಯಾರಿಸುವುದು ಈ ವಂಶಜರ ವೃತ್ತಿ. ಇವನ್ನು 'ಓದಿ' ಇವರು ಆ ಜಾತಕದ ಬಗೆಗಿನ ಪ್ರಮುಖ ಸಂಗತಿಗಳನ್ನು ಮುನ್ನುಡಿದರು ಮತ್ತು ಇವುಗಳ ದಾಖಲೆಗಳನ್ನು ರಚಿಸಿದರು. ಕಾಲಾಂತರದಲ್ಲಿ ಘಟನೆಗಳು ಸಂಭವಿಸಿದಂತೆ, ಇವನ್ನು ದಾಖಲೆಗಳಲ್ಲಿಯ ವಿವರ ಗಳೊಂದಿಗೆ ಹೋಲಿಸಿ ನೋಡಿದರು. ಸಾವಿರ ವರ್ಷ ಪರ್ಯಂತ ಈ ತುಲನೆ ಮುಂದುವರಿದಾಗ, ಅಲ್ಲಿ ಹಲವಾರು ಹೊಂದಾಣಿಕೆಗಳು ಕಂಡುಬಂದುವು. ಇವನ್ನು ಸಾರ್ವತ್ರೀಕರಿಸಿ ಬೃಹತ್ಸಂಪುಟವೊಂದರಲ್ಲಿ ಕಲೆ ಹಾಕಿದರು. ಮುಂದೆ ಈ ವಂಶ ನಶಿಸಿಹೋಯಿತು. ಆದರೆ ಫಲಜ್ಯೋತಿಷಿಗಳ ದಂಡು ಮಾತ್ರ ಉಳಿಯಿತು. ಆ ಬೃಹತ್ಸಂಪುಟ ಇವರ ಸೊತ್ತು. ಫಲಜ್ಯೋತಿಷ್ಯ ಈ ತೆರನಾಗಿ ಅಸ್ತಿತ್ವಕ್ಕೆ ಬಂದಿರುವುದು ಸಾಧ್ಯ. ಹಿಂದೂಗಳನ್ನು ತೀವ್ರವಾಗಿ ಗಾಸಿಗೊಳಿಸಿರುವ ಕುರುಡುನಂಬಿಕೆಗಳ ಪೈಕಿ ಅವರು ಫಲಜ್ಯೋತಿಷ್ಯದ ಸೂಕ್ಷ್ಮಾತಿಸೂಕ್ಷ್ಮ ವಿವರಗಳಿಗೆ ಅತ್ಯಧಿಕ ಲಕ್ಷ್ಯ ಹರಿಸಿದುದೂ ಒಂದಾಗಿದೆ.

ನಮ್ಮ ಚಿಂತನೆಯ ಪ್ರಕಾರ ಭಾರತಕ್ಕೆ ಫಲಜ್ಯೋತಿಷ್ಯ ತಂದವರು ಗ್ರೀಕರು. ಇವರು ಹಿಂದೂಗಳಿಂದ ಖಗೋಳವಿಜ್ಞಾನ ಪಡೆದು ಇದನ್ನು ತಮ್ಮ ಜೊತೆ ಒಯ್ದು ಯೂರೋಪಿಗೆ ತಲಪಿಸಿದರು. ಈ ಪರಸ್ಪರ ಪ್ರಭಾವವನ್ನು ಭಾರತದ ಪ್ರಾಚೀನ ಪವಿತ್ರ ಮಂದಿರಗಳಲ್ಲಿ ಸ್ಪಷ್ಟವಾಗಿ ಕಾಣಬಹುದು: ಇವು ನಿರ್ದಿಷ್ಟ ಜ್ಯಾಮಿತೀಯ ಆಲೇಖ್ಯಾನುಸಾರ ರಚಿತವಾಗಿವೆ, ಮತ್ತು ನಕ್ಷತ್ರಗಳು ನಿರ್ದಿಷ್ಟ ಸ್ಥಾನಗಳಿಗೆ ಬಂದಾಗ ನಿರ್ದಿಷ್ಟ ವಿಧಿಗಳನ್ನು ಆಚರಿಸಲು ಬದ್ಧವಾಗಿವೆ.

ಭವಿಷ್ಯವನ್ನು ಅತ್ಯದ್ಭುತವಾಗಿ ಕಣಿ ನುಡಿದಿರುವ ಹಲವಾರು ಫಲಜ್ಯೋತಿಷಿಗಳನ್ನು ನೋಡಿದ್ದೇನೆ. ಆದರೆ ಅವರು ನಕ್ಷತ್ರಗಳನ್ನು ಆಧರಿಸಿ ಅಥವಾ ತತ್ಸದೃಶ ಕ್ರಿಯೆ ನಡೆಸಿ, ಈ ಯಶಸ್ಸು ಗಳಿಸಿರಬಹುದೆಂಬ ಪೊಳ್ಳನ್ನು ನಾನಂತೂ ನುಂಗಲಾರೆ. ಹಲವಾರು ಸಂದರ್ಭಗಳಲ್ಲಿ ತೀರ ಸ್ಪಷ್ಟವಾಗಿಯೇ ಅದು ಮನೋವಾಚನವಾಗಿತ್ತು, ಮುಂದೆ ಸಂಭವಿಸಲಿರುವ ಘಟನೆಗಳನ್ನು ಕೆಲವೊಮ್ಮೆ ಪರಮಾಶ್ಚರ್ಯಕರವಾಗಿ ಮುನ್ನುಡಿದಿರುವುದೂ ಉಂಟು. ಆದರೆ ಹೆಚ್ಚಿನ ಸಂದರ್ಭಗಳಲ್ಲಿ ಅದು ಬರಿದೆ ಒಣಗುಲ್ಲು.

ಲಂಡನ್ನಿನಲ್ಲಿ ಒಬ್ಬ ತರುಣ ನನ್ನಲ್ಲಿಗೆ ಬಂದು,

''ಮುಂದಿನ ವರ್ಷ ನನ್ನ ಗತಿ ಏನಾದೀತು?'' ಎಂದು ಕೇಳುತ್ತಿದ್ದ. ''ಹಾಗೆಂದರೇನರ್ಥ?'' ಎಂದು ಅವನನ್ನು ಪ್ರಶ್ನಿಸಿದಾಗ, ''ನಾನು ಹಣ ಪೂರ್ತಿ ಕಳೆದುಕೊಂಡು ದಟ್ಟ ದರಿದ್ರನಾಗಿದ್ದೇನೆ,'' ಎಂದ.

ಅನೇಕ ಮಂದಿಗೆ ದೇವರೆಂದರೆ ಹಣವೊಂದೇ. ದುರ್ಬಲ ವ್ಯಕ್ತಿಗಳು ತಮ್ಮ ಸರ್ವಸ್ವವನ್ನೂ ಕಳೆದುಕೊಂಡು ತಾವು ನಿರ್ಗತಿಕರಾಗಿರುವೆವೆಂದು ತಿಳಿದಾಗ ಸಂಶಯಾತ್ಮಕ ವಿಧಾನಗಳಿಂದಾದರೂ ಹಣಮಾಡಲು ಹಿಂಜರಿಯುವುದಿಲ್ಲ. ಇಂಥವರು ಫಲಜ್ಯೋತಿಷ್ಯ ಹಾಗೂ ಇದೇ ತೆರನಾದ ನಯವಂಚನೆಯ ವಿಧಾನಗಳಿಗೆ ಶರಣಾಗುತ್ತಾರೆ. ಸಂಸ್ಕೃತದಲ್ಲಿ ಒಂದು ಗಾದೆ ಇದೆ. ಹೇಡಿ ಮತ್ತು ಮುಟ್ಠಾಳ ಮಾತ್ರ 'ಇದು ನನ್ನ ವಿಧಿ' ಎಂದು ಕೊರಗುತ್ತಾರೆ; ದೃಢಮನಸ್ಕರಾದರೋ, 'ನನ್ನ ವಿಧಿಯನ್ನು ನಾನೇ ಬರೆಯುತ್ತೇನೆ', ಎಂದು ಪಣ ತೊಡುತ್ತಾರೆ.

ಮುದುಕತನಕ್ಕೆ ಕಾಲಿಡುತ್ತಿರುವ ಬಲಹೀನರು ಮಾತ್ರ ಅದೃಷ್ಟದ ಬಗ್ಗೆ ಮಾತಾಡುತ್ತಾರೆ. ಸಾಧಾರಣವಾಗಿ ಯುವಜನರು ಎಂದೂ ಫಲಜ್ಯೋತಿಷ್ಯದ ಹತ್ತಿರ ಕೂಡ ಸುಳಿಯುವುದಿಲ್ಲ. ನಾವು ಯಾವುದೋ ಗ್ರಹದ ಪ್ರಭಾವಕ್ಕೆ ಒಳಗಾಗಿರುವುದು ನಿಜವೇ 'ಇರಬಹುದು.' ಆದರೆ ಈ ಸಂಗತಿ ನಮ್ಮನ್ನೇನೂ ಬಾಧಿಸಬೇಕಾಗಿಲ್ಲ.

ಬುದ್ಧ ವಿಧಿಸಿದ್ದಾನೆ, ''ವಂಚಕ ವಿಧಾನಗಳಿಂದ ಮತ್ತು ಮಿಥ್ಯಾ ಚಮತ್ಕಾರಗಳಿಂದ ನಕ್ಷತ್ರಗಳನ್ನು ಕುರಿತ ಗಣನೆ ಮಾಡಿ ಉದರಂಭರಣೆ ಗೈಯುವವರನ್ನು ಹತ್ತಿರ ಸೇರಿಸತಕ್ಕದ್ದಲ್ಲ.'' ಬುದ್ಧನಿಗೆ ತಾನೇನು ಹೇಳುತ್ತಿದ್ದೇನೆ ಎಂಬುದು ತಿಳಿದಿರಲೇಬೇಕು. ಏಕೆಂದರೆ ಹಿಂದೂಗಳಲ್ಲೆಲ್ಲ ಆತ ಪರಮಶ್ರೇಷ್ಠ.

ನಕ್ಷತ್ರಗಳು ಬರಲಿ, ನಮಗೇಕೆ ಚಿಂತೆ? ನಕ್ಷತ್ರವೊಂದು ನನ್ನ ಬದುಕನ್ನು ಕಲಕುವುದಾದರೆ ನಾನದಕ್ಕೆ ದುಗ್ಗಾಣಿ ಕಿಮ್ಮತ್ತೂ ಕೊಡಲಾರೆ. ಫಲಜ್ಯೋತಿಷ್ಯ ಮತ್ತು ಇಂಥ ಎಲ್ಲ ನಿಗೂಢ ವಿಷಯಗಳು ಸಾಧಾರಣವಾಗಿ ದುರ್ಬಲ ಮನಸ್ಸಿನ ವ್ಯಾಧಿ ಚಿಹ್ನೆಗಳೆಂಬುದು ನಿಮ್ಮ ಗಮನಕ್ಕೆ ಬರದಿರದು. ಆದ್ದರಿಂದ ನಮ್ಮ ಮನಗಳಲ್ಲಿ ಇವು ವರ್ಧಿಸುತ್ತಿವೆಯೆಂಬ ಅರಿವು ಮೂಡಿದಾಗ ನಾವು ವೈದ್ಯರನ್ನು ನೋಡಬೇಕು, ಯೋಗ್ಯ ಆಹಾರ ಮತ್ತು ವಿಶ್ರಾಂತಿ ಪಡೆಯಬೇಕು.

ಯಾವುದೇ ವಿದ್ಯಮಾನ ಕುರಿತು ವಿವರಣೆ ಅದರ ಸ್ವಭಾವದ ಒಳಗಡೆಯೇ ಒದಗುವುದಾದರೆ ಬಾಹ್ಯ ಮೂಲಗಳಲ್ಲಿ ಅದನ್ನು ಅರಸುವುದು ಅವಿವೇಕ. ಜಗತ್ತು ತನ್ನನ್ನು ತಾನೇ ವಿವರಿಸುವುದಾದರೆ ಈ ವಿವರಣೆಯನ್ನು ಹೊರಗೆಲ್ಲೋ ಹುಡುಕುವುದು ಪರಮ ಮೂರ್ಖತೆ. ವ್ಯಕ್ತಿಯ ಜೀವನದಲ್ಲಿ ಘಟಿಸುವ ಯಾವುದೇ ವಿದ್ಯಮಾನವನ್ನು ಮಾನವ ಸಾಮರ್ಥ್ಯದ ನೆರವಿನಿಂದ ವಿವರಿಸಲಾಗದಂಥ ದೃಷ್ಟಾಂತ ಎಲ್ಲಿಯಾದರೂ ಇದೆಯೇ? ಅಂದಮೇಲೆ ಇಲ್ಲಿಯ ವಿದ್ಯಮಾನ ಕುರಿತಂತೆ ನಕ್ಷತ್ರಗಳಲ್ಲಿಗೋ ಇನ್ನೆಲ್ಲಿಗೋ ಬುದ್ಧಿ ಹರಿಸುವುದರ ಔಚಿತ್ಯವಾದರೂ ಏನು?

ಇದೊಂದು ಹಳೆಯ ಕತೆ. ನಾಡಿನ ದೊರೆಯಲ್ಲಿಗೆ ಒಬ್ಬ ಫಲಜ್ಯೋತಿಷಿ ಹೋಗಿ, ''ಇನ್ನು ಆರು ತಿಂಗಳ ಒಳಗೆ ನೀನು ಸಾಯಲಿರುವೆ,'' ಎಂದು ಭವಿಷ್ಯ ನುಡಿದ.

ಸಹಜವಾಗಿಯೇ ಅರಸ ಭಯವಿಹ್ವಲನಾದ - ಆ ಗಳಿಗೆಯೇ ಸತ್ತುಹೋಗುವನೋ ಎಂಬಂಥ ಸ್ಥಿತಿ. ಈತನ ಬುದ್ಧಿವಂತ ಮಂತ್ರಿ, ''ಫಲಜ್ಯೋತಿಷಿಗಳೆಲ್ಲರೂ ಮುಟ್ಠಾಳರು,'' ಎಂದು ಘೋಷಿಸಿದರೂ ರಾಜನಲ್ಲಿ ನೆಮ್ಮದಿ ಮೂಡಲಿಲ್ಲ. ಇನ್ನೇನು ಹಾದಿ ಎಂದು ಯೋಚಿಸಿದ ಆ ಸಚಿವ, ಫಲಜ್ಯೋತಿಷಿಯನ್ನು ಅರಮನೆಗೆ ಮರುಕರೆಸಿ ಪ್ರಶ್ನಿಸಿದ, ''ನಿನ್ನ ಗಣನೆಗಳೆಲ್ಲವೂ ನಿಖರವಾಗಿವೆಯೇ?''

ಫಲಜ್ಯೋತಿಷಿ, ''ಹೌದು. ಇಲ್ಲಿ ಯಾವ ದೋಷವೂ ನುಸುಳಿರಲು ಸಾಧ್ಯವಿಲ್ಲ.''

ಆದರೂ ಮಂತ್ರಿಯ ಸಮಾಧಾನಾರ್ಥ ಅವೇ ಗಣನೆಗಳನ್ನು ಮಗುದೊಮ್ಮೆ ಮಾಡಿ, ''ಗಣನೆಗಳು ಸರಿಯಾಗಿವೆ. ಭವಿಷ್ಯವಾಚನ ಕರಾರುವಾಕ್ಕಾಗಿದೆ,'' ಎಂದು ದೃಢೀಕರಿಸಿದ.

ಅರಸನ ಮುಖ ಬಿಳಿಚಿಕೊಂಡಿತು. ಫಲಜ್ಯೋತಿಷಿಗೆ ಮಂತ್ರಿ ಸವಾಲೆಸೆದ, ''ನಿನ್ನ ಮರಣ ಎಂದು ಸಂಭವಿಸಲಿದೆ ಎಂಬುದನ್ನು ಗಣಿಸಿರುವೆಯಾ?''

''ಹೌದು, ಇನ್ನು ಹನ್ನೆರಡು ವರ್ಷಗಳಲ್ಲಿ.''

ಆ ಕ್ಷಣ ಸಚಿವ ಒರೆಯಿಂದ ತನ್ನ ಕರವಾಲ ಹಿರಿದು, ಜ್ಯೋತಿಷಿಯ ತಲೆ ತರಿದು, ರಾಜನಿಗೆ ಹೇಳಿದ, ''ಈ ಸುಳ್ಳನನ್ನು ನೋಡಿದೆಯಾ? ಈ ಗಳಿಗೆಯೇ ಈತ ಮಡಿದಿದ್ದಾನೆ!''

ನಿಮ್ಮ ರಾಷ್ಟ್ರ ನಳನಳಿಸಬೇಕಾದರೆ ಈ ಎಲ್ಲ ಮೌಢ್ಯಗಳಿಂದ ನೀವು ದೂರವಾಗಿರಬೇಕು. ನಮ್ಮನ್ನು ಬಲಿಷ್ಠರಾಗಿ ಮಾಡುವಂಥವು ಮಾತ್ರ ಒಳ್ಳೆಯ ವಿಷಯಗಳು. ಇವು ನಮ್ಮ ಬಲವನ್ನು ಸಂವರ್ಧಿಸುವುವೇ ಎಂಬುದು ಮಾತ್ರ ಇವನ್ನು ಕುರಿತ ಏಕೈಕ ಪರೀಕ್ಷೆ. ವಾಸ್ತವವಾಗಿ, ಒಳಿತೇ ಬದುಕು, ಕೆಡುಕೇ ಸಾವು.

– ಇನ್ನೊಮ್ಮೆ ಸ್ವಾಮೀಜಿ ಹೇಳಿದರು. ''ವಾಸ್ತವ ಸಂಗತಿಗಳ ಶೋಧನೆ ಭೌತಿಕವಿಜ್ಞಾನ. ಆಧಿಭೌತಿಕ ಅಥವಾ ಅಧ್ಯಾತ್ಮ ವಿಜ್ಞಾನವಾದರೋ ಪುಷ್ಪಗಳನ್ನು ಗುಚ್ಛವಾಗಿ ಬಂಧಿಸುವ ಸೂತ್ರ. ಪ್ರತಿಯೊಂದು ಅಮೂರ್ತೀಕರಣವೂ ಆಧಿಭೌತಿಕ. ಮರದ ಬೇರಿಗೆ ಗೊಬ್ಬರ ಊಡುವ ಕಾರ್ಯವೂ ಅಮೂರ್ತೀಕರಣ ಪ್ರಕ್ರಿಯೆಯನ್ನು ಒಳಗೊಂಡಿರುತ್ತದೆ.'' (ಸಂಪುಟ ೭)

**೩. ನೈತಿಕತೆ :** ವಿಜ್ಞಾನದ ಪರಿಭಾಷೆಯಲ್ಲಿ ಭೌತ ಬಲಗಳ ಸ್ವರಮೇಳವೇ ವಿಶ್ವ - ಒಂದು ಶ್ರುತಿ, ಅಸಂಖ್ಯ ಸ್ವರಗಳು. ಸ್ವಾಮಿ ವಿವೇಕಾನಂದರು **ದಿವ್ಯ ಮಾತೆಯ ಆರಾಧನೆ** (ಸಂಪುಟ ೮) ಎಂಬ ಲೇಖನದಲ್ಲಿ ಈ ಭೌತ ಚಿಂತನೆಯ ಆಧ್ಯಾತ್ಮಿಕ ಮುಖವನ್ನು ಪ್ರಸ್ತಾವಿಸುತ್ತಾರೆ : ವಿಶ್ವದ ಸಮಸ್ತ ವಿದ್ಯಮಾನಗಳೂ ಏಕಶಕ್ತಿಯ ವಿವಿಧ ಲಾಸ್ಯಗಳು (ಈ ಶಕ್ತಿಯನ್ನು ಅವರು ಅಮೂರ್ತ ಗುಣವಾದ ಮಾತೃ ಶಕ್ತಿಯೆಂದು ಪ್ರತೀಕಿಸುತ್ತಾರೆ; ಸಾಮಾನ್ಯವಾಗಿ ದೇವರು ಎನ್ನುವ ಪರಿಕಲ್ಪನೆ ಮಾನವ ಚಿಂತನೆಯ ಮೂರ್ತ ಪರಿಮಿತಿಯಿಂದ ಕುಂಠಿತವಾಗುತ್ತದೆ; ಉದಾಹರಣೆಗೆ, ಅತಿಮಾನುಷ ಸಾಮರ್ಥ್ಯವಿರುವ ಭಗವಂತ. ಶಕ್ತಿ ಪರಿಕಲ್ಪನೆಯಲ್ಲಿ ಈ ಮಾನವಸಹಜ ಪರಿಮಿತಿ ಇಲ್ಲ). ಭಗವದ್ಗೀತೆಯಲ್ಲಿ, ''ನಾನು ವಾಸ್ತವ, ನಾನು ಅವಾಸ್ತವ. ನಾನು ಒಳ್ಳೆಯದನ್ನು ತರುತ್ತೇನೆ, ನಾನು ಕೆಟ್ಟದ್ದನ್ನು ತರುತ್ತೇನೆ,'' ಎನ್ನುವಲ್ಲಿ ಈ ಏಕಶಕ್ತಿ ಪರಿಕಲ್ಪನೆ ನಿಹಿತವಾಗಿದೆ. ಆದರೆ ಇದು ಮುಂದೆ ಪ್ರವರ್ಧಿಸಲಿಲ್ಲ, ಬದಲು, ''ಈ ವಿಶ್ವ ಒಳ್ಳೆಯದರ ಮತ್ತು ಕೆಟ್ಟದ್ದರ ಒಂದು ಸಂಕೀರ್ಣ ವಾಸ್ತವತೆ, ಒಂದೇ ಶಕ್ತಿ ಇವೆರಡೂ ಆಗಿ ಮೈದಳೆಯುತ್ತದೆ,'' ಎನ್ನುವ ದ್ವೈತತತ್ವದ ಚಿಂತನೆ ಅಭಿವರ್ಧಿಸಿತು. ಇಂಥ ಒಂದು ಪರಿಕಲ್ಪನೆಯ ಮೇಲೆ ರಚಿಸಿದ ನೈತಿಕತೆಯಲ್ಲಿ ಪುಣ್ಯವಂತನು ಪಾಪಿಯನ್ನು ದ್ವೇಷಿಸುವುದನ್ನೂ ಪಾಪಿಯು ಪುಣ್ಯವಂತನ ಎದುರು ಹೋರಾಡುವುದನ್ನೂ ಕಾಣುತ್ತೇವೆ. ಏಕಶಕ್ತಿಯನ್ನು ಆಧರಿಸಿ ಕಟ್ಟಿದ ನೈತಿಕತೆ ಮಾತ್ರ ನಮಗೆ ಚಿತ್ತಸ್ವಾಸ್ಥ್ಯ ನೀಡಬಲ್ಲದು.

ವಿಜ್ಞಾನಿ ಸಂತರಾಗಿದ್ದ ಐನ್‌ಸ್ಟೈನರ ಚಿಂತನೆಯನ್ನು ಗಮನಿಸಬೇಕು. ೧೯೩೮ರಲ್ಲಿ ಇವರು ತಮ್ಮ ತಂಗಿಗೆ ಬರೆದ ಪತ್ರದಲ್ಲಿ ನೈತಿಕತೆಯ ಅಗತ್ಯವನ್ನು ಒತ್ತಿಹೇಳಿದ್ದಾರೆ: ''ವರ್ತಮಾನ ಕಾಲದ ಭಾರೀ ರಾಜಕೀಯ ಕೋಲಾಹಲಗಳು ಎದೆ ಒಡೆಯುವಂತಿವೆ. ಇವುಗಳ ನಡುವೆ ನಮ್ಮ ತಲೆಮಾರಿನ ಒಬ್ಬಾತನಿಗೆ ತಾನು ಪೂರ್ತಿ ಒಂಟಿಗನಾಗಿರುವೆನೆಂಬ ಭಾವ ಮೂಡುವುದು ಸಹಜ. ಜನರು ನ್ಯಾಯ ಮತ್ತು ಘನತೆ ಬಗೆಗಿನ ಗಾಢ ಅನುರಕ್ತಿಯನ್ನು ಕಳೆದುಕೊಂಡಿರುವರೋ, ನಮ್ಮದಕ್ಕಿಂತ ಮೇಲುಮಟ್ಟದ ತಲೆಮಾರಿನವರು ಅಸಾಧಾರಣ ತ್ಯಾಗ ತಪಸ್ಸುಗಳಿಂದ ಗಳಿಸಿದ ಮೌಲ್ಯಗಳನ್ನು ಕಡೆಗಣಿಸಿರುವರೋ ಎಂಬಂತೆ ತೋರುತ್ತಿದೆ.....ನಿಜಕ್ಕೂ ಮಾನವೀಯ ಮೌಲ್ಯವೆಲ್ಲವುಗಳ ಅಡಿಪಾಯವಾದರೂ ಏನು? ನೈತಿಕತೆ.''

ನೈತಿಕತೆಯ ಮಹತ್ತ್ವವನ್ನು ಅಧ್ಯಾತ್ಮದ ಮಾರ್ಗವಾಗಿ ಸ್ವಾಮಿ ವಿವೇಕಾನಂದರೂ ವಿಜ್ಞಾನದ ಮಾರ್ಗವಾಗಿ ಐನ್‌ಸ್ಟೈನರೂ ಗುರುತಿಸಿರುವ ಪರಿಯಲ್ಲಿ ಎದ್ದು ಕಾಣುವ ಸಾದೃಶ್ಯವು, ಸ್ವಾಮೀಜಿಯವರೇ ಬೇರೆ ಒಂದು ಸಂದರ್ಭದಲ್ಲಿ ಉದ್ಗರಿಸಿದ ಸೂಕ್ತಿಗೆ ಒಂದು ಉಜ್ಜ್ವಲ ನಿದರ್ಶನ: ಅಧ್ಯಾತ್ಮ ಮಾರ್ಗವೂ ವಿಜ್ಞಾನ ಮಾರ್ಗವೂ ಅದೇ ಋತವನ್ನು ಅರ್ಥವಿಸಲು ಪ್ರಯತ್ನಿಸುತ್ತಿರುವ ಎರಡು ಬಗೆಗಳು ಮಾತ್ರ.

**೪. ಪ್ರೇಮಶೀಲತೆ, ತರ್ಕ, ನಂಬಿಕೆ ಮತ್ತು ಪ್ರೇಮ** ಎಂಬ ಕವನದಲ್ಲಿ (ಸಂಪುಟ ೫) ಸ್ವಾಮೀಜಿಯವರು ಕಾರಣ-ಭರವಸೆ-ಪ್ರೇಮ ಸಂಬಂಧವನ್ನು ಸೂತ್ರ ರೂಪದಲ್ಲಿ ವಿವರಿಸಿದ್ದಾರೆ :

ಕಾರಣಕ್ಕೆ ಅದರದೇ ಪರಿಮಿತಿಗಳಿವೆ, ತಳವಿದೆ,
ವಿಕೃತಿಯೂ ಇದೆ. ಅದನ್ನು ಸುತ್ತುವರಿದಿರುವ ಭಿತ್ತಿಗಳು
ಅಜ್ಞೇಯತಾವಾದ, ನಿರೀಶ್ವರವಾದ. ಹಾಗೆಂದು ಅಲ್ಲಿಗೇ ನಿಲ್ಲತಕ್ಕದ್ದಲ್ಲ,
ಅತೀತವಾದದ್ದು ಪ್ರತಿಕ್ಷಣವೂ ನಮ್ಮನ್ನು
ಪ್ರಭಾವಿಸುತ್ತಿದೆ, ಆಕಾಶ ಮತ್ತು ತಾರೆಗಳು ನಮ್ಮ ಮೇಲೆ ವರ್ತಿಸುತ್ತಿವೆ,
ಕಾಣದಿರುವವು ಕೂಡ. ಎಂದೇ ಅದನ್ನು

ಉತ್ತಮಿಸಲೇಬೇಕು. ಕಾರಣವೊಂದೇ ಇದನ್ನು ಸಾಧಿಸಲಾರದು: ಸಾಂತದಿಂದ ಅನಂತವನ್ನು ಹಿಡಿದಿಡಲಾಗದು.

ಭರವಸೆ ಒಂಟಿಯಾಗಿರುವಾಗ ವಿಕೃತವಾಗುತ್ತದೆ : ಅಂಧಾಭಿಮಾನ, ಮತಾಂಧತೆ, ಪಂಥಾಭಿಮಾನ. ಎಂದೇ, ಸಾಂತವನ್ನು ಸಂಕೋಚಿಸಿ ಅನಂತವನ್ನೈದಲಾರೆವು. ಕೆಲವೇಳೆ ತೀವ್ರತೆ ಅಧಿಕವಾಗಬಹುದು, ಆದರೆ ವಿಸ್ತಾರ ಕುಂಠಿತವಾಗುತ್ತದೆ, ಮತ್ತು ಅಂಧಾಭಿಮಾನಿಗಳು ಹಾಗೂ ಮತಾಂಧರು ಸ್ವಂತ ಹಮ್ಮು ಬಿಮ್ಮುಗಳ ದಾಸರಾಗುತ್ತಾರೆ.

ಬೇರೇನೂ ಹಾದಿಯಿಲ್ಲವೇ? ಇದೆ - ಪ್ರೇಮ.

ಇದೆಂದೂ ವಿಕೃತವಾಗದು, ಇದು ಶಾಂತ ಮೃದುಕಾರಿ ಮತ್ತು ಸದಾ ವಿಸ್ತರಣಶೀಲ. ಇದರ ಅಧಿವ್ಯಾಪನೆಗೆ ವಿಶ್ವವೇ ಬಲು ಚಿಕ್ಕದು.

ನಾವಿದನ್ನು ವ್ಯಾಖ್ಯಾನಿಸಲಾರೆವು. ಇದರ ಅಭಿವರ್ಧನೆ ಗಮನಿಸಿ ಮಾತ್ರ ಇದನ್ನು ಗುರುತಿಸಿ ಇದರ ಪರಿವೇಷವನ್ನು ವಿವರಿಸಬಲ್ಲೆವು.

ಪ್ರಥಮತಃ, ಬಾಹ್ಯ ಪ್ರಪಂಚಕ್ಕೆ ಗುರುತ್ವಾಕರ್ಷಣೆಯ ತೆರದಲ್ಲಿ ಪ್ರೇಮವು ಸಂಯೋಜಕ ಪ್ರವೃತ್ತಿಯದು. ರೂಪ, ವಿಧಿ, ನಿಯಮಗಳು ಇದರ ಮೃತ್ಯು : ರೂಪ, ವಿಧಾನ, ವಿಧಿ ನಿಷೇಧಗಳ ಮೂಲಕ ಆರಾಧನೆ ಆಗುವಲ್ಲಿ ಪ್ರೇಮವಿರದು.

*ಪ್ರೇಮ ಸೂಸಿದಾಗ ವಿಧಾನ ಮಡಿಯುತ್ತದೆ.*

..............................................................




ಸಂಸ್ಕೃತಿ ಕಲೀಬೇಕು, ನಿಜ; ಆದರೆ ಇವರ ಹಾಗಲ್ಲ ಇವರು 'ಅನಧ್ಯಯನ ಪಂಡಿತರು'.

ಮಾನವ ಜೀವ ತನ್ನ ಪೂರಕವನ್ನೂ ಸ್ಥಿರ ಸಮತೋಲವನ್ನೂ ತನ್ನ ಅನಂತ ವಿಶ್ರಾಂತಿಯನ್ನೂ ಅನ್ವೇಷಿಸಲು ಪ್ರಯುಕ್ತಿಸುವ ಹೋರಾಟವೇ ಪ್ರೇಮ.

ಗಂಧವನ್ನು ತೇದರೂ ಹೆರೆದರೂ ಕೊಯ್ದರೂ ಸುಟ್ಟರೂ ಅಥವಾ ಹಾಗೆಯೇ ಇಟ್ಟರೂ ಅದರ ಗುಣ ಒಂದೇ - ಪರಿಮಳ ಬೀರುವುದು. ಅಂದರೆ ವೈಚಾರಿಕತೆ, ವೈಜ್ಞಾನಿಕತೆ, ನೈತಿಕತೆ ಮತ್ತು ಪ್ರೇಮಶೀಲತೆಗಳ ಸಂಯುಕ್ತ ಫಲ ಮಾನವೀಯತೆ ಎಂಬ ಶ್ರೀಗಂಧ. ಸ್ವಾಮಿ ವಿವೇಕಾನಂದರ ಕೃತಿಗಳಲ್ಲಿ ಯಾವ ಪುಟವನ್ನು ತೆರೆದು ನೋಡಿದರೂ ಅಲ್ಲಿ ತೊಟ್ಟಿಕ್ಕುವ ಒರತೆ ಮಾನವೀಯತೆ. ಪರೀಕ್ಷಾರ್ಥ ನಾನು ಯಾದೃಚ್ಛಿಕವಾಗಿ ಸಂಪುಟ ೨ರ ಪುಟ ಮಗುಚಿದೆ : **ನೈಜ ಹಾಗೂ ತೋರಿಕೆಯ ಮಾನವ** ಲೇಖನ ಕಂಡಿತು. ಅದರಲ್ಲಿರುವ ಈ ವಾಕ್ಯಗಳನ್ನು ಗಮನಿಸಿ : ''ಈ ಪ್ರಪಂಚದಲ್ಲಿ ಬಾಳುತ್ತಿರುವ ಸ್ತ್ರೀ-ಪುರುಷರ ಪೈಕಿ ದಶಲಕ್ಷನೆಯ ಒಂದು ಅಂಶ (೧ ÷ ೧೦,೦೦,೦೦೦) ಸುಮ್ಮನೆ ಕುಳಿತು ಕ್ಷಣಕಾಲ, 'ನೀವೆಲ್ಲರೂ ದೇವರೇ! ಮನುಷ್ಯರೇ, ಓ ಪ್ರಾಣಿಗಳೇ ಮತ್ತು ಜೀವಿಗಳೇ! ನೀವೆಲ್ಲರೂ ಜೀವಂತ ಏಕ ಚಿಚ್ಛಕ್ತಿಯ ಪ್ರಕಟಿತ ರೂಪಗಳು' ಎಂದು ಸಾರಿದ್ದಾದರೆ ಸಮಸ್ತ ಪ್ರಪಂಚವೂ ಅರ್ಧಗಂಟೆಯಲ್ಲೇ ಪರಿವರ್ತನೆಗೊಂಡುಬಿಡುವುದು.'' ಸ್ವಾಮೀಜಿಯವರ ಮಾನವೀಯತೆಗೆ ಬೇರೆ ನಿದರ್ಶನ ಬೇಕೆ!

ಇದೇ ಕೇಂದ್ರೀಯ ಪರಿಕಲ್ಪನೆ ವಿಜ್ಞಾನದ ಪರಿಭಾಷೆಯಲ್ಲಿ : ''ಈ ಪ್ರಪಂಚದಲ್ಲಿ ಬಾಳುತ್ತಿರುವ ಸ್ತ್ರೀಪುರುಷರ ಪೈಕಿ ದಶಲಕ್ಷನೆಯ ಒಂದು ಭಾಗ ನಿರ್ಯೋಚನೆಯಿಂದ ಕುಳಿತು, ಹಲವು ನಿಮಿಷಗಳ ಕಾಲ, 'ನೀವೆಲ್ಲರೂ ಶಕ್ತಿ ಸ್ವರೂಪರು, ಓ ಮನುಜರೇ ಪ್ರಾಣಿಗಳೇ ಎಲ್ಲ ಜೀವಿಗಳೇ! ನೀವೆಲ್ಲರೂ ಅದೇ ಜೀವಂತ ವಿಶ್ವ ಶಕ್ತಿಯ ವಿಭಿನ್ನರೂಪಗಳು,' ಎಂದುದಾದರೆ ಸಮಸ್ತ ಪ್ರಪಂಚವೂ ಕೇವಲ ಅರ್ಧ ಗಂಟೆ ಯಲ್ಲಿಯೇ ಬದಲಾಗಿಬಿಡಬಲ್ಲದು.''

ವಿಜ್ಞಾನದ ಪುರೋಗಮನದಲ್ಲಿ ಇಂಥ ವ್ಯತ್ಯಯಗಳು ಸದಾ ಸಂಭವಿಸುತ್ತಲೇ ಇರುವುವು: ಸೂರ್ಯ, ಚಂದ್ರ, ಕುಜ, ಬುಧ, ಗುರು, ಶುಕ್ರ, ಶನಿ, ರಾಹು ಮತ್ತು ಕೇತು ಎಂಬ ನವಗ್ರಹಗಳು ಸ್ಥಿರ ಭೂಮಿಯ ಸುತ್ತ ನಿರಂತರ ಪರಿಭ್ರಮಣೆಯಲ್ಲಿವೆ ಎಂಬ ವಿಶ್ವ ಚಿತ್ರವನ್ನು ವಿಜ್ಞಾನ ಒಂದು ಕಾಲದಲ್ಲಿ ಬಿತ್ತರಿಸಿತ್ತು. ಆದರೆ ಇಂದು? ವಿಜ್ಞಾನ ಸೀಮಾಪುರುಷರ ತಪಸ್ಸಿನ ಫಲವಾಗಿ ನಮಗೆ ತಿಳಿದಿದೆ : ಈ ಗೋಚರ ಚಿತ್ರದ ತಳದಲ್ಲಿರುವ ಶಾಶ್ವತ ಚಿತ್ರ ಬೇರೆಯೇ ಎಂದು.

ಸಮಾರೋಪವಾಗಿ ಒಂದು ಮಾತು. ಆಧುನಿಕ ಭೌತವಿಜ್ಞಾನದ ತಾರ್ಕಿಕ ಚಿಂತನೆಯ ಪ್ರಕಾರ ಸಮಸ್ತ ಭೌತವಿಶ್ವವೂ ನಾಲ್ಕು ವಿವಿಕ್ತ ಬಲಗಳ ''ಗೊಂಬೆಯಾಟವಯ್ಯಾ!'' ಅವು ಗುರುತ್ವಾಕರ್ಷಣಬಲ, ವಿದ್ಯುತ್ಕಾಂತಬಲ, ದುರ್ಬಲ ಬೈಜಿಕಬಲ ಮತ್ತು ಪ್ರಬಲ ಬೈಜಿಕಬಲ. ಮೊದಲನೆಯದು ವಿಶ್ವದ ಬೃಹದಸ್ತಿತ್ವವನ್ನು ನಿಯಂತ್ರಿಸುವ ಮತ್ತು ಜಗತ್ತುಗಳ ಹುಟ್ಟು ಸಾವುಗಳಿಗೆ ಕಾರಣವಾಗುವ ''ಪ್ರೇಮ'' ಬಲ. ಮೂರು ಮತ್ತು ನಾಲ್ಕನೆಯವು ಪರಮಾಣುಗಳ ಸ್ಥಿರತೆ ಹಾಗೂ ವಿಘಟನೆಗಳಿಗೆ ಕಾರಣವಾಗುವ ''ಬಂಧಕ-ಭೇದಕ'' ಬಲಗಳು. ಎರಡನೆಯದು ವಿಶ್ವ ಸರ್ವತ್ರ ಮಾಹಿತಿ ಒಯ್ಯುವ ''ಪ್ರಸಾರ'' ಬಲ. ಇವೆಲ್ಲವೂ ಮೂಲ ಒಂಟಿ ಬಲವೊಂದರ ವಿಭಿನ್ನ ಅಭಿವ್ಯಕ್ತಿಗಳಾಗಿರಬೇಕು. ಆ ''ಎಲ್ಲ ಬಲಗಳಿಗೆ ತಾ ಮೂಲದ ಬಲ ಸಕಲ ತಪೋತರು ಪರಮಫಲ''ವನ್ನು (ಕುವೆಂಪು) ತಾವು ಅನ್ವೇಷಿಸ ಬೇಕೆಂಬುದು ಮುಂಚೂಣಿ ವಿಜ್ಞಾನಿಗಳ ಆಶಯ. ಈ ದಿಶೆಯಲ್ಲಿ ವಿದ್ಯುತ್ಕಾಂತಬಲ ಹಾಗೂ ದುರ್ಬಲ ಬೈಜಿಕಬಲಗಳ ಸೈದ್ಧಾಂತಿಕ ಸಂಯೋಜನೆ ಮತ್ತು ಪ್ರಾಯೋಗಿಕ ಸ್ಥಿರೀಕರಣ ಕೈಗೂಡಿವೆ : ಆ ಸಂಯೋಜಿತ ಬಲಕ್ಕೆ ಎಲೆಕ್ಟ್ರೊ ವೀಕ್ (ವಿದ್ಯುತ್-ದುರ್ಬಲ) ಬಲವೆಂದು ಹೆಸರು. ಅಂದರೆ ಸದ್ಯ, ೨೦೦೧ನೇ ಇಸವಿ, ವಿಶ್ವದ ಮೂಲ ಘಟಕಗಳು ಮೂರು ವಿವಿಕ್ತ ಬಲಗಳೆಂದಾಯಿತು. ಇವನ್ನು ಏಕೀಕರಿಸಬಲ್ಲ ವಿಜ್ಞಾನಿ-ದ್ರಷ್ಟಾರನ ಆಗಮನಕ್ಕೆ ವೇದಿಕೆ ಸಿದ್ಧವಾಗಿದೆ. ಪಥಿಕ ಎಲ್ಲಿರುವನೋ ಎಂದು ಬರುವನೋ ಯಾವ ನೂತನ ದಿಶೆ ಆಯುವನೋ ಭವಿಷ್ಯವೇ ನಿರ್ಧರಿಸಬೇಕು.

ಈ ಸಂಗತಿಯನ್ನು ಇಲ್ಲಿ ಪ್ರಸ್ತಾವಿಸಿರುವುದರ ಉದ್ದೇಶವಿದು. ತತ್ತ್ವಶಾಸ್ತ್ರವನ್ನು ವಿಜ್ಞಾನಗಳ ಮಾತಾಮಹಿ ಎಂದೂ, ಖಗೋಳ ವಿಜ್ಞಾನವನ್ನು ಮಾತೆ ಎಂದೂ ಗಣಿತವನ್ನು ರಾಜ್ಞಿ ಎಂದೂ ಹೇಳುವುದುಂಟು. ಈ ರೂಪಕದ ಅರ್ಥ: ತತ್ತ್ವಶಾಸ್ತ್ರ ಗುರಿ ತೋರಿಸುತ್ತದೆ, ವಿಜ್ಞಾನ ಆ ಗುರಿಯತ್ತ ನಡೆಯಲು ಹಾದಿ ಕಟ್ಟುತ್ತದೆ. ''ಪಥಿಕಾ! ಪಥ ದತ್ತವಾಗಿಲ್ಲ - ನೀ ನಡೆದು ಪಥವನ್ನು ನಿರ್ಮಿಸಬೇಕು'' ಎಂಬ ಸೂಕ್ತಿ ಇದೇ ಭಾವವನ್ನು ಸೂಚಿಸುತ್ತದೆ. ಸ್ವಾಮಿ ವಿವೇಕಾನಂದರು ತಮ್ಮ ಕೃತಿಯಿಂದ ಗುರಿ- ಅಂದರೆ ಏಕೀಕೃತ ಲಕ್ಷ್ಯ - ತೋರಿಸಿದ್ದಾರೆ, ವಿಜ್ಞಾನಿ ಅದರತ್ತ ನಡೆದು ದಾರಿ ರೂಪಿಸುತ್ತಿದ್ದಾನೆ.

*ಚಿಂತನೆಯ ಕಡಲಿನೊಳಗುಲ್ಲಾಸ ನಾವೆಯಲಿ*
*ಸಂತತಮಹಾಯಾನ ಗೈದಿರುವ ಧೀಶಕ್ತಿ*
*ಅಂತವಿಲ್ಲದ ಸಂತಸವ ಧಾರೆಯೆರೆವ ಪ್ರ-*
*ಶಾಂತಮತಿ ನಿನಗಿದೋ ಚಿರನಮನ ಅತ್ರಿಸೂನು*

*ವಿಜ್ಞಾನ ಮೂಲವನು ಕಾಣ್ ತತ್ತ್ವಶಾಸ್ತ್ರದಲಿ*
*ತತ್ತ್ವಶಾಸ್ತ್ರದ ಸೆಲೆಯನರಸು ವಿಜ್ಞಾನದಲಿ*
*ಸೃಷ್ಟಿ ವೈಚಿತ್ರ್ಯವೀ ದ್ವಂದ್ವ ಪರಿಕಿಪೊಡೆ ಅಂ-*
*ತರ್ಯೋಗಿದು ಗೋಚರಿಪುದು ತಿಳಿ ಅತ್ರಿಸೂನು*

**ಪ್ರೊ. ಜಿ.ಟಿ. ನಾರಾಯಣ ರಾವ್**
೮, ಅತ್ರಿ, ಕಾಮಾಕ್ಷಿ ಆಸ್ಪತ್ರೆ ರಸ್ತೆ
ಸರಸ್ವತೀಪುರ, ಮೈಸೂರು - ೫೭೦ ೦೦೯

# ಹೃದಯವನ್ನು ಕಂಪಿಸುವ ಭೂಕಂಪ

**ಟಿ. ಆರ್. ಅನಂತರಾಮು**

**ಭೂ**ಮಿ ಕಂಪಿಸಲು ಹಲವು ಕಾರಣಗಳಿವೆ. ರೈಲು ಹಾದುಹೋಗುವಾಗಲೂ ಹಳಿಯ ಸಮೀಪವಿರುವ ಕಟ್ಟಡಗಳು ಸಣ್ಣ ಪ್ರಮಾಣದಲ್ಲಿ ಕಂಪಿಸುತ್ತವೆ. ಪರ್ವತ ಭಾಗಗಳಲ್ಲಿ ಭೂಪಾತವಾಗುವುದರಿಂದ ಸುತ್ತಣ ಭೂಮಿ ಕಂಪನಕ್ಕೊಳಗಾಗುತ್ತದೆ. ಸುಣ್ಣ ಶಿಲೆ ಇರುವ ಪ್ರಾಂತ್ಯಗಳಲ್ಲಿ ಅಂತರ್ಜಲದ ಕ್ರಿಯೆಯಿಂದಾಗಿ ಆಳದಲ್ಲಿ ಗುಹೆಗಳು ಮೈದಳೆದು ಕುಸಿದಾಗ ಭೂಮಿ ನಡುಗಬಹುದು. ಜ್ವಾಲಾಮುಖಿಗಳು ಸ್ಫೋಟಿಸಿದಾಗ ದೊಡ್ಡ ಪ್ರಮಾಣದಲ್ಲೇ ಭೂಕಂಪನವಾಗಬಹುದು. ಮಹಾರಾಷ್ಟ್ರದ ಕೊಯ್ನಾದಲ್ಲಾದಂತೆ ಅಣೆಕಟ್ಟು ತುಂಬಿದಾಗ ದುರ್ಬಲ ಬಿರುಕುಗಳಲ್ಲಿ ಒತ್ತಡ ಹೆಚ್ಚಿ, ಅದು ಮಿತಿಮೀರಿದಾಗ ಸುತ್ತಣ ಭೂಮಿ ಅದುರಬಹುದು. ಆದರೆ ೧೯೯೩ರಲ್ಲಿ ಸುಮಾರು ೧೦,೦೦೦ ಮಂದಿಯನ್ನು ಬಲಿ ತೆಗೆದುಕೊಂಡ ಮರಾಠವಾಡದ ಕಿಲಾರಿ ಭೂಕಂಪನ, ಈ ವರ್ಷದ ಗಣರಾಜ್ಯೋತ್ಸವದಂದು ಇಡೀ ಗುಜರಾತನ್ನು ನಡುಗಿಸಿ, ಅಹಮದಾಬಾದ್, ಕಚ್, ಭುಜ್ ಮುಂತಾದೆಡೆ ಅನೂಹ್ಯ ಪ್ರಮಾಣದ ಪ್ರಾಣಹಾನಿ, ಆಸ್ತಿ ಹಾನಿಗೆ ಕಾರಣವಾದ ಭೂಕಂಪನಕ್ಕೆ ಬೇರೆಯದೇ ಆದ ಕಾರಣವಿದೆ.

ಇಡೀ ಭೂಮಿಯ ಚಿಪ್ಪು ೧೨ ದೊಡ್ಡ ದೊಡ್ಡ ತುಂಡುಗಳಾಗಿ ಒಡೆದಿದೆ. ಈ ಒಂದೊಂದು ತುಂಡನ್ನೂ ಫಲಕ ಎಂದು ಗುರುತಿಸುತ್ತಾರೆ. ಒಂದೊಂದೂ ಎಷ್ಟು ದೊಡ್ಡವೆಂದರೆ ಅವು ಒಂದು ದೊಡ್ಡ ಖಂಡವನ್ನೇ ಹೊತ್ತು ಸರಿದಾಡಬಲ್ಲವು. ಒಂದೊಂದೂ ನೂರು ಕಿಲೋಮೀಟರು ಮಂದ ಇವೆ. ಉದಾಹರಣೆಗೆ, ಉಪಖಂಡ ಭಾರತ ಮತ್ತು ಆಸ್ಟ್ರೇಲಿಯ ಖಂಡವನ್ನು ಒಂದೇ ಫಲಕ ಹೊತ್ತು ಅರೆಘನಸ್ಥಿತಿಯ ಭೂಮಿಯ ಮಧ್ಯಗೋಳದ ಮೇಲೆ ಮೆಲ್ಲನೆ ಸರಿಯುತ್ತಿದೆ: ದೊಡ್ಡ ವಾಹನದ ಮೇಲೆ ನಿಂತು ಪಯಣಿಸುವ ಎರಡು ಆನೆಗಳ ರೀತಿ. ಸರಿತವೆಂದರೆ ಅದು ಅತ್ಯಂತ ನಿಧಾನ. ವರ್ಷಕ್ಕೆ ಸುಮಾರು ಐದು ಸೆಂಟಿಮೀಟರಿನಷ್ಟು. ಹೀಗೆ ಸರಿಯುವಾಗ ಎರಡು ಭೂಫಲಕಗಳು ಎದುರಾಗಿ ಘರ್ಷಿಸಿದಾಗ ಅವುಗಳ ಅಂಚು ಮಡಿಸಿ ಅಲ್ಲಿ ದೊಡ್ಡ ಪರ್ವತ ಮಾಲೆಯೇ ಏಳಬಹುದು. ನಮ್ಮ ಹಿಮಾಲಯ ಪರ್ವತಮಾಲೆ ಹುಟ್ಟಿದ್ದೂ ಹೀಗೆಯೇ. ಭಾರತದ ಫಲಕ ಉತ್ತರದೆಡೆ ಮೆಲ್ಲಗೆ ಸರಿಯುತ್ತಿದೆ, ಅತ್ತ ಯೂರೇಷ್ಯ ಫಲಕ ದಕ್ಷಿಣಕ್ಕೆ ಸರಿಯುವಾಗ ಹಿಮಾಲಯವನ್ನು ಹಿಚುಕಿದೆ. ಈ ಕಾರಣದಿಂದಾಗಿ ಹಿಮಾಲಯದಲ್ಲಿ ಉದ್ದುದ್ದದ ದುರ್ಬಲ ವಲಯಗಳು ಮೂಡಿ ಅಲ್ಲಿ ಶಿಲಾಸ್ತರಗಳು ಜಾರುತ್ತಿವೆ. ಇವೇ ಸ್ತರಭಂಗಗಳು. ಶಿಲೆ ಜಾರಿದಾಗಲೆಲ್ಲ ಒತ್ತಡ ಬಿಡುಗಡೆಯಾಗಿ ಶಕ್ತಿ ರೂಪದಲ್ಲಿ ಹಂಚಿ ಭೂಕಂಪನವಾಗುತ್ತದೆ. ಇದಲ್ಲದೆ ಖಂಡದ ಒಳಭಾಗದಲ್ಲೂ ಅನೇಕ ಸೀಳುಗಳಿವೆ. ಕೆಲವು ಕಣ್ಣಿಗೇ ಕಾಣುವಷ್ಟು ನಿಚ್ಚಳ. ನರ್ಮದಾ ಸೋನ್ ನದಿ ಹರಿಯುವ ಪಾತ್ರ ಇಂಥ ಒಂದು ಸೀಳು. ಇನ್ನು ಕೆಲವು ಅಗೋಚರ. ತೀರ ಆಳದಲ್ಲಿವೆ. ಉಪಗ್ರಹಗಳ ಛಾಯಾಚಿತ್ರಗಳೂ ಇವನ್ನು ಬಿಂಬಿಸಲಾರವು. ಹಿಮಾಲಯದಲ್ಲಿ ಘರ್ಷಣೆ ಆದಾಗಲೆಲ್ಲ ಖಂಡದ ಒಳಭಾಗದಲ್ಲಿ, ವಿಶೇಷವಾಗಿ ಸ್ತರಭಂಗವಾಗಿರುವ ಭಾಗಗಳಲ್ಲಿ, ಒತ್ತಡ ಹೆಚ್ಚುತ್ತದೆ. ಮರಾಠವಾಡ, ಕಚ್, ಭುಜ್ ಇವೆಲ್ಲ ದುರ್ಬಲ ವಲಯಗಳ ಮೇಲೆ ನಿಂತಿವೆ. ಅಲ್ಲಿ ಶಿಲಾಜಾರಿಕೆ ಭೂಕಂಪನಕ್ಕೆ ಕಾರಣವಾಗುತ್ತದೆ.

*ರಿಕ್ಟರ್ ಭೂಕಂಪನ ಮಾಪಕ*

*ಭೂಕಂಪನಗಳ ಪ್ರಮಾಣ ಮತ್ತು ಶಕ್ತಿಯ ಬಿಡುಗಡೆ.*

| ರಿಕ್ಟರ್ ಪಟ್ಟಿಯಲ್ಲಿ ಭೂಕಂಪನದ ಪರಿಮಾಣ | ಅಷ್ಟೇ ಶಕ್ತಿಯ ಬಿಡುಗಡೆಗೆ ಬಳಸಬೇಕಾದ ಟಿ.ಎನ್.ಟಿ. (ಕಿಲೋ ಗ್ರಾಂಗಳಲ್ಲಿ) | ಪರಿಣಾಮ |
|---|---|---|
| ೦ | ೦.೬ | ಮರಗಿಡಗಳು ಬುಡ ಮೇಲಾಗುತ್ತವೆ. |
| ೧ | ೨೦ | ಪಾಯ ಅಗೆಯುವಾಗ ಉಂಟಾಗುವ ಸ್ಫೋಟಕ್ಕೆ ಇದು ಸಮ. |
| ೨ | ೬೦೦ | ಸಾಧಾರಣ ಕಲ್ಲು ಗಣಿಯ ಸ್ಫೋಟಕ್ಕೆ ಇದು ಸಮ. |
| ೩ | ೨೦,೦೦೦ | ದೊಡ್ಡ ಕಲ್ಲು ಕಣಿಯ ಸ್ಫೋಟಕ್ಕೆ ಇದು ಸಮ. |
| ೪ | ೬,೦೦,೦೦೦ | ಮಧ್ಯಮ ಗಾತ್ರದ ಪರಮಾಣು ಬಾಂಬ್ ಸ್ಫೋಟಕ್ಕೆ ಸಮ. |
| ೫ | ೨೦ ಮಿಲಿಯನ್ | ಸಾಧಾರಣ ಪರಮಾಣು ಬಾಂಬ್ ಸ್ಫೋಟಕ್ಕೆ ಸಮ. |
| ೬ | ೬೦೦ ಮಿಲಿಯನ್ | ಹೈಡ್ರೋಜನ್ ಬಾಂಬ್ ಸ್ಫೋಟಕ್ಕೆ ಸಮ. |
| ೭ | ೨೦ ಬಿಲಿಯನ್ | ನ್ಯೂಯಾರ್ಕ್ ನಗರವನ್ನು ಒಂದು ವರ್ಷ ಕಾಲ ಶಾಖಗೊಳಿಸಲು ಬೇಕಾದ ಶಕ್ತಿಗೆ ಸಮ. |
| ೮ | ೬೦೦ ಬಿಲಿಯನ್ | ಮೂವತ್ತು ವರ್ಷ ನ್ಯೂಯಾರ್ಕ್ ನಗರವನ್ನು ಶಾಖಗೊಳಿಸಬಹುದು. |
| ೯ | ೨೦,೦೦೦ ಬಿಲಿಯನ್ | ಜಗತ್ತಿನ ಈಗಿರುವ ತೈಲ ಮತ್ತು ಕಲ್ಲಿದ್ದಲನ್ನು ಬಳಸಿ ಐದು ವರ್ಷಗಳಲ್ಲಿ ಪಡೆಯಬಹುದಾದ ಶಕ್ತಿಗೆ ಸಮ. |

*ಕ್ಯಾಲಿಫೋರ್ನಿಯ ತಂತ್ರಜ್ಞಾನ ಸಂಸ್ಥೆಯ ಚಾರ್ಲ್ಸ್ ರಿಕ್ಟರ್ ಈ ಮಾನಕವನ್ನು ಮೊದಲ ಬಾರಿಗೆ ಜಾರಿಗೆ ತಂದ. ಎಂದೇ ಆತನ ಹೆಸರನ್ನೇ ಇದಕ್ಕೆ ನೀಡಲಾಗಿದೆ. ರಿಕ್ಟರ್ ಅಳತೆಗೋಲಿನಲ್ಲಿ ೦ ಯಿಂದ ೯ರವರೆಗೆ ಏರಿಕೆಯ ಕ್ರಮದಲ್ಲಿ ಭೂಕಂಪನದ ಪರಿಮಾಣವನ್ನು ತೋರಿಸಲಾಗಿದೆ. ಒಂದು ಸಂಖ್ಯೆಯಿಂದ ಮುಂದಿನ ಸಂಖ್ಯೆ ಭೂಕಂಪನ ಅಲೆಗಳಲ್ಲಿ ಹತ್ತು ಪಟ್ಟು ಹಿಗ್ಗುವಿಕೆಯನ್ನೂ ಮೂವತ್ತು ಪಟ್ಟು ಶಕ್ತಿ ಬಿಡುಗಡೆಯನ್ನೂ ಸಂಕೇತಿಸುತ್ತದೆ.*

**ಭೂಕಂಪನ : ಎಚ್ಚರಿಕೆಯ ಸಂಕೇತಗಳು :** ಭೂಕಂಪನ ಇಂತಹದೇ ಪ್ರಾಂತ್ಯದಲ್ಲಿ, ಇಂಥ ದಿನವೇ, ಇಂತಿಷ್ಟು ಗಂಟೆಯಲ್ಲಿ ಘಟಿಸುತ್ತದೆಯೆಂದು ಮುನ್ಸೂಚನೆ ಕೊಡುವುದು ಸುಲಭವಲ್ಲ. ಏಕೆಂದರೆ ನೆಲದಾಳದ ಪರಿಸ್ಥಿತಿಯನ್ನು ಅತ್ಯಂತ ಕರಾರುವಾಕ್ಕಾಗಿ ದಾಖಲೆ ಮಾಡಲು ಇಂದಿನ ಮುಂದುವರಿದ ತಂತ್ರಜ್ಞಾನದಿಂದಲೂ ಸಾಧ್ಯವಿಲ್ಲ. ಮನುಷ್ಯನ ದೇಹದ ಯಾವ ಭಾಗದಲ್ಲಿ, ಯಾವ ಬಗೆಯ ಸ್ಥಿತಿ ಇದೆಯೆಂದು ಎಕ್ಸ್-ರೇ ಹಾಯಿಸಿ ತಿಳಿಯುವಂತೆ ಭೂಗರ್ಭದ ಸ್ಥಿತಿಯನ್ನು ನೇರವಾಗಿ ತಿಳಿಸಲು ಯಾವ ಯಂತ್ರವನ್ನೂ ಆವಿಷ್ಕರಿಸಿಲ್ಲ. ಎಷ್ಟೋವೇಳೆ, ವಿಶೇಷವಾಗಿ ಸಾಗರ ತಳದಲ್ಲಾಗುವ, ಭೂಕಂಪನದ ಕೇಂದ್ರ ೭೦೦ ಕಿಲೋಮೀಟರು ಆಳದಲ್ಲಿರುವುದುಂಟು. ಉಪಗ್ರಹದ ಛಾಯಾಚಿತ್ರಗಳ ಮೂಲಕ ಭೂಮೇಲ್ಮೈನ ಪರಿಸ್ಥಿತಿಯನ್ನು, ವಿಶೇಷವಾಗಿ ಸ್ತರಭಂಗವಾಗಿರುವ ದುರ್ಬಲ ವಲಯವನ್ನು, ಸ್ಥೂಲವಾಗಿ ಗುರುತಿಸಬಹುದು. ಬಹುತೇಕ ಸಂದರ್ಭಗಳಲ್ಲಿ ಬಿರುಕುಗಳು ನೆಲದ ಮೇಲ್ಮೈನಲ್ಲಿ ಪ್ರಕಟಗೊಂಡಿರುವುದೇ ಇಲ್ಲ. ಈ ಕಾರಣದಿಂದಾಗಿಯೇ ಭೂಕಂಪನದ ಮುನ್ಸೂಚನೆ ಕರಾರುವಾಕ್ಕಾಗಿರುವ ಸಂದರ್ಭ ತುಂಬ ಕಡಿಮೆ. ಆದರೂ ದೊಡ್ಡ ಭೂಕಂಪನವಾಗುವ ಮೊದಲು ಸುತ್ತಮುತ್ತಲ ಭಾಗಗಳಲ್ಲಿ ಕೆಲವು ಬಾರಿ ನಿಸರ್ಗ ಕೆಲವೊಂದು ಸಂಜ್ಞೆಗಳನ್ನು ಪ್ರತ್ಯಕ್ಷವಾಗಿಯೋ, ಪರೋಕ್ಷವಾಗಿಯೋ ತಿಳಿಸುತ್ತದೆ. ಅವುಗಳನ್ನು ನಾವು ಅರ್ಥ ಮಾಡಿಕೊಳ್ಳಬೇಕು ಅಷ್ಟೇ.

**ಪೂರ್ವಭಾವಿ ಕಂಪನಗಳು :** ಸಾಮಾನ್ಯವಾಗಿ ದೊಡ್ಡ ಭೂಕಂಪನವಾಗುವ ಮೊದಲು ಲಘು ಕಂಪನಗಳು ಘಟಿಸುತ್ತವೆ. ಬರುಬರುತ್ತ ಲಘು ಕಂಪನಗಳೇ ಪರಿಮಾಣ

ಹೆಚ್ಚಿಸಿಕೊಳ್ಳುತ್ತ ಅದೇ ಪ್ರದೇಶದಲ್ಲಿ ದೊಡ್ಡ ಭೂಕಂಪನಗಳಾಗಿ ಎರಗುವುದೂ ಉಂಟು. ಭುಜ್ ಭೂಕಂಪನವಾಗುವ ಮೊದಲು ಭಾವನಗರದ ಸುತ್ತಮುತ್ತ ಲಘು ಕಂಪನಗಳಾಗಿದ್ದವು.

**ಶಿಲಾ ತುಯ್ತ :** ಭೂಮಿಯಲ್ಲಿ ದೊಡ್ಡ ಪ್ರಮಾಣದ ಸ್ತರಭಂಗ ವಲಯದಲ್ಲಿ ಒತ್ತಡ ಏರುತ್ತ ಹೋಗಿ ಆನಂತರ ಶಿಲೆಯ ಧಾರಣ ಸಾಮರ್ಥ್ಯ ಮಿತಿಮೀರಿದ ಮೇಲೆ ಶಿಲೆ ಜಾರಿ ಭೂಕಂಪನವಾಗುತ್ತದೆ. ಯಾವ ಪ್ರಮಾಣದ ಒತ್ತಡ ಹೆಚ್ಚುತ್ತಿದೆ ಎಂಬುದನ್ನು ಅಳೆಯಲು ಸಾಧ್ಯವಾದರೆ, ಭೂಕಂಪನದ ಸಂಭಾವ್ಯದ ಬಗ್ಗೆ ಸ್ಥೂಲ ಚಿತ್ರಣ ದೊರೆಯುತ್ತದೆ.

**ಅಂತರ್ಜಲ ಮಟ್ಟದ ಏರಿಳಿತ :** ಸುತ್ತಮುತ್ತಣ ಪ್ರದೇಶದ ಬಾವಿಗಳಲ್ಲಿ ಅಂತರ್ಜಲದ ಮಟ್ಟ ಏರುವುದು ಅಥವಾ ಕುಸಿಯುವುದು ದಿಢೀರೆಂದು ಕಂಡುಬಂದರೆ ಅದು ಬರಲಿರುವ ಭೂಕಂಪನದ ಸೂಚಕವಾಗುವ ಸಾಧ್ಯತೆ ಇದೆ. ಚೀಣದಲ್ಲಿ ಸುಮಾರು ೧೦೦೦೦ ಬಾವಿಗಳನ್ನು ಇದಕ್ಕಾಗಿಯೇ ತೋಡಿ ಅಧ್ಯಯನ ಮಾಡಲಾಗಿದೆ. ಜಪಾನಿನಲ್ಲಿ ಸುಮಾರು ೧೦೦ ಬಾವಿಗಳನ್ನು ಇದಕ್ಕಾಗಿಯೇ ವೀಕ್ಷಿಸಲು ಮೀಸಲಾಗಿರಿಸಲಾಗಿದೆ. ಸಾಮಾನ್ಯವಾಗಿ ಭೂಕಂಪನವಾಗುವ ಮೊದಲು ತಿಂಗಳಾನುಗಟ್ಟಳೆ ಅಂತರ್ಜಲ ಮಟ್ಟ ಸಾವಧಾನವಾಗಿ ಕುಸಿಯುತ್ತದೆ. ಭೂಕಂಪನ ಸಂಭವಿಸಲು ಕೆಲವೇ ತಿಂಗಳಿರುವಾಗ ಅಂತರ್ಜಲ ಮಟ್ಟ ದಿಢೀರೆಂದು ಕುಸಿಯುತ್ತದೆ. ದೊಡ್ಡ ಭೂಕಂಪನವಾಗುವ ಮೊದಲು ಅಷ್ಟೇ ದಿಢೀರೆಂದು ಅಂತರ್ಜಲ ಮಟ್ಟ ಏರಿರುತ್ತದೆ.

**ನೀರಿನ ರಾಸಾಯನಿಕ ಬದಲಾವಣೆಗಳು :** ಭೂಕಂಪನಕ್ಕೂ ಅಂತರ್ಜಲದ ರಾಸಾಯನಿಕ ಬದಲಾವಣೆಗೂ ಕೆಲವೊಮ್ಮೆ ಸಂಬಂಧವಿರುತ್ತದೆ. ಕೆಲವೆಡೆ ಕಂಪನಕ್ಕೆ ಮುನ್ನ ನೀರಿನಲ್ಲಿ ಕ್ಲೋರೈಡ್ ಮತ್ತು ಸಲ್ಫೈಟ್ ಅಂಶ ಹೆಚ್ಚಾಗುವುದುಂಟು. ಹಿಮಾಲಯದಲ್ಲಿ ಭೂಕಂಪನವನ್ನು ಅಧ್ಯಯನ ಮಾಡಿರುವ ವಾಡಿಯಾ ಹಿಮಾಲಯ ಭೂವಿಜ್ಞಾನ ಸಂಸ್ಥೆ, ಆ ಭಾಗದಲ್ಲಿ ಭೂಕಂಪನಕ್ಕೆ ಎರಡು ಮೂರು ದಿನ ಮೊದಲು ನೀರಿನ ಬಣ್ಣ ಹಾಲು ಬಿಳುಪಾಗುವುದನ್ನು ಗಮನಿಸಿದೆ.

**ಅಂತರ್ಜಲದಲ್ಲಿ ರಾಡಾನ್ :** ಯುರೇನಿಯಮ್ ಖನಿಜದ ಕ್ಷಯದಿಂದ ಉತ್ಪತ್ತಿಯಾಗುವ ರಾಡಾನ್ ಅನಿಲ ನೀರಿನಲ್ಲಿ ಸುಲಭವಾಗಿ ವಿಲೀನವಾಗುವುದರಿಂದ ಅದರ ಹೆಚ್ಚಳ ಭೂಕಂಪನ ಸೂಚಕ ಎಂಬುದನ್ನು ಪ್ರಮಾಣೀಕರಿಸಿ ನೋಡಲಾಗಿದೆ. ಇದನ್ನು ಮೊದಲು ತಾಷ್ಕೆಂಟಿನಲ್ಲಿ ಅನಂತರ ಮೇಘಾಲಯದಲ್ಲಿ ಅವಲೋಕಿಸಿ ಖಚಿತಪಡಿಸಿ ಕೊಳ್ಳಲಾಗಿದೆ.

***ಚೀಣದ ಹೇಚಿಂಗ್ ಪ್ರಾಂತ್ಯದಲ್ಲಾದ ಭೂಕಂಪನದ ಮುನ್ನ ಕಂಡುಬಂದ ಪ್ರಾಣಿಗಳ ವರ್ತನೆ***

*ಭೂಕಂಪನವಾದ ತಾರೀಖು : ಫೆಬ್ರವರಿ ೪, ೧೯೭೫; ಪರಿಮಾಣ ೭.*

| *ಭೂಕಂಪನಕ್ಕೆ ಮುಂಚೆ* | *ಪ್ರಾಣಿಗಳ ವರ್ತನೆ* |
|---|---|
| ಒಂದೂವರೆ ತಿಂಗಳು ಮೊದಲು | ಹುತ್ತ, ಬಿಲಗಳಿಂದ ಹಾವುಗಳು ಹೊರಬರುವಿಕೆ. ದಂಡು ದಂಡಾಗಿ ಹೊರಬಂದ ಇಲಿಗಳನ್ನು ಕೈಯಲ್ಲೇ ಹಿಡಿಯುವಷ್ಟು ಅವು ನಿಷ್ಕ್ರಿಯವಾಗಿದ್ದವು. |
| ಆರು ವಾರಗಳ ಮೊದಲು | ಎಪ್ರಿಕಾಟ್ ಮರಗಳಲ್ಲಿ ಹೂ ಅರಳಿದುವು. |
| ಎರಡು ವಾರಗಳ ಮೊದಲು | ಹಂದಿಗಳು ಗುಟುರುಹಾಕಿ ಪರಸ್ಪರ ಕಚ್ಚಲು ಹಾತೊರೆಯುತ್ತಿದ್ದವು. |
| ಒಂದೆರಡು ದಿನಗಳ ಮೊದಲು | ಪಶುಗಳು ಅಧೀರವಾಗಿ ಮೈಮೇಲೆ ಬೀಳುವುದು, ನೆಲ ಕೆರೆಯುವುದು ಮುಂತಾದ ಚರ್ಯೆಯಲ್ಲಿ ತೊಡಗಿದ್ದವು. |
| ಎರಡು ಗಂಟೆ ಮೊದಲು | ಜಿಂಕೆಗಳು ದೊಡ್ಡಿಯಿಂದ ಹೊರಹೋಗಲು ವಿಲಿವಿಲಿ ಒದ್ದಾಡಿದವು. |
| ಇಪ್ಪತ್ತು ನಿಮಿಷಕ್ಕೆ ಮೊದಲು | ನೀರಿನಿಂದ ಆಮೆಗಳು ಹೊರಜಿಗಿದು ಕೀರಲು ಧ್ವನಿಯಲ್ಲಿ ಕಿರುಚಿದವು. |
| ಭೂಕಂಪನ ಸನಿಹವಾಗುತ್ತಲೇ | ಕೋಳಿಗಳು ನೆಲಬಿಟ್ಟು ಹಾರಿ ಮರದ ಕೊಂಬೆ ಆಶ್ರಯಿಸಿದವು. ಬಾತುಕೋಳಿಗಳು ಕೂಗುತ್ತ ತಮ್ಮ ಗೂಡಿಗೆ ಹೋಗಲು ನಿರಾಕರಿಸಿದವು. |




***೪೫ ದಶಲಕ್ಷ ವರ್ಷಗಳ ಹಿಂದೆ ಇಂಡಿಯಾ ಮತ್ತು ಯೂರೇಷ್ಯ ಫಲಕದ ಘರ್ಷಣೆಯ ಫಲವಾಗಿ ಹಿಮಾಲಯ ಪರ್ವತಮಾಲೆ ಮೈದಳೆಯಿತು***

**ಉಷ್ಣತಾವ್ಯತ್ಯಯ :** ಭೂಕಂಪನ ಚಟುವಟಿಕೆಗೂ ಮತ್ತು ನೆಲದ ಉಷ್ಣತೆಯ ವ್ಯತ್ಯಾಸಕ್ಕೂ ಸಂಬಂಧವಿರುವುದನ್ನು ಹಲವು ಸಂಶೋಧನೆಗಳು ದೃಢಪಡಿಸಿವೆ. ಭೂಮಿಯಲ್ಲಿ ಉಷ್ಣತೆಯ ಏರಿಕೆಯನ್ನು ಉಪಗ್ರಹಗಳ ಮೂಲಕ ಗುರುತಿಸಬಹುದು. ಅದರಲ್ಲೂ ಸ್ತರಭಂಗವಾಗಿರುವ ಪ್ರದೇಶದಲ್ಲಿ ಉಷ್ಣತೆ ಏರಿದ್ದರೆ ಭೂಕಂಪನವಾಗುವ ಸಂಭವ ಹೆಚ್ಚು.

**ನೆಲದ ವಾಲಿಕೆ :** ಸ್ತರಭಂಗದ ಪ್ರದೇಶದಲ್ಲಿ ಹೆಚ್ಚಿನ ಒತ್ತಡ ಏರ್ಪಡುವುದರಿಂದ ಸುತ್ತಲ ನೆಲದ ಮಟ್ಟ ಕೂಡ ಏರಿಳಿತ ತೋರುತ್ತದೆ. ಎಲ್ಲಿ ಭೂಕಂಪನ ಸಂಭವಿಸುತ್ತದೋ ಅಂತಹ ಭಾಗಗಳಲ್ಲಿ ನೆಲ ವಾಲುವುದು ಅಥವಾ ಎತ್ತರಕ್ಕೇರುವುದು ಸಾಮಾನ್ಯ ಅಂಶ.

**ಪ್ರಾಥಮಿಕ ಅಲೆಗಳ ವೇಗೋತ್ಕರ್ಷದಲ್ಲಿ ಬದಲಾವಣೆ :** ಜಗತ್ತಿನ ಎಲ್ಲ ಭೂಕಂಪನ ಮಾಪಕಗಳಲ್ಲೂ ಭೂಕಂಪನದಿಂದ ಉತ್ಪತ್ತಿಯಾಗುವ ಪ್ರಾಥಮಿಕ ಅಲೆಗಳು ಮೊದಲು ದಾಖಲೆಯಾಗುತ್ತವೆ. ಇವು ಸೆಕೆಂಡಿಗೆ ೬ ರಿಂದ ೮ ಕಿಲೋಮೀಟರು ದೂರ ಗಮಿಸಬಲ್ಲವು. ದ್ರವ, ಘನ, ಅನಿಲ ಮಾಧ್ಯಮದಲ್ಲೂ ಪ್ರವಹಿಸಬಲ್ಲವು. ಎಂದರೆ ಭೂಮಿಯ ಒಂದೆಡೆಯಿಂದ ಇನ್ನೊಂದೆಡೆಗೆ ಸಲೀಸಾಗಿ ಭೂಗರ್ಭದ ಮೂಲಕ ಸಾಗಬಲ್ಲವು. ಸಾಮಾನ್ಯವಾಗಿ ದೊಡ್ಡ ಭೂಕಂಪನ ಸಂಭವಿಸುವ ಮೊದಲು ಪ್ರಾಥಮಿಕ ಅಲೆಗಳ ವೇಗೋತ್ಕರ್ಷ ಶೇ. ೧೦ ರಿಂದ ೧೫ ಭಾಗ ಕುಸಿಯುತ್ತದೆ. ಏಕೆಂದರೆ ಭೂಗರ್ಭದ ಶಿಲೆಗಳಲ್ಲಿ ಸಾಕಷ್ಟು ಭೌತ ಬದಲಾವಣೆಗಳಾಗಿರುತ್ತವೆ.

ಯುದ್ಧಭೂಮಿಗೂ ಭೂಕಂಪನ ಪೀಡಿತ ಪ್ರದೇಶಕ್ಕೂ ಅಂಥ ವ್ಯತ್ಯಾಸವೇನಿಲ್ಲ. ಮೊದಲನೆಯದು ಮಾನವಕೃತ, ಎರಡನೆಯದು ನಿಸರ್ಗ ವಿಕೋಪದ ಫಲಶ್ರುತಿ. ಸಾವು ನೋವು ಈ ಎರಡೂ ಅನಿರೀಕ್ಷಿತವಲ್ಲ. ಭುಜ್‌ನಲ್ಲಿ ಗಣರಾಜ್ಯೋತ್ಸವದಂದು ಆದದ್ದೂ ಹೀಗೆಯೇ. ಅಮಾಯಕರ ಮೇಲೆ ಧರೆಯೇ ತಿರುಗಿಬಿದ್ದಿತು. ಅದರಿಂದಾದ ಪರಿಣಾಮಗಳನ್ನು ಪಟ್ಟಿ ಮಾಡಹೊರಟರೆ ಶಬ್ದಗಳು ಸೋಲುತ್ತವೆ, ಹೃದಯ ಬಾಯಿಗೆ ಬರುತ್ತದೆ. ೧೯೯೩ರಲ್ಲಿ ಮರಾಠವಾಡದ ಲಾತೂರ್ ಕೂಡ ಇಂಥದೇ ಸಂಕಷ್ಟ ಅನುಭವಿಸಿತ್ತು. ಗಣೇಶ ಪೂಜೆ ಮಾಡಿದ ಮರುದಿನವೇ ೧೦,೦೦೦ ಮಂದಿಯನ್ನು ಭೂಮಿ ಹೊಸಕಿಹಾಕಿತ್ತು. ಅಲ್ಲಿ ಕಳಪೆ ಗುಣಮಟ್ಟದ ಕಟ್ಟಡಗಳು ಉರುಳಿಬಿದ್ದು ಸಾವಾಗಿ ಕಾಡಿದ್ದವು. ಇತ್ತ ಭುಜ್‌ನಲ್ಲಿ ಕಾಂಕ್ರೀಟ್‌ನಲ್ಲಿ ಕಟ್ಟಿದ ಭರ್ಜರಿ ಮಹಡಿ ಮಹಲುಗಳು ಸಾರಾಸಗಟಾಗಿ ನೆಲ ಕಚ್ಚಿದ್ದವು. ಈಗ ಸಾವು ನೋವಿನ ಸಂಕಲನ, ವ್ಯವಕಲನ ಇನ್ನೂ ನಡೆದೇ ಇದೆ. ೧,೦೦,೦೦೦ ಜೀವ ಹೊಸಕಿ ಹೋಗಿರುವ ಶಂಕೆ ಇದೆ. ಆಸ್ತಿ ಪಾಸ್ತಿಯ ಪಟ್ಟಿ ಮಾಡಲು ಕಂಪ್ಯೂಟರ್ ಬಳಸಬೇಕಾದ ಪರಿಸ್ಥಿತಿ.

ನಿಸರ್ಗ ಯಾಕೆ ಮುನಿಯುತ್ತದೆ ಆಗಾಗ? ಇದಕ್ಕಿಲ್ಲವೆ ಪರಿಹಾರ? ಅಥವಾ ನಿಸರ್ಗದ ವಿದ್ಯಮಾನವನ್ನು ನಮ್ಮದೇ ಗುಣಾಕಾರ, ಭಾಗಾಹಾರದಲ್ಲಿ ಲೆಕ್ಕ ಮಾಡುತ್ತ ಅವಾಸ್ತವತೆಯನ್ನೇ ಮರೆತಿದ್ದೇವೆಯೆ? ಇಂಥ ನೂರು ಪ್ರಶ್ನೆಗಳನ್ನು ಕೇಳಬಹುದು. ಪ್ರತಿಬಾರಿ ಚಂಡಮಾರುತ, ಬಿರುಗಾಳಿ, ಅತಿವೃಷ್ಟಿ, ಅನಾವೃಷ್ಟಿ, ಭೂಕಂಪನ




ಭೂಕಂಪನ ಉಗಮವಾಗುವ ಬಗೆ

*ಭೂಕಂಪನ ಅಲೆಗಳು*

*ಕೊಳದ ನೀರಿಗೆ ಕಲ್ಲೆಸೆದರೆ ಕಲ್ಲು ಬಿದ್ದ ಜಾಗದಿಂದ ವೃತ್ತಾಕಾರವಾಗಿ ಹಿಗ್ಗುತ್ತ ಒಂದರ ಹಿಂದೆ ಒಂದರಂತೆ ಅಲೆಗಳು ಸಾಗಿ ಕೊನೆಗೆ ದಡಕ್ಕೆ ಬಡಿದು ಕಣ್ಮರೆಯಾಗುವುದನ್ನು ನೀವು ಕಂಡಿರುತ್ತೀರಿ. ಭೂಕಂಪನದ ಪ್ರಾರಂಭವೂ ಹೀಗೆಯೇ. ಶಿಲಾ ಸ್ತರಗಳು ಆಳದಲ್ಲಿ ಭಂಗವಾದೊಡನೆ ಅಲ್ಲಿಂದ ಶಕ್ತಿ ಅಲೆಯ ರೂಪದಲ್ಲಿ ಬಿಡುಗಡೆಯಾಗುತ್ತದೆ. ಹೀಗೆ ಹೊರಡುವ ಅಲೆಗಳಲ್ಲಿ ಮೂರು ಬಗೆ. ಅತ್ಯಂತ ವೇಗವಾಗಿ ಭೂಗರ್ಭದಲ್ಲಿ ತೂರಿ ಹೊರಬರಬಲ್ಲ ಪ್ರಾಥಮಿಕ ಅಲೆಗಳು ($P$ ಅಲೆಗಳು) ಮೊದಲು ಭೂಕಂಪನ ಮಾಪಕ ತಲಪಿ ದಾಖಲೆಯಾಗುತ್ತವೆ. ಈ ಅಲೆಗಳ ವೇಗ ಸೆಕೆಂಡಿಗೆ ೬ ರಿಂದ ೮ ಕಿಲೋ ಮೀಟರು. ಇವು ಹಾಯುವಾಗ ಶಿಲೆಯನ್ನು ಹಿಂದಕ್ಕೂ ಮುಂದಕ್ಕೂ ಜಗ್ಗುತ್ತವೆ. ಇದರ ಹಿಂದೆಯೇ ಹೊರಡುವ ಅಲೆಗಳು ದ್ವಿತೀಯಕ ಅಲೆಗಳು ($S$ ಅಲೆಗಳು) ಘನ ಪದಾರ್ಥದಲ್ಲಿ ಮಾತ್ರ ಪ್ರವಹಿಸಬಲ್ಲವು. ಚಲನೆ ಹಾವಿನಂತೆ ಅಂಕುಡೊಂಕು. ಈ ಎರಡೂ ಅಲೆಗಳು ಅಂಥ ಅಪಾಯಕಾರಿಯಲ್ಲ. ಕೊನೆಗೆ ಹೊರಡುವ 'ಅಲೆಗಳು' ಭೂಮಿಯ ಮೇಲ್ಮೈಯಲ್ಲಿ ಸಾಗಿ ಬುಲ್‌ಡೋಜರ್ ರೀತಿ ವರ್ತಿಸಿ ಎದುರಿಗೆ ಬಂದದ್ದನ್ನೆಲ್ಲ ತಳ್ಳುತ್ತಾ ಹೋಗುತ್ತದೆ. ನೆಲವನ್ನು ಮೇಲಕ್ಕೂ ಕೆಳಕ್ಕೂ ಒತ್ತುತ್ತದೆ. ಭೂಕಂಪನದ ಪರಿಮಾಣ ರಿಕ್ಟರ್ ಮಾನಕದಲ್ಲಿ ೮ ತಲಪಿದರೆ ಈ ಮೇಲ್ಮೈ ಅಲೆಗಳು ಬಹುತೇಕ ಕಟ್ಟಡಗಳನ್ನು ಉರುಳಿಸಿಬಿಡುತ್ತವೆ. ಇವೇ ಅತ್ಯಂತ ಅಪಾಯಕಾರಿ. ಭುಜ್ ಸುತ್ತಮುತ್ತ ಆದ ಭೂಕಂಪನವನ್ನು ಜಗತ್ತಿನ ಬೇರೆ ಬೇರೆ ಭಾಗಗಳಲ್ಲಿರುವ ೨೦೦ ಕಂಪನ ಮಾಪಕಗಳು ದಾಖಲೆ ಮಾಡಿಕೊಂಡಿವೆ.*

ಅಪ್ಪಳಿಸಿದಾಗಲೆಲ್ಲ ಸಾರ್ವಜನಿಕರು ಇಂಥ ಪ್ರಶ್ನೆಗಳನ್ನು ಕೇಳುತ್ತಲೇ ಬಂದಿದ್ದಾರೆ. ಬಟ್ಟೆ ಬರೆ, ಒಂದಷ್ಟು ಹಣದ ನೆರವು ನೀಡಿ ನಾಲ್ಕು ದಿನದ ನಂತರ ಇಂಥ ಘಟನೆಗಳು ಸ್ಮೃತಿಪಟಲದ ಹಿಂದಕ್ಕೆ ಸರಿಯುತ್ತವೆ. ಮತ್ತೆ ನೆನಪಾಗುವುದು ಇನ್ನೊಂದು ವಿಕೋಪ ಎರಗಿದಾಗಲೇ. ಭುಜ್ ನಗರದ ಸುತ್ತಮುತ್ತ ೧,೨೦೦ ಚ.ಕಿ.ಮೀ. ಪ್ರದೇಶವನ್ನು ಅಲುಗಿಸಿದ, ರಿಕ್ಟರ್ ಮಾಪಕದಲ್ಲಿ ೮.೦೦ ಪರಿಮಾಣ ತೋರಿದ ಭೂಕಂಪನ ಸಂಭವಿಸಿದ್ದು ಇದೇ ಮೊದಲೆ? ಅಲ್ಲಿನ ಜನತೆಗೆ ಅಥವಾ ಸರ್ಕಾರಕ್ಕೆ ತಮ್ಮ ಕಾಲಡಿಯ ನೆಲದ ಬಗ್ಗೆ ಏನೂ ತಿಳಿದಿರಲಿಲ್ಲವೆ? ಅಹಮದಾಬಾದ್ ತೀವ್ರ ಭೂಕಂಪನ ವಲಯದಲ್ಲಿದೆ ಎಂಬುದು ಬಹಳ ಹಿಂದಿನಿಂದಲೇ ತಿಳಿದಿರುವ ವಿಷಯ. ಭುಜ್‌ನಲ್ಲೇ ಒಂದು ಭೂಕಂಪನ ಮಾಪಕ ಕೇಂದ್ರವಿದೆ. ಭೂಕಂಪನ ವಲಯ ನಕ್ಷೆಯಲ್ಲಿ ಭುಜ್, ಅಹಮದಾಬಾದ್, ಸಿಂಧ್ರಿ, ಇವೆಲ್ಲ ಅತ್ಯಂತ ಅಪಾಯಕಾರಿ ವಲಯವಾದ ೫ರಲ್ಲಿ ರಾಷ್ಟ್ರೀಯ ಭೂಕಂಪನ ಸಂಭಾವ್ಯ ನಕ್ಷೆಯಲ್ಲಿ ಇದನ್ನು ತೋರಿಸಿದೆ. ಗುಜರಾತ್ ಭೂಕಂಪನಕ್ಕೆ ಸರ್ಕಾರ ಪ್ರತಿಕ್ರಿಯಿಸಿದ್ದು ಕಂಪನವಾದ ಆರು ಗಂಟೆಗಳ ನಂತರ. ಅನುಕಂಪವಿರುವ ಜನರು ಮುಂದೆ ಬರದಿದ್ದರೆ ಇಡೀ ಗುಜರಾತನ್ನೇ ಗುಜರಿಗಿಡುವ ಕೆಲಸ ಆಗುತ್ತಿತ್ತು. ನಿಜ, ಈ ವಾಕ್ಯವನ್ನು ಓದಿ ಮುಗಿಸುವ ಹೊತ್ತಿಗೆ ಈ ಧರೆಯ ಯಾವುದೋ ಮೂಲೆಯಲ್ಲಿ ಭೂಮಿ ಮತ್ತೆ ನಡುಗಿರುತ್ತದೆ. ನಮ್ಮ ಅನುಭವಕ್ಕೆ ಬರಬಹುದು, ಬರದಿರಬಹುದು. ಭೂಮಿಯಂತೂ ಅವಿಶ್ರಾಂತ. ಅದರ ಒಡಲು ಇನ್ನೂ ಅಭದ್ರ. ನಮಗೆ ಅದು ಸುಭದ್ರ ನೆಲೆ ಒದಗಿಸುತ್ತದೆನ್ನುವುದು ಒಂದು ಆಶಾಭಾವನೆ, ಅಷ್ಟೇ. ನಿಜ ಹೇಳಬೇಕೆಂದರೆ ನೆಲದಡಿಯ ಪರಿಸ್ಥಿತಿಯನ್ನು ನಾವು ಅರ್ಥಮಾಡಿಕೊಳ್ಳಲು ಪ್ರಯತ್ನಿಸುವುದೇ ಇಲ್ಲ. ವಿಜ್ಞಾನಿಗಳು ಹೇಳುತ್ತಲೇ ಬರುತ್ತಾರೆ. ವರದಿಗಳು ದಪ್ಪರಟ್ಟಿನ, ಆಕರ್ಷಕ ಮುದ್ರಣದ ರಿಪೋರ್ಟ್‌ಗಳಾಗಿ ಹೊರಬರುವ ವೇಗದಲ್ಲೇ ಕಪಾಟನ್ನು ಸೇರುತ್ತವೆ. ಭೂಕಂಪನವಾದಾಗ ಕಟ್ಟಡಗಳ ಜೊತೆಗೆ ಇವೂ ನೆಲ ಕಚ್ಚುತ್ತವೆ. ನಮ್ಮ ವ್ಯವಸ್ಥೆಯ ಸ್ಥಿತಿ ಇದು.




ಭೂಕಂಪನ ಅಲೆಗಳು

**ಹಳೆಯ ಕಥೆ**

ಭುಜ್‌ನ ದುರಂತ ಕತೆ ಇಂದು ನಿನ್ನೆಯದಲ್ಲ. ೧೮೧೯ರ ಜೂನ್ ೧೬ರಂದು ಇಡೀ ಕಚ್ ಭಾಗ ಭಾರಿ ಭೂಕಂಪನಕ್ಕೆ ಬಲಿಯಾಯಿತು. ಕಚ್‌ನ ಪಶ್ಚಿಮಕ್ಕೆ ರಾಣ್ ಎಂಬ ಭಾಗವಿದೆ. ಅದು ಆಗ ಉಪ್ಪುನೀರಿನ ಮಡುವಿನಿಂದ ಆವೃತವಾದ ಭಾಗ. ಇದರ ಉತ್ತರಕ್ಕೆ ಸಿಂಧ್ರಿ ಪಟ್ಟಣವಿದೆ. ಅದೂ ಕೂಡ ಶುಷ್ಕ ಭಾಗವೇ. ಇಲ್ಲೊಂದು ಐತಿಹಾಸಿಕ ಕೋಟೆಯಿತ್ತು.

ಭೂಕಂಪನವಾಗುತ್ತಲೇ ಜನ ದೋಣಿಗಳಲ್ಲಿ ಸಾಗಿ ಈ ಕೋಟೆ ಹತ್ತಿ ಪ್ರಾಣ ಉಳಿಸಿಕೊಂಡರು. ಗುಜರಾತಿನ ಆಗಿನ ರಾಜಧಾನಿ ಭುಜ್ ಆಗಲೂ ನೆಲಸಮವಾಗಿತ್ತು. ಸಿಂಧ್ರಿಗೆ ಎಂಟು ಕಿಲೋಮೀಟರು ಉತ್ತರದಲ್ಲಿ ನೆಲ ಕೆಳಕ್ಕೆ ಕುಸಿದು ಎಂಟು ಕಿಲೋಮೀಟರು ಉದ್ದ ಬಿರುಕುಬಿಟ್ಟಿತು. ಆದರೆ ರಾಣ್ ಭಾಗದಲ್ಲಿ ನೋಡನೋಡುತ್ತಿದ್ದಂತೆ ಮೂರು ಮೀಟರು ಎತ್ತರ ಏರಿ ನಿಂತುಬಿಟ್ಟಿತು. ಇದನ್ನು ಜನ ಅದ್ಭುತವೆಂದರು. ಅದನ್ನು ಅಲ್ಲಾಹನ ಏರಿ ಎಂದು ಕರೆದು ನಮಿಸಿದರು. ೧೫೦ ಕಿಲೋ ಮೀಟರು ಉದ್ದಕ್ಕೂ ಏರಿದ ಏರಿ ಕಚ್ ಭಾಗ ಅಸ್ಥಿರವೆಂಬುದನ್ನು ಸಾರಿತ್ತು. ಆಗ ಸಂಭವಿಸಿದ ಭೂಕಂಪದ ಪರಿಮಾಣ ೮. ಮೊನ್ನಿನ ಗಣರಾಜ್ಯೋತ್ಸವದ ದಿನದಂದು ಭುಜ್ ನಗರವನ್ನು ಮತ್ತೊಮ್ಮೆ ಸಮಾಧಿ ಮಾಡಿದ ಭೂಕಂಪನದ ಪರಿಮಾಣವೂ ಅಷ್ಟೇ. ೧೯೫೬ರಲ್ಲಿ ಕಚ್ ಮತ್ತೊಮ್ಮೆ ತತ್ತರಿಸಿತು. ಈ ಎಲ್ಲ ಭೂಚಲನೆಯನ್ನು ಮರೆತುಬಿಟ್ಟರೆ ಹೇಗೆ? ಹುತ್ತಕ್ಕೇ ಕೈ ಇಟ್ಟರೆ ಯಾರನ್ನು ದೂಷಿಸುವುದು? ನಿಸರ್ಗ ನಮ್ಮ ಅವಜ್ಞೆಯನ್ನು ಎಂದೂ ಮನ್ನಿಸುವುದಿಲ್ಲ. ಮತ್ತೆ ಮತ್ತೆ ಅದೇ ಜಾಗಕ್ಕೆ ಮುಗಿಬೀಳುತ್ತೇವೆ, ನೆಲದ ಆಸೆ, ಆಸ್ತಿಯ ಆಸೆ, ಬಂಧು ಬಾಂಧವರ ಬಗೆಗಿನ ಬಂಧನ, ಸಾವು ಎದುರಾದರೂ ಸರಿಯೇ. ಇದು ಭೂಕಂಪನ ವಲಯದಲ್ಲಿ ನೆಲೆಯೂರಿರುವ ಎಲ್ಲರ ಮನದಾಳದ ಇಂಗಿತ. ನಾವೀಗ ನೂರು ಕೋಟಿ. ಎಲ್ಲಿದೆ ಜಾಗ? ಎಲ್ಲಿದೆ ನೆಲೆ? ಹೊಸ ಜಾಗ ಹುಡುಕುವುದೆಲ್ಲಿ? ಸಾರ್ವಜನಿಕರ ಇಂಥ ಪ್ರಶ್ನೆಗೆ ಉತ್ತರ ಕೊಡುವುದೂ ಅಷ್ಟು ಸುಲಭವಲ್ಲ. ಹಾಗೆ ನೋಡಿದರೆ ಭೂಕಂಪನ ಎಂದೂ ಅಷ್ಟೊಂದು ಮಾರಕವಾಗೇ ಇರುವುದಿಲ್ಲ. ಮಾರಕವಾಗುವುದು ನಾವೇ ಕಟ್ಟಿದ ಕಟ್ಟಡಗಳು ಕುಸಿದಾಗ. ಅವೇ ಸಾವಾಗಿ ಎರಗಿದಾಗ. ಇದು ಎಲ್ಲೇ ಭೂಕಂಪನ ಸಂಭವಿಸಲಿ ಮತ್ತೆ ಮತ್ತೆ ಮರುಕಳಿಸುವ ಅವಘಡ. ನಾವು ಪಾಠ ಕಲಿತಿರುವುದು ತುಂಬ ಕಡಿಮೆ. ಸ್ಥಳೀಯ ಜನರಿಗೆ ತಮ್ಮ ಕಾಲ ಕೆಳಗಿನ ಪರಿಸ್ಥಿತಿಯ ಅರಿವು ಇಲ್ಲದಿರಬಹುದು, ಸರ್ಕಾರಕ್ಕೆ ಈ ಸಾಮಾಜಿಕ ಹೊಣೆಗಾರಿಕೆ ಇಲ್ಲದಿದ್ದರೆ ಹೇಗೆ? ವೈಜ್ಞಾನಿಕ ಮಾಹಿತಿಗಳಿರುವ ವರದಿಗಳನ್ನು ಯಾಕೆ ಅನುಷ್ಠಾನಕ್ಕೆ ತರುವುದಿಲ್ಲ? ಭೂಮಿ ಪದೇ ಪದೇ ಮೈ ಕೊಡವಿಕೊಳ್ಳುತ್ತಿದ್ದರೂ ನಾವು ಯಾಕೆ ನಿರ್ಲಿಪ್ತರು? ಭೂಕಂಪನವನ್ನು ಮುನ್ನುಡಿಯಲು ವಿಜ್ಞಾನಿಗಳು ಸೋತಿದ್ದಾರೆಯೇ? ಜನಸಂಖ್ಯಾ ಸ್ಫೋಟವೇ ನಮಗೆ ಶಾಪವಾಗಿದೆಯೆ? ಸರ್ಕಾರಿ ಯಂತ್ರದ ಜಡತ್ವ, ನಮ್ಮ ದಾರಿದ್ರ್ಯ, ಇವು ಒಂದೊಂದೂ ಉತ್ತರ ಕಾಣದ ಯಕ್ಷಪ್ರಶ್ನೆಗಳು.

ಅಹಮದಾಬಾದ್, ಪಟಾಣ್, ಸುರೇಂದ್ರನಗರ, ಜಾಮ್‌ನಗರ, ರಾಜಕೋಟ್, ಹಜೀರ, ಭುಜ್ ಒಂದೊಂದೂ ನಗರಗಳು ಕಟ್ಟಡದ ಕುಸಿತದಿಂದ ಜರ್ಝರಿತವಾಗಿವೆ. ಭುಜ್‌ಗೆ ೨೦ ಕಿಲೋಮೀಟರ್ ಈಶಾನ್ಯಕ್ಕೆ ಭೂಕಂಪನ ಅಧಿಕೇಂದ್ರ (ಎಂದರೆ ಭೂಕಂಪನ ಉಗಮ ಕೇಂದ್ರಕ್ಕೆ ಲಂಬವಾಗಿ ನೆಲದ ಮೇಲಿರುವ ಬಿಂದು) ಇದ್ದುದಾಗಿ ಸುಮಾರು ೨೦೦ ಭೂಕಂಪನ ಮಾಪಕ ಕೇಂದ್ರಗಳ ಮಾಹಿತಿಗಳ ವಿಶ್ಲೇಷಣೆಯಿಂದ



★ ತೀವ್ರ ಹಾನಿಗೊಳಗಾದ ಪ್ರದೇಶಗಳು

ತಿಳಿದುಬಂದಿದೆ. ಈ ಭೂಕಂಪನ ಪರಿಮಾಣ ರಿಕ್ಟರ್ ಮಾಪನದಲ್ಲಿ ೮. ಇಡೀ ಬೆಂಗಳೂರು ನಗರಕ್ಕೆ ೪೫ ವರ್ಷಗಳಿಗೆ ಬೇಕಾಗುವಷ್ಟು ಶಕ್ತಿಯನ್ನು ಈ ಭೂಕಂಪನ ಎರಡೇ ನಿಮಿಷದಲ್ಲಿ ಬಿಡುಗಡೆಮಾಡಿದೆ.

ಇಷ್ಟೆಲ್ಲ ಅಂಕೆ ಸಂಖ್ಯೆ, ಲಾಭ ನಷ್ಟಗಳ ಲೆಕ್ಕಾಚಾರವನ್ನು ನಾವೇಕೆ ಮರೆಯುತ್ತೇವೆ? ವೈಜ್ಞಾನಿಕ ವರದಿಗಳನ್ನು ಅನುಷ್ಠಾನಕ್ಕೆ ತರದಿದ್ದರೆ ಎಂಥ ಬೆಲೆ ತೆರಬೇಕಾಗುವುದು ಎನ್ನುವುದಕ್ಕೆ ಉತ್ತರ ಕಾಶಿ, ಲಾತೂರ್ ಮತ್ತು ಈಗ ಗುಜರಾತಿನ ಭುಜ್ ಭೂಕಂಪನಗಳಿಂದಾದ ಹಾನಿಯ ಉದಾಹರಣೆ ನಮ್ಮೆದುರಿಗಿದೆ. ಅಮೆರಿಕದ ಬೇರೆಯದೇ ಆದ ಉದಾಹರಣೆಯೂ ನಮ್ಮೆದುರಿಗಿದೆ. ಗುಜರಾತಿನ ಭುಜ್, ದುರ್ಬಲ ವಲಯದ ಮೇಲೆ ಸವಾರಿ ಮಾಡುತ್ತಿರುವಂತೆಯೇ ಅಮೆರಿಕದ ಸ್ಯಾನ್‌ಫ್ರಾನ್ಸಿಸ್ಕೋ ಮತ್ತು ಕ್ಯಾಲಿಫೋರ್ನಿಯಾ ನಗರಗಳು ಹುಚ್ಚು ನೆಲದ ಮೇಲೆಯೇ ನಿಂತಿವೆ. ಸ್ಯಾನ್‌ಫ್ರಾನ್ಸಿಸ್ಕೋದಿಂದ ದಕ್ಷಿಣಕ್ಕೆ ಲಾಸ್ ಏಂಜಲೀಸ್ ದಾಟಿ ಸುಮಾರು ೯೭೦ ಕಿಲೋಮೀಟರು ಸ್ತರಪಾತವಾಗಿರುವ ಜಾಗದಲ್ಲಿ ಅನೇಕ ಪಟ್ಟಣಗಳು ನೆಲೆಯಾಗಿವೆ. ಅಲ್ಲೂ ದೊಡ್ಡ ಪ್ರಮಾಣದ ಭೂಕಂಪನಗಳಾಗಿವೆ. ೧೯೦೬ರಲ್ಲಿ ಘಟಿಸಿದ ಭೂಕಂಪನದಿಂದ ಕಟ್ಟಡ ಬೀಳುವುದಕ್ಕಿಂತ ಹೆಚ್ಚಾಗಿ ವಿದ್ಯುತ್ ಷಾರ್ಟ್ ಸರ್ಕ್ಯೂಟ್ ಆಗಿ ಸತ್ತವರೇ ಹೆಚ್ಚು. ಆ ದೇಶ ಬಹುಬೇಗ ಪಾಠ ಕಲಿಯಿತು. ಮುಂದಿನ ಐದು ವರ್ಷದಲ್ಲೇ ಸ್ಯಾನ್‌ಫ್ರಾನ್ಸಿಸ್ಕೋ ವಿಶ್ವ ವಾಣಿಜ್ಯ ಸಮ್ಮೇಳನಕ್ಕೆ ಅಣಿಯಾಯಿತು. ಈಗ ಅಲ್ಲಿನ ನಗರ ಯೋಜಕರು ಕಟ್ಟಡ ಕಟ್ಟುವಾಗ ಭೂಕಂಪನ ನಿರೋಧಿಸುವ ರಚನೆಗಳನ್ನು ಅಳವಡಿಸದಿದ್ದರೆ ಪರವಾನಗಿಯನ್ನೇ ಕೊಡುವುದಿಲ್ಲ. ಈಗಲೂ ಅಲ್ಲಿ ಭೂಕಂಪನವಾಗುತ್ತದೆ. ಆದರೆ ಸಾವು ನೋವು, ಕಟ್ಟಡ ಕುಸಿಯುವ ಪ್ರಸಂಗ ಅತ್ಯಂತ ಕನಿಷ್ಠ. ಗುಜರಾತ್ ಸರ್ಕಾರ ಬಹು ತಡವಾಗಿ ಕಣ್ಣುಬಿಡುತ್ತಿದೆ. ಅಹಮದಾಬಾದಿನಲ್ಲಿ ೨೦ ಮಂದಿ ಕಟ್ಟಡದ ಕಂಟ್ರಾಕ್ಟರುಗಳ ಮೇಲೆ ಕಾನೂನು ಕ್ರಮ ಜರುಗಿಸಿದೆ. ಅವರೆಲ್ಲಾ ಕ್ರಮೇಣ ತಪ್ಪಿಸಿಕೊಳ್ಳುತ್ತಾರೆಂಬುದೂ ಅಷ್ಟೇ ನಿಜ. ಅದೂ ನಮ್ಮ ಸಂಸ್ಕೃತಿಯ ಒಂದು ವೈಶಿಷ್ಟ್ಯವಿರಬೇಕು.

*ಈಗ್ಗೆ ೪೦ ರಿಂದ ೫೦ ದಶಲಕ್ಷ ವರ್ಷಗಳ ಹಿಂದೆ ಭಾರತ ಉಪಖಂಡ ಯೂರೇಷ್ಯ ಫಲಕದೊಡನೆ ಘರ್ಷಿಸಿತು. ಈ ಘರ್ಷಣೆಗೆ ಮುನ್ನ ಉತ್ತರಾಭಿಮುಖವಾಗಿ ಭಾರತ ಉಪಖಂಡ ಈಗ ದಕ್ಷಿಣದಲ್ಲಿ ನೆಲೆಯಾಗಿರುವ ಅಂಟಾರ್ಕ್‌ಟಿಕ ಖಂಡವನ್ನು ತೊರೆದು ೮,೦೦೦ ಕಿಲೋಮೀಟರು ಪ್ರಯಾಣ ಮಾಡಿದೆ.*

*ಹರಿದ ಬಟ್ಟೆಗೆ ಹೊಲಿಗೆ ಹಾಕಿದಂತೆ ಇಡೀ ಭಾರತ ಉಪಖಂಡದ ಅನೇಕ ಭಾಗಗಳಲ್ಲಿ ಕೂಡಿಕೊಂಡಂತೆ ಕಾಣುವ ಬಿರುಕುಗಳು ಮೂಡಿವೆ. ಇಂಥ ಬಿರುಕುಗಳಲ್ಲಾಗಿರುವ ಶಿಲಾ ಸವೆತ ಭೂಕಂಪನದ ಉಗಮಕ್ಕೆ ಕಾರಣವಾಗುತ್ತದೆ. ಭುಜ್‌ನಲ್ಲಿ ಜನವರಿ ೨೬-೨೦೦೧ ರಲ್ಲಿ ಆದ ಭೂಕಂಪನಕ್ಕೆ ಅಲ್ಲಾಹನ ಏರಿ ಅಥವಾ ನರ್ಮದಾ ಝೋನ್ ಸ್ತರಭಂಗ ವಲಯದಲ್ಲಾದ ಚಲನೆ ಕಾರಣವಿರಬಹುದೆಂದು ಊಹಿಸಲಾಗಿದೆ.*

*ಭೂಕಂಪನ ವಲಯ ನಕ್ಷೆ ತಯಾರಿಸಲು ಆಯಾ ಪ್ರದೇಶದಲ್ಲಿ ಪುನರಾವರ್ತಿಸುವ ಭೂಕಂಪನದ ಮಾಹಿತಿಯೇ ಮೂಲ. ೧೯೬೨ರಲ್ಲಿ ಭಾರತೀಯ ಮಾನಕ ಸಂಸ್ಥೆ ನಮ್ಮ ದೇಶದ ಭೂಕಂಪನ ನಕ್ಷೆಯನ್ನು ಪ್ರಥಮ ಬಾರಿಗೆ ತಯಾರಿಸಿತು. ಈ ನಕ್ಷೆಯು ಬಿಂಬಿಸುವಂತೆ ಭುಜ್ ಅಪಾಯಕಾರಿ ೫ ರ ವಲಯದಲ್ಲಿದೆ.*

**ತಾಳ ತಪ್ಪಿರುವುದೆಲ್ಲಿ?**

ಭೂಕಂಪನ ಅನಿವಾರ್ಯ ಎನ್ನುವುದಾದರೆ ಸಾವು ಅನಿವಾರ್ಯವಲ್ಲ ಎನ್ನುವ ಸ್ಯಾನ್‌ಫ್ರಾನ್ಸಿಸ್ಕೋ ಕಟ್ಟಡ ತಜ್ಞರ ಮಾತುಗಳು ನಮ್ಮನ್ನು ಮತ್ತೆ ಮತ್ತೆ ಎಚ್ಚರಿಸುತ್ತಲೇ ಇರಬೇಕು. ನಮ್ಮಲ್ಲೂ ಕಟ್ಟಡ ಕಟ್ಟಲು ಸಂಹಿತೆಗಳಿವೆ. ಆದರೆ ಅನುಷ್ಠಾನಕ್ಕೆ ತರುವವರಾರು? ಎಲ್ಲೆಲ್ಲೂ ವಂಚನೆ, ವಶೀಲಿಬಾಜಿ, ಆತ್ಮಘಾತುಕ ಜನರಿರುವಾಗ ಯಾವ 'ಕೋಡುಗಳು' ಬಳಕೆಗೆ ಬಂದಾವು? ನಿಜವಾಗಿಯೂ ಗುಜರಾತ್ ದುರಂತವನ್ನು ತಪ್ಪಿಸಲು ಅವಕಾಶವಿತ್ತೆ? ಯಾಕೆ ನಮಗೆ ನಾವೇ ದ್ರೋಹ ಮಾಡಿಕೊಂಡಿದ್ದೇವೆ? ಇಂಥ ಪ್ರಶ್ನೆಗಳನ್ನು ಕೇಳಲು ಇದು ಕಾಲ. ೧೯೩೫ರಲ್ಲೇ ಇಲ್ಲಿ ಅಪಾಯಕಾರಿ ಸ್ಥಳಗಳ ಸಮೀಕ್ಷೆ ಮಾಡಿ ಭುಜ್ ಒಂದೇ ಅಲ್ಲ, ಇಡೀ ಕಚ್ ಭಾಗ ಭೂಕಂಪನ ವಲಯದಲ್ಲಿದೆ ಎಂದು ವೈಜ್ಞಾನಿಕ ವರದಿಯನ್ನು ನೀಡಲಾಗಿತ್ತು. ೧೯೬೦ರ ಹೊತ್ತಿಗೆ ಗುಜರಾತ್ ಅಷ್ಟೇ ಅಲ್ಲ, ದೇಶದ ಎಲ್ಲ ಭಾಗದ, ವಿಶೇಷವಾಗಿ ಭೂಕಂಪನ ವಲಯದಲ್ಲಿರುವ ಪ್ರದೇಶಗಳಲ್ಲಿ ಭೂಕಂಪನ ನಿರೋಧಕ ರಚನೆಗಳನ್ನು ಅಳವಡಿಸುವ ಬಗ್ಗೆ ತಂತ್ರಜ್ಞರಿಗೂ ತಿಳಿವಿತ್ತು. ೧೯೮೩ರಲ್ಲಿ ರಾಷ್ಟ್ರೀಯ ಕಟ್ಟಡ ಸಂಹಿತೆಯೂ ಜಾರಿಗೆ ಬಂದಿತು. ಅಷ್ಟೇ ಅಲ್ಲ, ಭೂಕಂಪನ ಮತ್ತು ಚಂಡಮಾರುತ ಸಂಭಾವ್ಯ ಪ್ರದೇಶಗಳಲ್ಲಿ ಇದನ್ನು ಕಟ್ಟುನಿಟ್ಟಾಗಿ ಜಾರಿಗೆ ತರಬೇಕು ಎಂಬ ನಿರ್ಬಂಧವನ್ನು ಸರ್ಕಾರ ಹಾಕಿತ್ತು; ಆದರೆ ಕಡತಗಳಲ್ಲಿ ಮಾತ್ರ. ೧೯೯೪ರಲ್ಲಿ ಸಂಯುಕ್ತ ಸಂಸ್ಥಾನ ''ಸುರಕ್ಷತಾ ಜಗತ್ತು'' ಎಂಬ ಹೆಸರಲ್ಲಿ ಹೊಸ ಹೊಸ ರಕ್ಷಣೋಪಾಯಗಳನ್ನು ಪ್ರಕಟಿಸಿತ್ತು. ಇದರ ಬೆನ್ನಹಿಂದೆಯೇ ಕೇಂದ್ರ ನಗರಾಭಿವೃದ್ಧಿ ಸಚಿವಾಲಯ ತನ್ನ ಕೌನ್ಸಿಲ್ ಮೂಲಕ ಇಡೀ ಭಾರತಕ್ಕೆ ಸಂಬಂಧಿಸಿದಂತೆ ಅಪಾಯಕಾರಿ ವಲಯಗಳನ್ನು ಗುರುತಿಸಿ, ನಕ್ಷೆಗಳನ್ನು ತಯಾರಿಸಿತು. ಎರಡು ಸಂಪುಟಗಳಲ್ಲಿ ಪ್ರಕಟವಾದ ಈ ನಕ್ಷೆಯಲ್ಲಿ ಭಾರತದ ಎಲ್ಲ ರಾಜ್ಯಗಳ ಎಲ್ಲ ಜಿಲ್ಲೆಗಳ ಭೂಸ್ಥಿತಿಯ ಬಗ್ಗೆಯೂ ತಪಶೀಲು ಮಾಹಿತಿ ಇದೆ. ಹಾಗೆ ನೋಡಿದರೆ ಇಂಥ ವ್ಯಾಪಕ ಕಾರ್ಯಕ್ರಮವನ್ನು ಜಗತ್ತಿನ ಯಾವ ದೇಶವೂ ಕೈಗೊಂಡಿಲ್ಲ. ಕೆಲಸವೇನೋ ಅನುಪಮ, ಆದರೆ ಅನುಪಮ ಜೀವ ಉಳಿಸದಿದ್ದಾಗ ನಮ್ಮೆಲ್ಲ ಸಂಶೋಧನೆಗಳು ಮತ್ತು ಶಿಫಾರಸ್ಸುಗಳಿಗೆ ಕವಡೆ ಕಿಮ್ಮತ್ತೂ ಇರುವುದಿಲ್ಲ. ಸಾರ್ವಜನಿಕರು ಸರ್ಕಾರಿ ಯಂತ್ರವನ್ನು ಎಂದೂ ಸಂಶಯದಿಂದ ನೋಡುವುದು ಈ ಕಾರಣಕ್ಕಾಗಿಯೇ. ಘೋರ ಸತ್ಯವೆಂದರೆ ಈ ನಕ್ಷೆಯಲ್ಲಿ ಭಾರತದ ಶೇ. ೫೪ ಭಾಗ ಭೂಕಂಪನ ಸಂಭಾವ್ಯ ವಲಯದಲ್ಲೇ ಇದೆ ಎನ್ನುವುದು. ನಿಸರ್ಗ ಎಂದೂ ದಯಾಮಯಿಯೇನಲ್ಲ. ನೆಲ ಮೈ ಮುರಿದಾಗ ಎಲ್ಲರಿಗೂ ಸಾಮಾಜಿಕ ನ್ಯಾಯ ದೊರೆಯುತ್ತದೆ. ಸಾವಿನ ಮೂಲಕ.

೧೯೯೩ ರಲ್ಲಿ ಲಾತೂರ್ ಭೂಕಂಪನ ತಂದ ಸಂಕಷ್ಟಗಳ ಸರಮಾಲೆ ನಮ್ಮ ನೆನಪಿನಲ್ಲಿ ಈಗಲೂ ಭಯ ವಿಹ್ವಲವಾಗಿರುವಾಗಲೇ ಅಲ್ಲಿ ಭೂಕಂಪನ ನಿರೋಧಕ ಕಟ್ಟಡಗಳು ಮೇಲೆದ್ದಿವೆ. ಸುತ್ತಲ ೬೯ ಗ್ರಾಮಗಳು ಎರಡೇ ನಿಮಿಷದಲ್ಲಿ ತುಕಡಿಯಾಗಿ ಬಿದ್ದು ನೆಲ ಕಚ್ಚಿದ್ದವು. ಲಾತೂರಿನ



ಯೂರೇಷ್ಯಾ ಫಲಕ



*ಗುಜರಾತ್ ಭೂಕಂಪನದ ಬಳಿಕ*

ಸುತ್ತಮುತ್ತಣ ಜನರಿಗೆ ಭಯದ ಕಂಪನ ಇನ್ನೂ ಹೋಗಿಲ್ಲವಾದರೂ ಮಹಾರಾಷ್ಟ್ರದ ಭೂಕಂಪನ ತುರ್ತು ಪುನರ್ವಸತಿ ಯೋಜನೆಯನ್ವಯ ಈಗ ಅಲ್ಲಿ ಎರಡು ಲಕ್ಷ ಮನೆಗಳು ತಲೆಯೆತ್ತಿವೆ. ಹಿಂದಿನ ಪರಿಮಾಣದ ಭೂಕಂಪನ ಮತ್ತೆ ಸಂಭವಿಸಿದರೂ ಕಟ್ಟಡಗಳಿಗೆ ಭಯವಿಲ್ಲ. ಭೂಕಂಪನ ನಿರೋಧ ತಂತ್ರಗಳನ್ನು ತಳಪಾಯಕ್ಕೆ ಅಳವಡಿಸಿದ್ದಾರೆ. ಚಾವಣಿಗಳು ಬೀಳದಂತೆ ರೂಪಿಸಿದ್ದಾರೆ. ಉಳ್ಳವರು ಬಹುಮಹಡಿ ಕಟ್ಟಡಗಳನ್ನು ಕಟ್ಟಬಹುದು. ಕಂಪನ ಅಲುಗಿಸದಂತೆ ಆಧುನಿಕ ತಂತ್ರಗಳನ್ನು ಅಳವಡಿಸಬಹುದು. ಆದರೆ ಶ್ರೀಮಂತರಲ್ಲದವರ ಪಾಡೇನು? ಅವರಿಗಾಗಿಯೇ ಮರುಗುವ ಒಂದಷ್ಟು ತಂತ್ರಜ್ಞರು ನಮ್ಮಲ್ಲೂ ಇದ್ದಾರೆನ್ನುವುದೇ ಸಮಾಧಾನ. ಭೂಕಂಪನ ಸಂಭವಿಸುವ ಪ್ರದೇಶಗಳಲ್ಲಿ ಯಾವ ಬಗೆಯ ಮನೆ ಕಟ್ಟಬೇಕು? ಈಶಾನ್ಯ ಭಾರತದಲ್ಲಿ ರೂಢಿಯಲ್ಲಿರುವಂತೆ ಮರದ ಮನೆ ಅತಿ ಸುರಕ್ಷ. ಏಕೆಂದರೆ ಮರದ ಫ್ರೇಮ್ ಇದ್ದರೆ ಭೂಕಂಪನದ ಅಲೆಗಳನ್ನು ಅದು ಏಕರೀತಿಯಲ್ಲಿ ಹೀರಿಕೊಳ್ಳುತ್ತದೆ. ಮಣ್ಣು ಅಥವಾ ಕಲ್ಲಿನ ಮನೆ ಹೆಚ್ಚು ಅಪಾಯಕಾರಿ ಎನ್ನುವುದನ್ನು ಜಗತ್ತಿನ ಎಲ್ಲ ಭೂಕಂಪನಗಳೂ ತೋರಿಸಿಕೊಟ್ಟಿವೆ. ಸಾಮಾನ್ಯವಾಗಿ ಹಳ್ಳಿಗಳಲ್ಲಿ ಆರ್ಥಿಕ ಅನಾನುಕೂಲತೆಯಿಂದಾಗಿ ಕಟ್ಟಡದ ತಳಪಾಯವನ್ನು ಎಂದೂ ಆಳ ತೋಡುವುದಿಲ್ಲ. ಇದೇ ಅಭದ್ರತೆಯ ಮೂಲವೂ ಹೌದು. ಈ ಅಂಶಗಳನ್ನು ಗಣನೆಗೆ ತೆಗೆದುಕೊಂಡಿರುವ ತಂತ್ರಜ್ಞರು ಕಟ್ಟಡದ ಗೋಡೆಗಳಿಗೆ ಆಧಾರಸ್ತಂಭವಾಗಿ ಮರಮುಟ್ಟು ಬಳಸಿದಾಗ ಲೋಹದಲ್ಲಿ ಅವನ್ನು ಬಂಧಿಸಲು ಸಲಹೆ ಮಾಡುತ್ತಾರೆ. ಇನ್ನೊಂದು ಸಮಸ್ಯೆಯೂ ಇದೆ. ಮರಮುಟ್ಟು ಬೇಡಿಕೆ ಹೆಚ್ಚಾದಂತೆ ಕಾಡು ನಾಶ; ಮತ್ತೆ ಪ್ರಾರಂಭವಾಗುತ್ತದೆ ಪರಿಸರದ ಅಸಮತೋಲ. ಇವೆಲ್ಲವನ್ನೂ ನಿಭಾಯಿಸಿಕೊಂಡೇ ಭೂಕಂಪನ ವಲಯದಲ್ಲಿ ಗ್ರಾಮೀಣ ಪ್ರದೇಶಗಳಿಗೆ ಹೊಂದುವಂತಹ ತಂತ್ರ ಬಳಸಬೇಕಾಗುತ್ತದೆ. ತಂತ್ರಜ್ಞಾನದ ಕೊಡುಗೆಯೆಂದರೆ ಈ ಬಗೆಗಿನ ಚಿಂತನೆಯಷ್ಟೇ. ಒಂದು ಅಂದಾಜಿನ ಪ್ರಕಾರ ಕಟ್ಟಡದ ಒಟ್ಟು ವೆಚ್ಚದಲ್ಲಿ ಶೇ. ೧೦ ಭಾಗವನ್ನು ಮುಡುಪಿಟ್ಟರೂ ಸಾಕು, ತಳಪಾಯವನ್ನು ಭದ್ರಗೊಳಿಸಬಹುದು, ಆಗಬಹುದಾದ ಅನಾಹುತವನ್ನು ತಪ್ಪಿಸಬಹುದು. ಇದರ ಮಹತ್ವ ಸಾರಲು ಲಾತೂರಿನ ಉದಾಹರಣೆಯೇ ಸಾಕು. ೧೯೯೩ರಲ್ಲಿ ಲಾತೂರ್ ಭೂಕಂಪನದಿಂದ ಸತ್ತವರ ಸಂಖ್ಯೆ ೯೭೪೮, ಗಾಯಾಳುಗಳ ಸಂಖ್ಯೆ ೧೬,೦೦೦. ಸಂಪೂರ್ಣವಾಗಿ ಕುಸಿದ ಮನೆಗಳು ೧,೮೭,೦೦೦. ಆಸ್ತಿ ಪಾಸ್ತಿ ನಷ್ಟ ೧೨೦೦ ಕೋಟಿ ರೂಪಾಯಿ. ಪರಿಹಾರ ರೂಪವಾಗಿ ಸರ್ಕಾರ ಕೊಟ್ಟಿದ್ದು ೩೦ ಕೋಟಿ. ಪುನರ್ವಸತೀಕರಣಕ್ಕೆ ವ್ಯಯಮಾಡಿದ್ದು ೧,೮೦೦ ಕೋಟಿ. ಈ ಅಂಕೆ ಸಂಖ್ಯೆಗಳು ನಮ್ಮ ಆದ್ಯತೆ ಯಾವುದಿರಬೇಕೆಂಬುದನ್ನು ಸ್ಪಷ್ಟವಾಗಿ ವಿವರಿಸುತ್ತವೆ.

**ಟಿ. ಆರ್. ಅನಂತರಾಮು**
೨೭೧೦, ೭ನೇ ಮುಖ್ಯರಸ್ತೆ, ಕುಮಾರಸ್ವಾಮಿ ಬಡಾವಣೆ
೨ನೇ ಹಂತ, ಬೆಂಗಳೂರು - ೫೬೦ ೦೭೮.

## ಬುದ್ಧಿ ಮನಸುಗಳ ವೈಮುಖ

ಮನಸು ನಿಂತಿದೆ ಈಗ
ಕಾಲ ಮಡುವಿನಲಿ
ಹರಿವ ಜೀವನವು
ಚಕ್ರಗತಿಗೆ ಸಿಲುಕದ ಏಕಾಂಗಿ

ಅಪ್ಪಳಿಸುವ ದುರ್ಭರಗಳು ನೂರಾರು
ಬರೀ ಹತಾಶವಾಗುತಿದೆ
ಸೃಜನ ಚೇತನಕೆ ದಕ್ಕದೆ
ದ್ವಂದ್ವಕೀಡಾಗಿ

ಸತ್ಯ ಹುಡುಕುವವರು
ಹೊರಗೆ ಹೊರಟಿಹರು
ಪ್ರಾಣವಾಯುವಿನ
ಸತ್ತ್ವ ಅರಿಯದೆ
ಜೋತು ಬೀಳುತಿಹರು
ಸತ್ತ ಬದುಕಿಗೆ

ಸತ್ಯ ಕಾಣುವ ಕಣ್ಣು
ತಿಳಿಯಲಾರದ ಇವರು
ಸತ್ಯ ಕಾಣುವರೆಂದು
ಹೇಳಿ ನೀವು?



ತೃಷೆಯ ಹೀರುವ ಕಣ್ಣಿಗೆ
ಸತ್ಯವೇ ಆಹಾರವೇನು?
ಜೇನು ಉಣ್ಣುವ ಮನಸು
ಹುಟ್ಟಬೇಕಿದೆ ಈಗ
ಗಟ್ಟಿ ಬದುಕಿನ ಜೀವ
ಸತ್ಯ ಸೃಷ್ಟಿಸಬಹುದು
ವ್ಯರ್ಥವಿದು ಹೊರಗೆ ಹುಡುಕುವುದು

ಹುಟ್ಟು ಹೊರಟಿದೆ ಬರೀ ಸಾವಿನೆಡೆಗೆ
ಗುರಿಯಲ್ಲವಿದುವೆಂದು
ಅರಿವು ಮೂಡುವವರೆಗೆ
ಸಾರ್ಥಕ ಬದುಕಿನ ದಾರಿ
ಸಿಗದು ಯಾರಿಗು

ಬುದ್ಧಿ ಮನಸುಗಳ ವೈಮುಖ
ಎಂಥ ಗಂಡಾಂತರ
ಎಂಬರ್ಥ ತಿಳಿವುದೆಂದು?

**ಅರ್ಜುನ ಕೋರಟಕರ**
'ಭಾವಜ್ಞ', ಶ್ರೀ ರಾಘವೇಂದ್ರ ಬೋರ್ಡಿಂಗ್
ಜಮಖಂಡಿ - ೫೮೭೩೦೧.

## ಹಿಮಪಾತದ ಸಂಜೆ

ಇದು ಯಾರ ವನವೆಂದು ಅರಿತಿರುವೆ ನಾನು
ಅವನ ಮನೆಯಿರುವುದು ದೂರದ ಹಳ್ಳಿಯಲಿ
ನಾನಿಂತು ನೋಡುತಿರುವುದವನರಿಯಲಾರ
ಹಿಮತುಂಬಿ ಹರಿಯುವ ಕಾಡಿನ ಸೊಬಗನ್ನು



ನನ್ನ ಪುಟ್ಟ ಕುದುರೆಗಿಂದು ವಿಸ್ಮಯವಾಗಿಹುದು
ತೋಟದ ಮನೆಯಿರದೆಡೆ ನಾ ನಿಂತ ಕಾರಣವು
ಹಿಮಗಟ್ಟಿದಾ ಕೊಳದ ಜೊತೆ ದಟ್ಟ ಕಾಡು
ಕಾರ್ಗತ್ತಲಿನಾ ಲೋಕದಲಿ ಕರಗಿ ಹೋಗಿಹುದು

ಎಚ್ಚರಿಸಲೆಂದವನು ಗಂಟೆಯನು ಬಾರಿಸಿದ
ತಪ್ಪಿ ನಿಂತಿಹೆನೆಂದು ಜ್ಞಾಪಿಸಲೆಂಬಂತೆ
ಶಾಂತ ಸಾಗರದ ಮತ್ತೊಂದು ಸಪ್ಪಳವು
ಹಿಮದ ಮೇಲ್ಮೈಮೇಲೆ ಬೀಸುವ ತಂಗಾಳಿ

ಕತ್ತಲಿನ ಲೋಕದ ವನವಿಂದು ಸುಂದರವು
ಆದರೆ ನನಗಿಂದು ಬಹಳ ಕೆಲಸಗಳಿವೆ
ನಿದ್ರಿಸುವ ಮೊದಲು ದೂರ ಪಯಣಿಸಬೇಕು
ನಿದ್ರಿಸುವ ಮೊದಲು ದೂರ ಪಯಣಿಸಬೇಕು.

**(ಮೂಲ : ರಾಬರ್ಟ್ ಫ್ರಾಸ್ಟ್) ಅನುವಾದ** : ವಿ. ಗಣೇಶ
ಇಂಗ್ಲಿಷ್ ಉಪನ್ಯಾಸಕರು, ಸರ್ಕಾರಿ ಪದವಿ ಪೂರ್ವ ಕಾಲೇಜು
ಸಾಗರ - ಶಿವಮೊಗ್ಗ ಜಿಲ್ಲೆ.

## ಸಾಮೂಹಿಕವಾಗಿ ತಲೆ ತಗ್ಗಿಸೋಣ

ಮುಂಗೋಳಿಯ ಬದಲು
ಕಾಗೆ ಕೂಗಿತ್ತು;
ಅದರ ಕಂಠಪೂರ್ತಿ ಪಿಂಡದ ಕೂಳು;

ಆಕಾಶವನ್ನು ನೋಡಲೇ
ನ್ಯೂಸ್‌ಪೇಪರ್ ನೆಗೆಟಿವ್!
ಕಪ್ಪು ಕಾಗದದ ಮೇಲೆ
ಅಳಿಸಿ ಹೋಗುತ್ತಿರುವ ನಕ್ಷತ್ರ ಲಿಪಿ.

ಎಷ್ಟು ಕಾದರೂ
ಆಕಾಶ ಕೆಂಪಾಯಿತೇ ವಿನಃ
ಬೆಳಗಾಗಲಿಲ್ಲ.

ಗಾಬರಿಯಿಂದೆದ್ದ ವಾಚ್‌ಮೆನ್‌ಗೆ ಒಂದೇ ಸಂದೇಹ
ಆದಿ ಸಂಧ್ಯೆಯೋ? ಅಂತ್ಯ ಸಂಧ್ಯೆಯೋ?
ಸೂರ್ಯನು ಹುಟ್ಟುವಾಗಲೂ ಮುಳುಗುವಾಗಲೂ
ದಿಕ್ಕುಗಳು ರಕ್ತಸಿಕ್ತವಾಗುತ್ತವೆ.

ಪತ್ರಿಕೆ ತಡವಾದಂತೆ
ಈ ದಿನ ಹೊತ್ತೇರುವುದೂ ತಡವಾಗಿದೆ
ಮುಖ್ಯ ಶೀರ್ಷಿಕೆಗಳ ಹಾಕಬೇಕಾದವನೇ
ಪತಾಕೆಯ ಮೇಲೆ ವಾಯುಪುತ್ರನಾದ

ನಿದ್ದೆಯಿಂದೇಳಿಸುವ ಕೋಳಿಗಾರೋ ನಿದ್ದೆಗುಳಿಗೆ ಹಾಕಿದರು
ಅವರ ಹುಚ್ಚುತಾನೆ
ಮಲಗಿದ ಮನಸು ಕನಸು ಕಾಣದೇ?
ಒಂದು ಕನಸಿನಲ್ಲೇ ಸಾವಿರ ಕೂಗುಗಳು.



ನಿದ್ದೆಯಲ್ಲಿ ಕೂಗಿದ ಕೋಳಿಯನ್ನು
ನಿದ್ದೆಯಲ್ಲಿಯೇ ಕೊಂದು ತಿಂದರು

ನಿದ್ದೆ ಹೋಗದ ಪೇಪರ್ ಬಾಯ್
ಅವಸರದಿಂದ ಹೊತ್ತಿನ ಬುತ್ತಿಯ ಬಿಚ್ಚಿದನು
ಕೆಂಪನೆ ನಿಷಿದ್ಧ ಪ್ರಸಾದ

ಆ್ಯಡಮ್ ತಿನಬಾರದ ಏಡನ್ ವನದ ಫಲವು;

ನಿನ್ನೆ ರಾತ್ರಿ ನೆಲ ಮುಟ್ಟಿ ಎದೆಯೊಡೆದ
ಯಾವ ಗಗನ ಬೀಜವೋ
ಮೊಳಕೆಯೊಡೆದು ಪ್ರಥಮಫಲ ಪಡೆದಿರಬೇಕು.

ನಾಚಿಕೆ ಪಡುವುದಕ್ಕಾದರೂ ಸೇರಿ
ಅನುಭವಿಸೋಣ ಬನ್ನಿ!
(ಜರ್ನಲಿಸ್ಟ್ ರಸೂಲ್‌ಗಾಗಿ)

**ತೆಲುಗು ಮೂಲ : ಸತೀಶ್ ಚಂದರ್**
**ಕನ್ನಡಾನುವಾದ : ಗುರುಮೂರ್ತಿ ಪೆಂಡಕೂರು**

# ಆರ್ಯರ ಪ್ರಶ್ನೆ - ಸುಳ್ಳು ಕುದುರೆಯ ಸಾಕ್ಷ್ಯ

**ಡಾ॥** ಎನ್. ಎಸ್. ರಾಜಾರಾಂ ಅವರ ಸಂಶೋಧನೆಗಳ ಒಂದು ತೀರ್ಮಾನ ಇದು : ವೇದಗಳು ಮತ್ತು ಪ್ರಾಚೀನ ಸಂಸ್ಕೃತ ಭಾಷೆಯು ಮಧ್ಯ ಏಷ್ಯಾ ಅಥವಾ ಯೂರೇಷಿಯಾ ಅಥವಾ ಯೂರೋಪು ಖಂಡದಿಂದ ಬಂದ ಆಕ್ರಮಣಕಾರರಿಗೆ ಸೇರಿದುದು ಎಂಬ ಅಭಿಪ್ರಾಯವು ಹತ್ತೊಂಬತ್ತನೆಯ ಶತಮಾನದ ಮಧ್ಯಭಾಗದಿಂದ ಅಥವಾ ಸ್ಥೂಲವಾಗಿ ಹೇಳುವುದಾದರೆ ಭಾರತದ ಮೇಲೆ ಬ್ರಿಟಿಷರು ತಮ್ಮ ನಿಯಂತ್ರಣವನ್ನು ಸಾಧಿಸಿದಾಗಿನಿಂದ ಪ್ರಚಾರಕ್ಕೆ ತಂದ ಅಭಿಪ್ರಾಯ. ಈ ಬಗೆಯ ಅಭಿಪ್ರಾಯವನ್ನು ಪ್ರಚಾರ ಮಾಡುವುದರಲ್ಲಿ ಕ್ರೈಸ್ತ ಮತ ಪ್ರಚಾರಕರ, ಮಾರ್ಕ್ಸ್‌ವಾದಿಗಳ ಮತ್ತು ಬ್ರಿಟಿಷ್ ವಸಾಹತುಶಾಹಿಗಳ ಪಿತೂರಿ ಇದೆ. ''ಪ್ರತಿಯೊಂದು ಯುಗವೂ ಚರಿತ್ರೆಯನ್ನು ತನ್ನದೇ ಆದ ಅನುಭವಗಳು ಹಾಗೂ ನಂಬಿಕೆಗಳ ಬೆಳಕಿನಲ್ಲಿ ನೋಡುತ್ತದೆ ಎಂಬುದಕ್ಕೆ ಈ ಆರ್ಯರ ಆಕ್ರಮಣವಾದವು ನಿದರ್ಶನವಾಗಿದೆ. ಬ್ರಿಟಿಷರ ವಸಾಹತುಶಾಹಿ ಉತ್ಪನ್ನವಾದುದರಿಂದ ಆರ್ಯರ ಆಕ್ರಮಣವಾದವು ಯೂರೋಪು ಕೇಂದ್ರವುಳ್ಳದ್ದಾಗಿರುವುದು ಸಹಜ'' ಎಂಬುದು ಡಾ॥ ರಾಜಾರಾಂ ನಿಲುವು.

ಪೂರ್ವಾಗ್ರಹ ರಹಿತರಾದ ವಿದ್ವಾಂಸರು ಚರಿತ್ರೆಯನ್ನು, ಅದರಲ್ಲೂ ಪ್ರಾಚೀನಕಾಲದ ಚರಿತ್ರೆಯನ್ನು, ಲಭ್ಯವಿರುವ ಸಾಮಗ್ರಿಗಳ ಆಧಾರದಿಂದ ಸಾಧ್ಯವಿದ್ದಷ್ಟು ವಸ್ತುನಿಷ್ಠವಾಗಿ ರಚಿಸಬೇಕು, ರಚಿಸಲಾಗುತ್ತದೆ ಎಂದು ಸಾಮಾನ್ಯವಾಗಿ ಹೇಳುತ್ತಾರೆ. ಆದರೆ ರಾಜಾರಾಂ ತಾಳುವ ನಿಲುವು ತದ್ವಿರುದ್ಧವಾಗಿರುವಂತಿದೆ. 'ಪ್ರತಿಯೊಂದು ಯುಗವೂ ಚರಿತ್ರೆಯನ್ನು ತನ್ನದೇ ಆದ ಅನುಭವಗಳು ಹಾಗೂ ನಂಬಿಕೆಗಳ ಬೆಳಕಿನಲ್ಲಿ' ರಚಿಸುತ್ತಾ ಹೋದರೆ ಚರಿತ್ರೆಯ 'ಚಾರಿತ್ರಿಕತೆಗೆ' ಧಕ್ಕೆಯಾಗುವುದಿಲ್ಲವೆ ? ಕಾಲ ಕಾಲಕ್ಕೆ ಬದಲಾಗುವ ರಾಜಕೀಯ, ಮತ ಧಾರ್ಮಿಕಾದಿ ಪರಿಸ್ಥಿತಿ, ನಂಬಿಕೆಗಳಿಗೆ ಅನುಗುಣವಾಗಿ ಚರಿತ್ರೆಯನ್ನು ತಿದ್ದಿ ರಚಿಸಬೇಕೆಂದು ರಾಜಾರಾಂ ಅಭಿಪ್ರಾಯವೆ ? ಇಂಥ ಒಂದು ಪೂರ್ವಭಾವಿ ನಿರ್ಣಯವನ್ನಿಟ್ಟುಕೊಂಡೆ ರಾಜಾರಾಂ ಸಂಶೋಧನೆಯಲ್ಲಿ ತೊಡಗಿದ್ದಾರೆಯೆ ? ವಾಸ್ತವವಾಗಿ ಭಾರತದಲ್ಲಿ ಬದಲಾದ ರಾಜಕೀಯ ಹವಾಮಾನಕ್ಕೆ ತಕ್ಕ ಹಾಗೆ ಪ್ರಾಚೀನ ಚರಿತ್ರೆಯನ್ನು ತಿದ್ದುವುದೇ ಡಾ॥ ರಾಜಾರಾಂ ಮತ್ತು ಅವರ ಕೆಲವು ಸಂಗಡಿಗರು ಕೈಗೊಂಡಿರುವ 'ಸಂಶೋಧನೆ'ಯ ಉದ್ದೇಶ ಎಂಬುದು ದೇಶ - ವಿದೇಶಗಳ ಪ್ರಸಿದ್ಧ ವಿದ್ವಾಂಸರ ಅಭಿಪ್ರಾಯವಾಗಿದೆ.

ಈವರೆಗಿನ ಅಧ್ಯಯನಗಳನ್ನು ಡಾ॥ ರಾಜಾರಾಂ ಸಂಗ್ರಹಿಸಿರುವುದು ಹೀಗೆ : ಆರ್ಯರ ಆಕ್ರಮಣ ಸಿದ್ಧಾಂತವನ್ನು ಭಾರತದ ಪುರಾತತ್ವಶಾಸ್ತ್ರವು ಇನ್ನೂ ಪ್ರಾರಂಭಿಕ ಹಂತದಲ್ಲಿದ್ದಾಗ ರೂಪಿಸಲಾಯಿತು. ಆಗ ಜೀವಶಾಸ್ತ್ರ, ಪರಿಸರಶಾಸ್ತ್ರ ಇತ್ಯಾದಿ ಕ್ಷೇತ್ರಗಳ ವೈಜ್ಞಾನಿಕ ಮಾಹಿತಿಯು ಲಭ್ಯವಿರಲಿಲ್ಲ. ಸಂಸ್ಕೃತ ಭಾಷೆ ಹಾಗೂ ಅದಕ್ಕೂ ಯೂರೋಪಿನ ಹಲವು ಭಾಷೆಗಳಿಗೂ ಇರುವ ಹತ್ತಿರದ ಸಂಬಂಧವನ್ನು ಕಾಣುವುದರ ಆಚೆಗೆ ಹೋಗಲು ವಿದ್ವಾಂಸರಿಗೆ ಸಾಧ್ಯವಾಗಿರಲಿಲ್ಲ. ಇದರಿಂದಾಗಿ ಅವರು ಸರ್ವೇಸಾಮಾನ್ಯವಾದ ಒಂದು ಪುರಾತನ ಭಾಷೆಯನ್ನು, ಆರ್ಯರ ನಿವಾಸ ಸ್ಥಳವೆಂದು ಹೆಸರಿಸುವ ಒಂದು ಪ್ರದೇಶವನ್ನು ಊಹಿಸಿಕೊಂಡರು. ಈಗ ಅದನ್ನು 'ಇಂಡೋ - ಯೂರೋಪಿಯನ್ ನಿವಾಸ ಸ್ಥಳ' ಎಂದು ಕರೆಯಲಾಗುತ್ತದೆ. ಆರ್ಯ ವಲಸೆಗಾರರು ಇಂಡಿಯಾವನ್ನು ಪ್ರವೇಶಿಸಿ ಇಲ್ಲಿನ ಮೂಲನಿವಾಸಿಗಳನ್ನು ತಮ್ಮ ಅಧೀನರನ್ನಾಗಿಸಿಕೊಂಡು ತಮ್ಮ ಭಾಷೆ ಸಂಸ್ಕೃತಿಗಳನ್ನು ಅವರು ಅನುಸರಿಸುವಂತೆ ಮಾಡಿದರು. ಈ ಮೂಲ ನಿವಾಸಿಗಳು ದ್ರಾವಿಡರೆಂದೂ, ಆಕ್ರಮಣಕಾರರಾದ ಆರ್ಯರಿಂದ ಇವರು ದಕ್ಷಿಣಕ್ಕೆ ತಳ್ಳಲ್ಪಟ್ಟರೆಂದೂ ಹೇಳಲಾಗಿದೆ. ವೇದ ಸಾಹಿತ್ಯವನ್ನೂ, ಅದರಲ್ಲೂ ಋಗ್ವೇದವನ್ನು, ಈ ಸಿದ್ಧಾಂತದ ಬೆಳಕಿನಲ್ಲಿ ವ್ಯಾಖ್ಯಾನಿಸಲಾಗಿದೆ.

ಅಲ್ಲಿ ಇಲ್ಲಿ ಅಲ್ಪ ಸ್ವಲ್ಪ ಮತಭೇದವಿರಬಹುದಾದರೂ ಒಟ್ಟಿನ ಮೇಲೆ ಇದು ಸರಿಯಾಗಿದೆಯೆಂದಿಟ್ಟುಕೊಳ್ಳೋಣ.

*'ಹೊಸತು' ವಿಶೇಷ ಸಂಚಿಕೆಯಲ್ಲಿ (ಜನವರಿ, ೨೦೦೧) 'ಆರ್ಯರ ಪ್ರಶ್ನೆ - ಭಾಷಾಶಾಸ್ತ್ರದ ಉತ್ತರ' ಎಂಬ ಲೇಖನವೊಂದು ಪ್ರಕಟವಾಗಿರುವುದು ಸರಿಯಷ್ಟೆ. ಡಾ॥ ನವರತ್ನ ರಾಜಾರಾಂ ಅವರ 'ಸರಸ್ವತೀ ನದಿಯಿಂದ ಸಿಂಧೂ ಲಿಪಿವರೆಗೆ' (ಕನ್ನಡ ಸಂಗ್ರಹ : ಬೇಲೂರು ಸುದರ್ಶನ) ಎಂಬ ಪುಸ್ತಕದಲ್ಲಿ, ಪ್ರಾಚೀನ ಭಾರತದ ಇತಿಹಾಸವನ್ನು ಅವಲೋಕಿಸುವಾಗ 'ಇಂಡೋ-ಆರ್ಯನ್' ಮತ್ತು ದ್ರಾವಿಡ ಭಾಷೆಗಳ ವ್ಯತ್ಯಾಸವನ್ನು ಹೇಗೆ ಕಡೆಗಣಿಸಲಾಗಿದೆ; ಭಾಷಾ ವಿಜ್ಞಾನವು ಒದಗಿಸುವ ಸಾಕ್ಷ್ಯಗಳನ್ನು ಹೇಗೆ ತಿರಸ್ಕರಿಸಲಾಗಿದೆ- ಎಂದು ತೋರಿಸುವುದು ಮಾತ್ರ ಆ ಬರವಣಿಗೆಯ ಉದ್ದೇಶವಾಗಿತ್ತು. ಇಂದು 'ಪ್ರಾಚೀನ ಭಾರತ ಮತ್ತು ಆರ್ಯರ' ಚರ್ಚೆ ಭಾಷಾಶಾಸ್ತ್ರಕ್ಕಷ್ಟೇ ಸೀಮಿತವಾಗಿ ಉಳಿದಿಲ್ಲ. ಡಾ॥ ಎನ್. ಎಸ್. ರಾಜಾರಾಂ ಮತ್ತು ನಟವರ ಝಾ ಜೊತೆಗೂಡಿ 'ಸಿಂಧೂಲಿಪಿಯ ಅರ್ಥ ವಿಶ್ಲೇಷಣೆ' ಎಂಬ ಗ್ರಂಥ ರಚಿಸಿದ್ದಾರೆ. ಈ ಪುಸ್ತಕದ 'ಸಂಶೋಧನೆ'ಯನ್ನು ಅನೇಕ ವಿದ್ವಾಂಸರು ಕಟುವಾಗಿ ಟೀಕಿಸಿದ್ದಾರೆ. ಅದಕ್ಕೆ ಡಾ॥ ರಾಜಾರಾಂ 'ಆರ್ಯರ ಆಕ್ರಮಣವನ್ನು ಮೀರಿದ ಅವಲೋಕನ' ಎಂಬ ಪತ್ರಿಕಾಲೇಖನ ಬರೆದಿದ್ದಾರೆ. ಇದರಲ್ಲಿ ಹೊಸದೇನೂ ಹೇಳಿಲ್ಲ. ಆ ಬಗ್ಗೆ ಒಂದು ವಿಶ್ಲೇಷಣೆ ಮತ್ತು ವಿಮರ್ಶೆ.*

ಆದರೆ, ಹತ್ತೊಂಬತ್ತನೆ ಶತಮಾನದ ಉತ್ತರಾರ್ಧದಲ್ಲಿ ಆಗಲೆ ತೌಲನಿಕ ಭಾಷಾ ವಿಜ್ಞಾನವು (ದ್ರಾವಿಡ ಭಾಷಾ ವಿಜ್ಞಾನವು) ಪ್ರೌಢವಾಗಿ ಬೆಳೆದಿತ್ತು. ದ್ರಾವಿಡ ಭಾಷೆಗಳು 'ಇಂಡೋ - ಯೂರೋಪಿಯನ್' ಅಥವಾ 'ಇಂಡೋ - ಆರ್ಯನ್'. ವರ್ಗಕ್ಕೆ ಸೇರದೆ ತಮ್ಮದೇ ಪ್ರತ್ಯೇಕ ವರ್ಗವಾಗಿ ನಿಲ್ಲುತ್ತವೆಯೆಂದು ಖಚಿತವಾಗಿ ಪ್ರತಿಪಾದಿಸಲಾಗಿತ್ತು. ಮೂಲ ದ್ರಾವಿಡ ಭಾಷೆಯನ್ನು ಸುಮೇರಿಯನ್, ಕೊರಿಯನ್, ಆಫ್ರಿಕನ್, ಪ್ರಾಚೀನ ಮೆಡಿಟರೇನಿಯನ್ ಅಥವಾ ಅಲ್ಟ್ಯಾ ಮತ್ತು ಉರಲಿಕ್ ಮುಂತಾದ ಭಾಷೆಗಳೊಡನೆ ಗುರುತಿಸುವ ಪ್ರಯತ್ನಗಳೂ ನಡೆದಿದ್ದವು. ಈ ಅಧ್ಯಯನಗಳಾವುವನ್ನೂ ಡಾ॥ ರಾಜಾರಾಂ ಗಮನಕ್ಕೆ ತಂದುಕೊಳ್ಳುವುದಿಲ್ಲವೆಂಬುದು ವಿಷಾದದ ಸಂಗತಿ, ಇರಲಿ.

ಪ್ರಾಚೀನ ಭಾರತದ ಪಶುಸಂಪತ್ತು, ಅದರಲ್ಲಿಯೂ ಕುದುರೆಯ ವಿಚಾರದಲ್ಲಿ, ಡಾ॥ ರಾಜಾರಾಂ ಹೇಳುವ ಕೆಲವು ವಿಚಾರಗಳು ಕುತೂಹಲಕರವಾಗಿವೆ. ಅವರ ಅಭಿಪ್ರಾಯವನ್ನು ಮೊದಲು ಗಮನಿಸಬಹುದು: ''ಭಾರತದ ಪಶುಸಂಪತ್ತು ಬ್ಯಾಂಟೆಂಗ್ ಎಂದು ಕರೆಯುವ ಆಗ್ನೇಯ ಏಷ್ಯಾದ ವನ್ಯ ಪಶುಗಳನ್ನು ಮನೆಗಳಲ್ಲಿ ಸಾಕಿಕೊಳ್ಳುವ ಮೂಲಕ ಉತ್ಪತ್ತಿಯಾದ ರೂಪವೆಂದು ಗೊತ್ತಾಗುತ್ತದೆ. ಹಾಗೆಯೇ ಭಾರತದ ಕುದುರೆಯು 'ಶಿವಾಲಿಕ್ ಕುದುರೆ' ಎಂದು ಕರೆಯಲಾಗುವ ಪ್ರಾಚೀನ ಕುದುರೆಗೆ ಹತ್ತಿರದ ಒಂದು ವಿಶೇಷ ತಳಿಯಾಗಿದೆ. ಋಗ್ವೇದದಲ್ಲಿ ವರ್ಣಿತವಾಗಿರುವ ಕುದುರೆಯು ಇದು ಅಥವಾ ಇದಕ್ಕೆ ಹತ್ತಿರದ ಸಂಬಂಧಿಯಾದುದೇ ಹೊರತು ಮಧ್ಯ ಏಷ್ಯಾ ಅಥವಾ ಯೂರೇಷಿಯಾದ ಮಾದರಿಯಲ್ಲ. ಋಗ್ವೇದವು ಕುದುರೆಗೆ ಮೂವತ್ನಾಲ್ಕು ಎದೆ ಮೂಳೆಗಳಿರುವುದಾಗಿ ವರ್ಣಿಸುತ್ತದೆ. ಮಧ್ಯ ಏಷ್ಯಾ ಮಾದರಿಗೆ ಇರುವುದು ಮೂವತ್ತಾರು ಎದೆ ಮೂಳೆಗಳು. ಹೀಗಾಗಿ ಮಧ್ಯ ಏಷ್ಯಾದಿಂದ ತರುವವರೆಗೆ ಭಾರತೀಯರಿಗೆ ಕುದುರೆಯ ಪರಿಚಯವಿರಲಿಲ್ಲ ಎಂಬ ಪ್ರಚಲಿತ ನಂಬಿಕೆಗೆ ವಿಜ್ಞಾನದ ಬೆಂಬಲವಿರುವುದಿಲ್ಲ'' (ದಿ **ಹಿಂದೂ** ಪತ್ರಿಕೆಯ ಲೇಖನ, ಡಿ. ೧೯, ೨೦೦೦).

ಕರ್ನಾಟಕದ ಪ್ರಸಿದ್ಧ ಭಾಷಾಶಾಸ್ತ್ರಜ್ಞರಲ್ಲೊಬ್ಬರಾಗಿದ್ದ ಪ್ರೊ॥ ತೀ. ನಂ. ಶ್ರೀಕಂಠಯ್ಯನವರು ಬೇರೊಂದು ಸಂದರ್ಭದಲ್ಲಿ ಕುದುರೆಯ ಪರಿಚಯಕ್ಕೆ ಸಂಬಂಧಿಸಿದ ಲೇಖನವೊಂದನ್ನು ಬರೆದಿದ್ದಾರೆ (**ಕುದುರೆ**, ಸಮಾಲೋಕನ - ೧೯೯೬; ಪು. ೨೪೨-೪೫). ಭವಭೂತಿಯ 'ಉತ್ತರ ರಾಮಚರಿತ'ದಲ್ಲಿ (೪.೨೬) ಶ್ರೀರಾಮನ ಯಾಗದ ಕುದುರೆಯು ವಾಲ್ಮೀಕಿ ಮುನಿಯ ಆಶ್ರಮಕ್ಕೆ ಬಂದಾಗ ಈ

**ಡಾ॥ ಕೆ. ಎಲ್. ಗೋಪಾಲಕೃಷ್ಣಯ್ಯ**

ಜಾತಿಯ ಪ್ರಾಣಿಯನ್ನು ಅಲ್ಲಿನ ವಟುಗಳು ಮೊಟ್ಟ ಮೊದಲನೆಯ ಸಲ ಕಂಡು, ಸಡಗರದಲ್ಲಿ ಲವನ ಬಳಿಗೆ ಬಂದು ಅದನ್ನು ವರ್ಣಿಸುತ್ತಾರೆ :

''ಅದಕ್ಕೆ ಹಿಂದುಗಡೆ ತುಂಬು ಬಾಲ, ಅದನ್ನು ಸುಮ್ಮನೆ ಅಲ್ಲಾಡಿಸುತ್ತಿರುತ್ತದೆ; ಅದರ ಕತ್ತು ನೀಳ; ಗೊರಸುಗಳು ನಾಲ್ಕೇ ನಾಲ್ಕು ; ಗರಿಕೆಯನ್ನು ಮೇಯುತ್ತದೆ ; ಮಾವಿನಕಾಯಿ ಗಾತ್ರದ ಲದ್ದಿಯನ್ನು ಹಾಕುತ್ತದೆ. ವಿವರಿಸುವುದೇನು ? ಅದು ದೂರ ದೂರ ಹೋಗಿಬಿಡುತ್ತದೆ, ಬಾ ಬಾ, ನಾವು ಹೋಗುತ್ತೇವೆ'' – ಎಂದು ಅದನ್ನು ನೋಡಲು ಲವನನ್ನು ಎಳೆದುಕೊಂಡು ಹೋಗುತ್ತಾರೆ.

– ಹೀಗೆ ಆಶ್ರಮದ ವಟುಗಳಿಗೆ ಮಾತ್ರವಲ್ಲ, ಮಾನವ ಜಾತಿಗೆ ಹಿಂದೊಮ್ಮೆ - ಅಷ್ಟೇನೂ ದೂರವಲ್ಲದ ಕಾಲದಲ್ಲಿ - ಕುದುರೆ ಬೆರಗಿನ ವಸ್ತುವಾಗಿದ್ದಿತು. ಮನುಷ್ಯರು ಕುದುರೆಯನ್ನು ಪಳಗಿಸಿದ್ದು ಇತ್ತೀಚೆಗೆ ; ಹಸು, ಕುರಿ, ಆಡು, ನಾಯಿ, ಹಂದಿ ಮೊದಲಾದ ಪ್ರಾಣಿಗಳನ್ನು ಪಳಗಿಸಿ ಎಷ್ಟೋ ಕಾಲವಾದ ಮೇಲೆ. ಕುದುರೆಯ ಸವಾರಿಗೆ ಮನುಷ್ಯನು ಮೊಟ್ಟಮೊದಲು ಪ್ರಾರಂಭಿಸಿದ್ದು ಬಹುಶಃ ಮಧ್ಯ ಏಷ್ಯಾದಲ್ಲೆಂದೂ, ಬೆಬಿಲೋನಿಯಾದಲ್ಲಿ ಅದು ಕಾಣಿಸಿಕೊಂಡದ್ದು ಕ್ರಿ. ಪೂ. ೨೦೦೦ದ ಸುಮಾರಿನಲ್ಲೆಂದೂ ತಿಳಿದುಬರುತ್ತದೆ. ಅಂತೂ ಈಜಿಪ್ಟ್ ಮೊದಲಾದ ದೇಶಗಳಲ್ಲಿ ನಾಗರಿಕತೆ ಪ್ರಬಲಿಸಿ ಎಷ್ಟೋ ಕಾಲವಾಗಿದ್ದಾಗಲೂ ಈ ಪ್ರಾಣಿ ಮಾತ್ರ ಕಡಿವಾಣಕ್ಕೆ ಸಿಕ್ಕದೆ, ಜೀನಿನ ಭಾರವನ್ನರಿಯದೆ ಕಾಡುಮೇಡುಗಳಲ್ಲಲ್ಲೋ ವಿಹರಿಸುತ್ತಾ ಆಕಸ್ಮಿಕವಾಗಿ ಜನರ ಕಣ್ಣಿಗೆ ಕಾಣಿಸಿಕೊಂಡು ಅಲ್ಲಿಂದಲ್ಲೇ ಮಿಂಚಿನಂತೆ ಮಾಯವಾಗುತ್ತಿದ್ದಿರಬೇಕು........

ಇಂಡೋ-ಯೂರೋಪಿಯನ್ ಮೂಲಭಾಷೆಯಲ್ಲಿ ಇದಕ್ಕಿದ್ದ ಹೆಸರು ಸಂಸ್ಕೃತದಲ್ಲಿ 'ಅಶ್ವ' ಎಂಬ ರೂಪದಲ್ಲಿ ನಿಂತಿತು. ಆದರೆ ಒಂದೆರಡು 'ಕ್ಷುಲ್ಲಕ' ಭಾಷೆಗಳನ್ನು ಬಿಟ್ಟರೆ ಭರತಖಂಡದಲ್ಲಿ ವ್ಯವಹಾರದಲ್ಲಿರುವ ಯಾವ ಆರ್ಯಭಾಷೆಗೂ ಈ ಅಶ್ವ ಎಂಬ ಶಬ್ದವು ಕ್ರಮಾಗತವಾಗಿ ಇಳಿದುಬರಲಿಲ್ಲ. ಹಿಂದಿ, ಬಂಗಾಳಿ, ಮರಾಠಿ ಮೊದಲಾದ ಭಾಷೆಗಳಲ್ಲೆಲ್ಲಾ ಬಳಕೆಯಲ್ಲಿರುವ ಶಬ್ದ 'ಘೋಡಾ' - ಅಶ್ವ ಎಂದಲ್ಲ (ಭರತಖಂಡದ ಎಲ್ಲ ಭಾಷೆಗಳಲ್ಲೂ ಕುದುರೆಗಿರುವ ಹೆಸರುಗಳ ಪಟ್ಟಿಯನ್ನು Linguistic Survey of India, Vol.I, Part 2, ಪು. ೧೬೦-೧೬೧ರಲ್ಲಿ ನೋಡಬಹುದು).

ಡಾ॥ ರಾಜಾರಾಂ ಮತ್ತು ನಟವರ ಝಾ ಅವರು ಹರಪ್ಪ ಮುದ್ರೆಯೊಂದರಲ್ಲಿ ಕುದುರೆಯ ಚಿತ್ರವಿದೆಯೆಂದು ಹೇಳುತ್ತಾರೆ. ಇದೇಕೆಂದರೆ, ಋಗ್ವೇದವೇ ಮೊದಲಾದ ವೈದಿಕ ಸಂಹಿತೆಗಳಲ್ಲಿ ವಿಪುಲವಾಗಿ ದೊರೆಯುವ ಕುದುರೆ ಮತ್ತು ರಥಗಳ ಪ್ರಸ್ತಾಪವು ಸಿಂಧೂ ಕಣಿವೆಯ ಉತ್ಖನನಗಳಲ್ಲಿ ಬರುವುದಿಲ್ಲ. ಹರಪ್ಪಾ ನಾಗರಿಕತೆಯು ವೇದಗಳನ್ನು ರಚಿಸಿದ ಆರ್ಯರದಲ್ಲ ಎಂಬುದಕ್ಕೆ ಇದು ಪ್ರಬಲ 'ಋಣಾತ್ಮಕ ಸಾಕ್ಷ್ಯ' ಎಂಬುದು ಸಾಮಾನ್ಯವಾಗಿ ಪ್ರಾಚ್ಯವಸ್ತು ಶಾಸ್ತ್ರಜ್ಞರ ಅಭಿಪ್ರಾಯ. ಆದರೆ ರಾಜಾರಾಂ ಈ ಅಭಿಪ್ರಾಯವನ್ನು ಒಪ್ಪುವುದಿಲ್ಲ. ''ಸಾಕು ಕುದುರೆಗಳು ಯೂರೇಷಿಯಾದ ತಪ್ಪಲಿನಲ್ಲಿ ಇದ್ದಾವು ಎಂಬ ಅಂಶವನ್ನೇ ಅದು ಆರ್ಯರ ಮೂಲಸಾಧನವೆಂದೂ, ವೇದ ನಾಗರಿಕತೆಯು ವಿದೇಶೀಯವೆಂದೂ ವಾದಿಸಲು ಬಳಸಿದ್ದರು..... ಆರ್ಯರ ಆಕ್ರಮಣವಾದದಲ್ಲಿ ವಿಪರೀತ ಆಸಕ್ತಿ ಹೊಂದಿದವರೆಲ್ಲ ಕುದುರೆಗಳ ಅಸ್ತಿತ್ವದ ಬಗ್ಗೆ ಭಾರಿ ಗುಲ್ಲನ್ನು ಎಬ್ಬಿಸಿದ್ದರು'' ಎಂದು ಹೇಳುವ ರಾಜಾರಾಂ ''ಗುಲ್ಲೆಬ್ಬಿಸುವವರ'' ಬಾಯಿ ಬಡಿದು, 'ನೀವು ಇಲ್ಲವೆಂದು ಹೇಳುತ್ತಿದ್ದ ಕುದುರೆ, ಇಗೋ ಇಲ್ಲಿದೆ ನೋಡಿ' - ಎಂದು ಘೋಷಿಸುತ್ತಾರೆ.

ರಾಜಾರಾಂ ತೋರಿಸುವ 'ಕುದುರೆಯ ಚಿತ್ರ'ವನ್ನು ಕುರಿತು ಹಾರ್ವರ್ಡ್ ವಿಶ್ವವಿದ್ಯಾನಿಲಯದಲ್ಲಿ ಸಂಸ್ಕೃತ ಮತ್ತು ಭಾರತಶಾಸ್ತ್ರ ಪ್ರಾಧ್ಯಾಪಕರಾಗಿರುವ ಪ್ರೊ॥ ಮೈಕೆಲ್ ವಿಟ್ಜಲ್ ಅವರು ''ಇಲ್ಲದ ಕುದುರೆಯ ಪುನರುತ್ಥಾನ'' (The Piltdown Horse) ಎಂಬ ಲೇಖನ ಬರೆದಿದ್ದಾರೆ. ಆ ಲೇಖನದ ಮುಖ್ಯಾಂಶಗಳನ್ನೂ ಇಲ್ಲಿ ಸಂಗ್ರಹಿಸಲಾಗಿದೆ.

ಹರಪ್ಪದ ಒಂದು ಮುದ್ರೆಯ ಬರಹವು ರಾಜಾರಾಂ ಪ್ರಕಾರ ''ಅರ್ಕೋ ಹಿ ಅಶ್ವ'' (Sun indeed like the horse [Sic])ಎಂದಿದೆ. ಇದು ಉತ್ತರಕಾಲೀನ ವೇದ ಸಂಸ್ಕೃತ, ಯಜುರ್ವೇದದಲ್ಲಿ ಬರುವ ಒಂದು ಸಂದರ್ಭ. ಇದರೊಡನೆ ಕುದುರೆಯ ಒಂದು ಚಿತ್ರವೂ ಇದೆಯಂತೆ. ಆದರೆ ಈ ಚಿತ್ರವಿರುವುದು ಒಂದು ತುಂಡಾದ ಮುದ್ರೆಯ ಮೇಲೆ; ಕುದುರೆಯ ಮುಂಭಾಗವು ಕಾಣೆಯಾಗಿದ್ದು, ಉಳಿದಿರುವ ಹಿಂಭಾಗವು 'ಏಕಶೃಂಗೀ ವೃಷಭ'(ಒಂದೇ ಕೊಂಬಿನ ಹೋರಿ)ದ ಹಿಂಭಾಗವನ್ನು ಹೋಲುತ್ತದೆ. ಸ್ಫುಟವಾದ ಮೂಲ ಚಿತ್ರದಿಂದ ಮಸಕು ಮಸಕಾಗಿ ತೋರಿಸಲ್ಪಟ್ಟಿರುವ ಮುದ್ರೆಯ ಬಿರುಕಿನ ಗೆರೆಯು ರಾಜಾರಾಂ ಅವರಿಂದ ಕುದುರೆಯ ಕತ್ತು ಮತ್ತು ತಲೆಗಳಾಗಿ ಪುನರ್ನಿರ್ಮಾಣಗೊಂಡಿವೆ; ಕಲಾವಿದನೊಬ್ಬನ ಮನದಲ್ಲಿ ಮೂಡಿದ ಚಿತ್ರವನ್ನು ಇಲ್ಲಿ ಕಾಣಬಹುದು.

ಲೇಖಕರು ಮೂಲ ಚಿತ್ರದ ಸಂದರ್ಭಸೂಚಿಯನ್ನು ತುಂಬ ಕೆಟ್ಟದಾಗಿ ಒದಗಿಸಿರುವುದರಿಂದ ಸಾಮಾನ್ಯ ಓದುಗರು ಮೂಲವನ್ನು ಪತ್ತೆ ಹಚ್ಚುವುದು ಸಾಧ್ಯವಾಗಲಿಕ್ಕಿಲ್ಲ. ಆದರೆ, ಈ ವಿಷಯಗಳನ್ನು ಒಳಹೊಕ್ಕು ನೋಡಿದವರಿಗೆ ಇದು ತೊಡಕಲ್ಲ. ಏಕೆಂದರೆ ಎ. ಪಾರ್ಪೋಲ ಅವರ ಸಿಂಧೂ ಮುದ್ರಿಕೆಗಳ ಅದ್ಭುತ ಛಾಯಾಚಿತ್ರಗಳು ಮತ್ತು ಅನುಕ್ರಮಣಿಕೆಯು ಲಭ್ಯವಿದೆ. ವಾಸ್ತವವಾಗಿ ಒಂದೇ ಬರಹದೊಡನೆ ಆ ಬಗೆಯ ಎರಡು ಮುದ್ರೆಗಳಿವೆ. ಎರಡರಲ್ಲಿಯೂ ಕುದುರೆಯ ಕತ್ತಾಗಲಿ, ತಲೆಯಾಗಲಿ ಇಲ್ಲ. ಇವುಗಳನ್ನು ಕಂಪ್ಯೂಟರ್ ಸಹಾಯದಿಂದ ಉದಾರವಾಗಿ ಹಿಗ್ಗಿಸಿ (ಈ ವಿಚಾರವನ್ನು ಅನಂತರ ರಾಜಾರಾಂ ಖಾಸಗಿಯಾಗಿ ಒಪ್ಪಿಕೊಂಡಿದ್ದಾರೆ) ತೋರಿಸಲಾಗಿದೆ. M-1034 ಮುದ್ರೆಯು ಸ್ಪಷ್ಟವಾಗಿ ತೋರಿಸುವುದು ವೃಷಭದ ಜನನಾಂಗವನ್ನೇ ಹೊರತು ಕುದುರೆಯದನ್ನಲ್ಲ. ಕುದುರೆಯ ಸೃಷ್ಟಿಗಾಗಿ ತಿಣುಕಿದ ರಾಜಾರಾಂ ಎಡವಿದ್ದು ಸ್ಪಷ್ಟವಾಗಿದೆ.

ಅಂದಮೇಲೆ ದೇಶಾಂತರವಾಸಿ (ಅನಿವಾಸಿ) ಬರಹಗಾರರಾದ ರಾಜಾರಾಂ ಅಂತಹವರಿಗೆ ತಮ್ಮ ಸಾಕ್ಷ್ಯಗಳನ್ನು ಮನಸೋ ಇಚ್ಛೆ ಕಲ್ಪಿಸಿಕೊಳ್ಳುವುದಕ್ಕೆ ಸಂಶೋಧಿಸುವುದಕ್ಕೆ ಪ್ರೇರಣೆಯಾದರೂ ಏನು ? ಕೋತಿ ಮತ್ತು ಮಾನವನ ನಡುವೆ ಕಳಚಿದ ಕೊಂಡಿಯನ್ನು ಕೂಡಿಸುವುದಕ್ಕಾಗಿ ೧೯೧೨ರಲ್ಲಿ ಮಾಡಿದ ಸೃಷ್ಟಿಯು 'Pilt Down Man' ಎಂದು ಕುಖ್ಯಾತವಾಗಿದೆ. ರಾಜಾರಾಂ ಅವರ Pilt Down Horse ಕೂಡ ಅದೇ ಮಾದರಿ.

ಲಭ್ಯವಿರುವ 'ಅಶ್ವಮುದ್ರೆ' (ಮೆಕಾಯ್ 453)



ಪುನರ್ನಿರ್ಮಿತಿಗೊಂಡ ಮುದ್ರೆ



ಯಾವುದು ನಿಜವಾಗಿ ಇಲ್ಲವೋ, ಇದ್ದರೆ ಚೆನ್ನಾಗಿತ್ತೆಂದು ಭಾವಿಸಿದರೋ ಅದನ್ನು, ನಕಲಿ ಅವಯವಗಳನ್ನು ಜೋಡಿಸಿ ಸೃಷ್ಟಿಸಲಾಗಿದೆ ಇಲ್ಲಿ! ಹರಪ್ಪಾದಲ್ಲಿ ಕುದುರೆ ಇತ್ತು ಎಂದು ಸ್ಥಾಪಿಸಲು ಮಾಡಲಾದ ಕಸರತ್ತಿನ ಫಲಶ್ರುತಿ ಇದು.

ಕುದುರೆಯೇ ಏಕೆ ? ಏಕೆಂದರೆ, ಪ್ರಾಣಿಶಾಸ್ತ್ರ ಮತ್ತು ಪ್ರಾಚ್ಯವಸ್ತು ಶಾಸ್ತ್ರಗಳಿಂದ ತಿಳಿದುಬರುವ ಹಾಗೆ ದಕ್ಷಿಣ ಏಷ್ಯಾದಲ್ಲಿ ಆಗ ಕುದುರೆಗಳಿರಲಿಲ್ಲ (ಆದರೆ ರಾಜಾರಾಂ ಅವರ ಸಿಂಧೂ ನಾಗರಿಕತೆಗೆ ಕುದುರೆ ಬೇಕಾಗಿತ್ತು). ಉತ್ತರದ ಮೈದಾನ (ಹುಲ್ಲುಗಾವಲು) ಪ್ರದೇಶಗಳಿಂದ ಪಳಗಿಸಿದ ಕುದುರೆ ಮತ್ತು ಆ ಜಾತಿಯ ಇತರ ಪ್ರಾಣಿಗಳನ್ನು ದಕ್ಷಿಣ ಏಷಿಯಾ (ಮತ್ತು ಮೆಸಪೊಟೇಮಿಯಾಕ್ಕೆ) ಸಾಮಾನ್ಯ ಶಕಪೂರ್ವ (BCE - Before common era ಎಂದರೂ B.C. ಎಂದೇ; ಆದರೆ ಕ್ರಿ.ಪೂ. ಎಂಬುದಕ್ಕೆ ಮತಧರ್ಮದ ಸೋಂಕಿರುವುದರಿಂದ ಹಲವು ವಿದ್ವಾಂಸರು B.C. ಬಳಸದೆ B.C.E. ಎನ್ನುತ್ತಾರೆ) ೨ನೇ ಮಿಲಿಯದ ಆರಂಭದಲ್ಲಿ ತರಿಸಿಕೊಳ್ಳಲಾಗುತ್ತಿತ್ತು ಎನ್ನಲಾಗಿದೆ. ಈವರೆಗೆ ಪ್ರಾಚ್ಯವಸ್ತು ಶಾಸ್ತ್ರದಿಂದ ಸಮರ್ಥನೆಗೊಂಡ ಮೊಟ್ಟಮೊದಲ ಮೂಳೆ ದೊರೆತಿರುವುದು ೧೭೦೦ BCE, ಅಂದರೆ ಸಿಂಧೂ ನಾಗರಿಕತೆಯು ಭಗ್ನಾವಶೇಷವಾದ ಸುಮಾರು ಇನ್ನೂರು ವರ್ಷಗಳ ಅನಂತರದಲ್ಲಿ; ಇದು ಸಿಕ್ಕಿರುವುದು ಈಗ ಪಶ್ಚಿಮ ಕೇಂದ್ರದ ಪಾಕಿಸ್ತಾನ ಎಂದು ಕರೆಯಲಾಗುವ ಬೋಲಾನ್ ಕಣಿವೆಯ ಮೈದಾನದ ಕೆಳಪದರಗಳಲ್ಲಿ. ಮಿಕ್ಕ ಎಷ್ಟೋ ಮೂಳೆಗಳನ್ನು ಕುದುರೆ ಮೂಳೆ ಎಂದು ಉತ್ಖನನಕಾರರು ಹೇಳುತ್ತಿದ್ದರೂ ವಾಸ್ತವವಾಗಿ ಅವು ಕಾಡುಗತ್ತೆ (Onager-hemione equus heminomus khur)ಯ ಮೂಳೆಗಳಾಗಿವೆ ಅಥವಾ ಪುರಾತತ್ವಶಾಸ್ತ್ರದ ಪ್ರಕಾರ ಭೂಮಿಯ ಅನಿರ್ದಿಷ್ಟ ಪದರಗಳಲ್ಲಿ ದೊರೆತಿವೆ.

> ## ಏಜೆಂಟರು ಬೇಕಾಗಿದ್ದಾರೆ
>
> *ಹೊಸತು ಪತ್ರಿಕೆಗೆ ಏಜೆಂಟರುಗಳಿಲ್ಲದ ಊರುಗಳಲ್ಲಿ ಪತ್ರಿಕೆಯನ್ನು ಮಾರಾಟ ಮಾಡಬಲ್ಲ ಏಜೆಂಟರುಗಳು ಬೇಕಾಗಿದ್ದಾರೆ. ಆಸಕ್ತಿಯುಳ್ಳವರು ಏಜೆನ್ಸಿ ನಿಯಮಗಳಿಗಾಗಿ ಸಂಪರ್ಕಿಸಿ.*
>
> *ವ್ಯವಸ್ಥಾಪಕರು,* **ಹೊಸತು**

ಆರ್ಯರು ಅನಾದಿ ಕಾಲದಿಂದಲೂ ಭಾರತದ ಮೂಲನಿವಾಸಿಗಳೆಂದು ವಾದಿಸುವ ರಾಜಾರಾಂ, ನಟವರ ಝಾ ಮತ್ತು ಆ ಪಂಥಕ್ಕೆ ಸೇರಿದ ಕೆಲವರಿಗೆ ಅಶ್ವ ಸಮೃದ್ಧವಾದ ಋಗ್ವೇದವು ಸಿಂಧೂ ನಾಗರಿಕತೆಗಿಂತ ಪೂರ್ವದ್ದೆಂದು (೨೬೦೦-೧೯೦೦ BCE) ತೋರಿಸ ಬೇಕಾಗಿದೆ. ಆದ್ದರಿಂದ ಹರಪ್ಪ ಮುದ್ರಿಕೆಗಳಲ್ಲಿ ಕುದುರೆಗಳನ್ನು ರಥಗಳನ್ನು ತರುವುದು ಅಗತ್ಯವಾಯಿತು. ಪುನರುತ್ಥಾನಗೊಂಡ ಕುದುರೆಯ ಮುದ್ರೆಯು ಅವರ ವಾದವನ್ನು ಕೆಲಮಟ್ಟಿಗೆ ಸಮರ್ಥಿಸುವಂತೆ ತೋರಿತು. ಇದರ ಜೊತೆಗೆ ಅರೆಕಾಲುಗಳುಳ್ಳ ಚಕ್ರದಂತೆ ಕಾಣುವ ಒಂದು ಮುದ್ರೆಯನ್ನು ಇವರು ಹುಡುಕಿದ್ದಾರೆ (ಆದರೆ ವಾಸ್ತವವಾಗಿ ಇದು ದಕ್ಷಿಣ ಭಾರತದ ಕುಂಬಾರ ಚಕ್ರ - ತಿಗರಿ - ಅಥವಾ ಅಂಥದೇ ಬೇರಾವುದೋ ವಸ್ತುವಿರಬೇಕು). – ಹೀಗೆ ಕುದುರೆ ಮತ್ತು ಅದಕ್ಕೆ ಸಂಬಂಧಿಸಿದ ಮುದ್ರೆಗಳನ್ನು ಓದಿ ರಾಜಾರಾಂ ಹೇಳುತ್ತಾರೆ : ''ಹರಪ್ಪ ಸಂಸ್ಕೃತಿಯಲ್ಲಿ ಕುದುರೆಗಳಿರಲಿಲ್ಲವೆಂಬ ಮೂಢನಂಬಿಕೆಯನ್ನು ಇಗೋ ಆಧಾರ ಸಹಿತವಾಗಿ ಒಡೆದುಹಾಕಿದ್ದೇವೆ. ಆದರೂ ಆರ್ಯರ ಆಕ್ರಮಣ ಸಿದ್ಧಾಂತದ ಹಾಗೆ – ಸಾಕ್ಷ್ಯಾಧಾರ, ಪಾಂಡಿತ್ಯ ಮತ್ತು ತರ್ಕಕ್ಕೆ ಜಗ್ಗದ ಹಾಗೆ – ಅದು ಇನ್ನೂ ಬಿಗಿಯಾಗಿ ಕಚ್ಚಿಕೊಂಡೇ ಇದೆ'' ಎಂದು.

ರಾಜಾರಾಂ ಮತ್ತು ಝಾ ಉಳಿದ ಮುದ್ರಿಕೆಗಳನ್ನು ಓದಿರುವುದು ಕೂಡ ಇದೇ ಧಾಟಿಯಲ್ಲಿ ಎಂಬುದು ಆಶ್ಚರ್ಯದ ಸಂಗತಿಯಲ್ಲ. ಇವರು ಮುದ್ರಿಕೆಗಳನ್ನು ಸಿಂಧೂ ಕಣಿವೆಯ ಜನರು ಆಡುತ್ತಿದ್ದರೆಂದು ಭಾವಿಸುವ ಉತ್ತರಕಾಲೀನ ಸಂಸ್ಕೃತದಲ್ಲಿ ಬರೆಯಲಾಗಿದೆಯೆಂದು ಹೇಳುತ್ತಾರೆ. ಈ ಮುದ್ರೆಗಳು ಸಮಾನಾರ್ಥಕ ವೈದಿಕ ನಿಘಂಟಿನ (ಯಾಸ್ಕನ ನಿರುಕ್ತದಲ್ಲಿ ರಕ್ಷಿಸಿಕೊಂಡು ಬಂದಿರುವ ನಿಘಂಟು) ಪದಗಳನ್ನು, ಪ್ರಾಚೀನ ಯಜ್ಞ ಯಾಗಾದಿಗಳಲ್ಲಿ ಬಳಸುತ್ತಿದ್ದ ಶುಲ್ಬ ಸೂತ್ರಗಳ ರೇಖಾಗಣಿತವನ್ನು ಒಳಗೊಂಡಿವೆಯಂತೆ ! ಆದರೆ, ಕೆಲವಾದರೂ ಮುದ್ರೆಗಳನ್ನು ವ್ಯಾಪಾರದ ಸರಕಿನ ಪಿಂಡಿಗಳ ಮೇಲೆ ಅಂಕಿತವನ್ನು ಒತ್ತಲು ಮತ್ತೆ ಕೆಲವನ್ನು ಗುರುತಿನ ಸಂಕೇತಪಟ್ಟಿಗಳಾಗಿ ಬಳಸುತ್ತಿದ್ದಿರಬೇಕೆಂದು ಪುರಾತತ್ವಶಾಸ್ತ್ರದ ಆಧಾರಗಳಿಂದ ತಿಳಿದುಬರುತ್ತದೆ. ವ್ಯಾವಹಾರಿಕ ಬುದ್ಧಿಯುಳ್ಳ ಯಾವ ವ್ಯಾಪಾರಸ್ಥನು ತಾನೆ ತನ್ನ ಸರಕಿನ ಪಿಂಡಿಯ ಮೇಲೆ ವೃತ್ತದ ಪರಿಧಿಯನ್ನು ಕಂಡುಹಿಡಿಯುವ ಸೂತ್ರವನ್ನು ( Pi = p = ೩.೧೪೧೬ ಅಥವಾ ೨೨/೭) ಅಥವಾ ನಿಘಂಟಿನ ಒಂದು ವಿವರಣೆಯನ್ನು ಮುದ್ರಿಸಿಯಾನು ! ಹೀಗಾಗಿ ಈ ಬಗೆಯ ಓದುವಿಕೆಯಲ್ಲಿ ಏನೇನು ಅರ್ಥಗಳನ್ನು ಬೇಕಾದರೂ ಕಾಣಬಹುದೆಂಬ ತೀರ್ಮಾನಕ್ಕೆ ಬರಬೇಕಾಗುತ್ತದೆ.

(ಮುಂದಿನ ಸಂಚಿಕೆಯಲ್ಲಿ ಮುಂದುವರಿಯುತ್ತದೆ)

**ಕೆ. ಎಲ್. ಗೋಪಾಲಕೃಷ್ಣಯ್ಯ**
ನಂ. ೨೨೬೩, ೨೨ನೇ ಅಡ್ಡರಸ್ತೆ, ಬನಶಂಕರಿ ೨ನೇ ಹಂತ
ಬೆಂಗಳೂರು - ೫೬೦ ೦೭೦

## ಸುದ್ದಿ ಚಿತ್ರ

## ನವಕರ್ನಾಟಕ ಸಾಹಿತ್ಯ ಸಂಪದ ಮಾಲೆಯ ಹನ್ನೆರಡು ಕೃತಿಗಳ ಬಿಡುಗಡೆ



೨೮-೧-೨೦೦೧ರ ಭಾನುವಾರ ನಗರದ ಗಾಂಧಿಭವನದಲ್ಲಿ ನಡೆದ ಸಮಾರಂಭದಲ್ಲಿ ಹಂಪಿ ಕನ್ನಡ ವಿಶ್ವವಿದ್ಯಾನಿಲಯದ ಕುಲಪತಿ ಡಾ॥ ಎಂ. ಎಂ. ಕಲಬುರ್ಗಿಯವರು ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತರ ಬದುಕು - ಬರಹ ಕುರಿತ ಮೊದಲ ಕಂತಿನ ಹನ್ನೆರಡು ಕೃತಿಗಳನ್ನು ಬಿಡುಗಡೆ ಮಾಡಿದರು ಹಾಗೂ ಕೃತಿಗಳ ಪರಿಚಯ ಮಾಡಿಕೊಟ್ಟರು. ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾದ ಪ್ರೊ॥ ಬರಗೂರು ರಾಮಚಂದ್ರಪ್ಪನವರು ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಮಾಲೆಯ ಸಂಪಾದಕ ಡಾ॥ ಪ್ರಧಾನ ಗುರುದತ್ ಮತ್ತು ಹನ್ನೊಂದು ಮಂದಿ ಲೇಖಕರಲ್ಲದೆ ಭಾರಿ ಸಂಖ್ಯೆಯ ಸಾಹಿತ್ಯಾಸಕ್ತರು ಸಮಾರಂಭದಲ್ಲಿ ಭಾಗವಹಿಸಿದ್ದರು.

# ಯಾವುದು ಸಿರಿತನ?

ಭಾರತೀ ಕಾಸರಗೋಡು

**ಯಾ**ವುದು ಸಿರಿತನ? ಯಾವುದು ಚೆಲುವು? "A thing of beauty is a joy forever!" ಚೆಲುವಿಗಿಂತ ಚೆಲುವಾದ ತನ್ನ ಈ ಮೃದು ಮಾತುಗಳಿಂದ ಮಧುರ ಕವಿ ಕೀಟ್ಸ್ ಅಮರನಾಗಿಬಿಟ್ಟ. ಆದರೆ ಸೌಂದರ್ಯದ ವ್ಯಾಖ್ಯೆಯಾದರೂ ಹೇಗೆ? ಮತ್ತೆ ಬೇರೊಬ್ಬರು ಹೇಳಿರುವ ವಾಕ್ಯವನ್ನೇ ಪುನರುಚ್ಚರಿಸಬೇಕು. "Beauty lies in the eyes of the beholder." ಯಾವುದಾದರೂ ವ್ಯಕ್ತಿತ್ವ ಇಷ್ಟವಾಗಿಬಿಟ್ಟರೆ ಸರಿ. ಪ್ರಪಂಚದ ಎಲ್ಲ ಉತ್ಕೃಷ್ಟತೆಯನ್ನು ಅವರಿಗೇ ಆರೋಪಿಸಿಬಿಡುವ ಮುಗ್ಧ ಹವಣಿಕೆ. ಮಾತು ಮನಸು ಮೌನಧ್ಯಾನ ಬದುಕು ಭಾವ ಪ್ರತಿಯೊಂದೂ ಸುಭಗವೇ! ಇದೊಂದು ಸಹನೀಯ ಮನುಷ್ಯ ಸ್ವಭಾವ. ಸೌಂದರ್ಯದ ಅನ್ವೇಷಣೆಯೂ ಮಿಮಾಂಸೆಯೂ ವ್ಯಕ್ತಿಯಿಂದ ವ್ಯಕ್ತಿಗೆ ವ್ಯತ್ಯಾಸವಾಗುವಂತೆ ಸಿರಿತನದ ಪರಿಕಲ್ಪನೆ ಕೂಡ ವಿಭಿನ್ನ.

ಆಗಿನ್ನೂ ಅಪ್ಪ-ಅಮ್ಮನ ಬೆಚ್ಚನೆ ಕಾಪಿನಲ್ಲಿ ಜೀವನ ಸುಂದರವಾಗಿ ಸದ್ದಿಲ್ಲದೆ ಸರಿದು ಹೋಗುತ್ತಿದ್ದ ಸಮಯ. ಒಮ್ಮೆ ಕಣ್ಣು ನೋವಾಗಿ ಸರ್ಜನ್ನರನ್ನು ಕಾಣಲು ಕೆ. ಆರ್. ಆಸ್ಪತ್ರೆಗೆ ಹೋಗಿದ್ದೆ. ತಜ್ಞರನ್ನೇ ಕಂಡುಬರಬೇಕೆಂಬುದು ತಂದೆಯ ಮಹದಾಜ್ಞೆ. ಆ ಹಿರಿಯ ವೈದ್ಯರು ಅಣ್ಣಯ್ಯನ ಆಪ್ತ ಸ್ನೇಹಿತರು ಕೂಡ.

ನಾನು ಆಸ್ಪತ್ರೆ ತಲುಪಿದಾಗ ವೈದ್ಯರಿನ್ನೂ ಬಂದಿರಲಿಲ್ಲ. ಹೊರಗೆ ಹುಲ್ಲುಗಾವಲಿನಲ್ಲಿ ನಿಂತು, ಬೇಲಿಯ ನಡುನಡುವೆಯೇ ಮುಖ ತೋರಿ ನಗುವ ಬಣ್ಣದ ಹೂಗಳನ್ನು, ಸತತ ಸಂಭ್ರಮದ ಹಾರಾಟ ನಡೆಸಿರುವ ಚಂದದ ಚಿಟ್ಟೆಗಳನ್ನು ಕೌತುಕದಿಂದ ಗಮನಿಸುವಾಗ ಇದ್ದಕ್ಕಿದ್ದಂತೆ ಪುಟ್ಟ ಹಕ್ಕಿಯೊಂದು ಎಲ್ಲಿಂದಲೋ ಪ್ರತ್ಯಕ್ಷವಾಗಿ ಕೈಮೇಲೆ ಕೊಳಕು ಮಾಡಿ ಪುರ್ರನೆ ಹಾರಿಹೋಯಿತು. ಆಕಾಶದಲ್ಲಿ ಸ್ವಚ್ಛಂದವಾಗಿ ರೆಕ್ಕೆ ಬಿಚ್ಚಿ ಹಾರುವ ಮುದ್ದು ಮೈನಾಗೆ ಯಾವ ನಿಯಮ? ಯಾರ ಹೆದರಿಕೆ? ಕೈಯ್ಯನ್ನು ಶರೀರದಿಂದ ದೂರ ಇರಿಸಿಕೊಂಡು ಔಷಧ ಕೊಡುವ ಕೊಠಡಿಗೆ ಓಡಿಹೋಗಿ, ಅಲ್ಲಿ ಕೂತಿದ್ದ ಮಹಿಳೆಯನ್ನು ''ಸ್ವಲ್ಪ ಹತ್ತಿ ಬೇಕು,'' ಎಂದು ವಿನಂತಿಸಿಕೊಂಡೆ. ''ಯಾಕಾ ನನ ತಾಯಿ?'' ವಿಶ್ವಾಸದಿಂದ ವಿಚಾರಿಸಿದಳು. ಕೈ ತೋರಿಸಿದೆ. ಮುಖದಲ್ಲಿನ ಅಸಹನೆಯನ್ನಾಕೆ ಗುರುತಿಸಿರಬೇಕು. ಕಣ್ಣಲ್ಲಿ ಮಿಂಚು ತುಳುಕಿಸಿ ನಕ್ಕುಬಿಟ್ಟಳು. ''ಅಷ್ಟೇಯಾ? ಬವ್ವಾ, ಕುಂತ್ಕಾ'' ಅನ್ನುತ್ತಾ ಎರಡೂ ಕೈಗಳಿಂದ ಭುಜ ಹಿಡಿದು ಅಲ್ಲೇ ಇದ್ದ ಮರದ ಸ್ಟೂಲಿನ ಮೇಲೆ ಕೂರಿಸಿದಳು. ನಗುನಗುತ್ತ ನಾಜೂಕಾಗಿ ಹತ್ತಿಯಿಂದ ಕೈಮೇಲಿನ ಕೊಳೆಯನ್ನು ತೆಗೆದು ಬಿಸಾಡಿ ನಿಧಾನವಾಗಿ ಬಿಸಿ ನೀರಿನಿಂದ ತೊಳೆದಳು. ಮತ್ತೊಂದಷ್ಟು ಸ್ವಚ್ಛ ಒಣಹತ್ತಿಯಿಂದ ತೇವವನ್ನೆಲ್ಲ ಒರೆಸಿ ಚೊಕ್ಕಟಗೊಳಿಸಿದಳು. ಏನೆನಿಸಿತೋ, ಸ್ವಲ್ಪ ಹೊತ್ತು ಮಮತೆಯಿಂದ ದಿಟ್ಟಿಸಿ, ಕೈಯ್ಯನ್ನು ಆಪ್ಯಾಯಮಾನವಾಗಿ ನೇವರಿಸಿ ''ವೋಗವ್ವ ಯಿನ್ನ... ಸಾಯೇಬ್ರು ಬರೋ ಟೇಮಾಯ್ತು...'' ಎಂದು ಹಸನ್ಮುಖಿಯಾಗಿ ಬೀಳ್ಕೊಟ್ಟಳು. ಬಾಗಿಲತನಕ ಬಂದವಳು ತಿರುಗಿ ನೋಡಿದೆ. ಆಕೆಯ ಮುಖದಲ್ಲಿನ ಪ್ರೇಮಪೂರ್ಣ ಚಹರೆ ಮತ್ತಷ್ಟು ಮಡುಗಟ್ಟಿತ್ತು. ಮಗುವಿಗೆ ಸ್ನಾನ ಮಾಡಿಸಿ ಆ ಶುಭ್ರತೆಯ ದಿವ್ಯತೆಯಲ್ಲಿ ಸಂತೃಪ್ತಳಾದ ಅಮ್ಮನದೇ ಕಳೆ! ಆ ಕ್ಷಣಿಕ ಮಮಕಾರದ ಸೋಜಿಗವಾದರೂ ಏನು? ತನ್ನ ಸಹಜೀವಿಗಳ ವಿಷಯದಲ್ಲಿ ಯಾಕೆ ಆಕೆಗೆ ಅಷ್ಟೊಂದು ವಾತ್ಸಲ್ಯ? ಎಲ್ಲೋ ಹೇಗೋ ಥಟ್ಟನೆ ಅರಳಿಕೊಂಡು ಅಂತರಂಗ ಮಿಡಿಯುವ ಇಂಥ ಮಧುರ ಮಾನವೀಯ ಬಾಂಧವ್ಯಗಳ ಮಿತಿಯೇನು? ಮೌಲ್ಯವೇನು? ಬಲತೋಳಿನ ಮೇಲೆ ದೊಡ್ಡದೊಂದು ತೇಪೆಯಿದ್ದ, ಒರಟಾದ ದಪ್ಪ ನೂಲಿನ ಸೀರೆ ಉಟ್ಟಿದ್ದ ಆ ಸಂಭಾವಿತ ಮಹಿಳೆ ಮನಸ್ಸನ್ನು ಎಷ್ಟೊಂದು ಆವರಿಸಿದ್ದಾಳೆಂದರೆ ಇಪ್ಪತ್ತೈದು ವರ್ಷಗಳ ನಂತರ ಮೊನ್ನೆ ಮಕ್ಕಳಿಗೆ ಈ ವಿಷಯ ಹೇಳುವಾಗ ಸ್ವಲ್ಪ ಹೊತ್ತು ಮಾತು ನಿಂತು ಹೋಯಿತು. ಸ್ವಾರ್ಥದ ಯಾವ ಅಪೇಕ್ಷೆಯೂ ಇಲ್ಲದೆ ಪ್ರೇಮಿಸುವುದನ್ನೇ ಸಹಜ ಪ್ರವರ್ತನೆ ಮಾಡಿಕೊಂಡಿರುವ ದೊಡ್ಡಾಸ್ಪತ್ರೆಯ 'ಆಯಿ' ನನ್ನ ದೃಷ್ಟಿಯಲ್ಲಿ ಶ್ರೀಮಂತೆ.

ಇತ್ತೀಚೆಗೆ ನಮ್ಮ ವಾಗೀಶ ಹೇಳಿದ ಒಂದು ಪ್ರಸಂಗ. ಅವತ್ತು ಮೈಸೂರಿನ ರೈಲ್ವೇ ಸ್ಟೇಶನ್ನಿನಲ್ಲಿ ಬಹಳ ಗಡಿಬಿಡಿ. ''ಎಳ್ಳು ಹಾಕಿದರೆ ಎಳ್ಳು ಇಳಿಯೊಲ್ಲ'' ಅನ್ನುತ್ತಾರಲ್ಲ, ಹಾಗೆ! ವಾಗೀಶ ಒಬ್ಬನೇ ಬಿಡುಬೀಸಾಗಿದ್ದುದರಿಂದ ಹ್ಯಾಗೋ ಚಾಲಾಕಾಗಿ ತೂರಿಕೊಂಡ. ಕೊನೆಗಳಿಗೆಯಲ್ಲಿ ಕುಟುಂಬ ಸಮೇತ ಬಂದಿದ್ದ ವ್ಯಕ್ತಿಯೊಬ್ಬರು ಹೆಂಡತಿ-ಮಕ್ಕಳನ್ನು ಹತ್ತಿಸಿ, ತಾವು ಓಡಿಹೋಗಿ ಟಿಕೇಟು ತರುವಷ್ಟರಲ್ಲಿ ರೈಲು ಹೊರಟುಬಿಟ್ಟಿತು. ಆಕೆಗೆ ವಿಪರೀತ ಗಾಬರಿ. ಕೈಲಿ ಪರ್ಸು ಕೂಡ ತಂದಿರಲಿಲ್ಲ. ಎಲ್ಲವೂ ಗಂಡನ ಬಳಿಯೇ ಉಳಿದಿತ್ತು. ವಾಗೀಶನೇ ಆಕೆಗೆ ಸಮಾಧಾನ ಹೇಳಿದ : ''ಯೋಚನೆ ಮಾಡ್ಬೇಡಿ. ಇನ್ನರ್ಧ ಗಂಟೆಗೇ ಇನ್ನೊಂದು ರೈಲಿದೆ. ಅದರಲ್ಲಿ ಖಂಡಿತ ಬರ್ತಾರೆ. ಬೆಂಗಳೂರಿನ ಸ್ಟೇಷನ್ ಮಾಸ್ಟರಿಗೆ ವಿಷಯ ತಿಳಿಸಿ ಅಲ್ಲಿನ ನಿಮ್ಮ ನೆಂಟರು ಸ್ಟೇಷನ್‌ಗೆ ಬರೋ ಹಾಗೆ ಏರ್ಪಾಡು ಮಾಡಿರ್ತಾರೆ. ಅಲ್ಲೀವರೆಗೆ ನಾನು ಕೂಡ ನಿಮ್ಮ ಜತೇಗೇ ಇರ್ತೀನಿ.'' ''ಬೆಂಗ್ಳೂರಲ್ಲಿ ನೆಂಟರೇನೋ ಇದಾರೆ. ಆದ್ರೆ ಒಬ್ಬರ ವಿಳಾಸವೂ ನಂಗೆ ತಿಳೀದು. ಫೋನ್ ನಂಬರ್ ಕೂಡ ಅವರ ಹತ್ರಾನೇ ಇದೆ. ಮಕ್ಕಿಗೆ ಬೆಂಗ್ಳೂರು ತೋರಿಸೋಣ ಅಂತ ಹೊರಟಿದ್ದೆವು.... ಹೀಗಾಯ್ತು.....'' ಆಕೆ ಬೇಸರ ಪಟ್ಟುಕೊಂಡರು.



ಅವರಿಗೆ ಇಬ್ಬರು ಮುದ್ದಾದ ಮಕ್ಕಳು. ಹೆಣ್ಣು ಮಗು ಆರೇಳು ವರ್ಷದ್ದು. ಗಂಡಿಗೆ ಮೂರ್ನಾಲ್ಕು. ಅಮ್ಮನ ತೊಡೆಯೇರಿ ಕೂತ ಹುಡುಗ ತನ್ನ ಬಾಲಿಶ ಸಹಜ ಕುತೂಹಲದಲ್ಲಿ ನೂರೆಂಟು ಪ್ರಶ್ನೆಗಳಿಂದ ಆಕೆಯನ್ನು ಪದೇ ಪದೇ ಕಾಡುತ್ತಿದ್ದನಾದರೂ ಹೆಣ್ಣು ಮಗು ಮಾತ್ರ ತೀರಾ ದಿಗ್ಭ್ರಾಂತವಾಗಿತ್ತು. ಮೌನಗೌರಿಯಾಗಿಬಿಟ್ಟಿತ್ತು. ಪುಟ್ಟ ಕೈಗಳಲ್ಲಿ ಕಿಟಕಿಯ ಸರಳು ಹಿಡಿದು ಹೊರಗಡೆಯೇ ತದೇಕಚಿತ್ತವಾಗಿ ದಿಟ್ಟಿಸಿನೆಟ್ಟು ನಿರ್ವಿಣ್ಣವಾಗಿ ತುಟಿ ಬಿಗಿದು ಕೂತುಬಿಟ್ಟಿದೆ. ಆ ಮುಗ್ಧ ಕಣ್ಣುಗಳಲ್ಲಿ ದಪ್ಪದಪ್ಪ ಹನಿಗಳು.... ಆಗೀಗ ಸಣ್ಣ ಪುಟ್ಟ ಬಿಕ್ಕು.... ವಿಷಾದದ ಮೆಲು ನಿಟ್ಟುಸಿರು....

ಮದ್ದೂರು ಬಂತು. ಬೇರೆಯವರು ತಿಂಡಿ ತಿನ್ನುವುದನ್ನೆಲ್ಲ ಆಸೆಯಿಂದ ನೋಡುತ್ತಾ ಕೂತಿತ್ತು ಹುಡುಗ. ''ರೈಲಿನಲ್ಲಿ ದೋಸೆ ಕೊಡಿಸ್ತೀನಿ ಅಂತ ಮಕ್ಕಳಿಗೆ ಹೇಳಿದ್ರು....'' ಪಕ್ಕದ ಹೆಂಗಸಿನ ಹತ್ತಿರ ಮೆಲ್ಲಗೆ ಹೇಳುತ್ತಿದ್ದರಾಕೆ. ''ತಪ್ಪು ತಿಳಕೋಬೇಡಿ, ತಪ್ಪು ತಿಳಕೋಬೇಡಿ'' ಅನ್ನುತ್ತಾ ವಾಗೀಶ ಮಕ್ಕಳಿಗಾಗಿ ದೋಸೆ ತರಿಸಿದ. ಹೊಟ್ಟೆ ಹಸಿದ ಪುಟ್ಟ ಹುಡುಗ ಅಮ್ಮನ ಸಹಾಯದಿಂದ ನಿಧಾನವಾಗಿ ತಿಂದು ಮುಗಿಸಿತು. ಹೆಣ್ಣು ಮಗು ಮಾತ್ರ ಯಾರೆಷ್ಟೇ ರಮಿಸಿದರೂ ತಿಂಡಿ ತಿನ್ನಲಿಲ್ಲ. ಕಡೆಗದರ ಕಡೆಗೆ ತಿರುಗಿಯೂ ನೋಡಲಿಲ್ಲ!

ರೈಲು ಬೆಂಗಳೂರು ತಲುಪಿ ನಿಧಾನವಾಗಿ ವೇಗ ಕಳೆದುಕೊಂಡು ಮೆಲ್ಲಗೆ ಪ್ಲಾಟ್‌ಫಾರಂ ಮೇಲೆ ನಿಲ್ಲುತ್ತಿದ್ದಂತೆ ಅದುವರೆಗೂ ಮಾತು ಮರೆತು ಮೂಕಿಯಾಗಿದ್ದ ಮಗು ವಾಗೀಶನ ಹತ್ತಿರ ಓಡಿಬಂದು ಅವನ ಮೊಣಕಾಲನ್ನಪ್ಪಿ ಗದ್ಗದ ಸ್ವರದಲ್ಲಿ ಪ್ರಶ್ನಿಸಿತು: ''ಬೆಂಗ್ಳೂರು ಬಂದೇಬಿಡ್ತಲ್ವ?.....ಅಪ್ಪ ಖಂಡಿತ ನಮಗೆ ಸಿಗ್ತಾರಾ?.... ನೀವು ನಿಜವಾಗ್ಲೂ ನಮ್ಮನ್ನು ಕಾಪಾಡ್ತೀರಾ?'' ವಾಗೀಶ ಅದನ್ನು ಬಗಲಿನಲ್ಲಿ ಅವುಚಿಕೊಂಡು ತಲೆ ನೇವರಿಸಿ ಅವರೆಲ್ಲರನ್ನೂ ಇಳಿಸಿಕೊಳ್ಳುವ ವೇಳೆಗೆ ಬೆಂಗಳೂರಿನ ಅವರ ಬಂಧುಗಳು ಅವರಿಗಾಗಿ ಕಾದಿದ್ದರು. ಮುಂದಿನ ಗಾಡಿಯಲ್ಲೇ ಅಪ್ಪ ಬರುತ್ತಿರುವ ಖುಶಿ ಸುದ್ದಿಯೂ ಸಿಕ್ಕಿತು ಪುಟ್ಟ ಪುಟ್ಟಿಗೆ. ''ಥ್ಯಾಂಕ್ಸ್ ಅಂಕಲ್!'' ಮುಖದ ತುಂಬ ನಗುತ್ತಾ ನಿರಾಳವಾಗಿ ಜಗಿಜಗಿಯುತ್ತಾ ತಮ್ಮನ ಕೈ ಹಿಡಿದು ಗೆಲುವಾಗಿ ಹೊರಟುಬಿಟ್ಟಿತು. ತನ್ನ ಹೃದಯ ಶ್ರೀಮಂತಿಕೆಯಿಂದ ಈ ಮುಗ್ಧ ಬಾಲೆ ಇನ್ನೂ ಬಹಳ ದಿನ ನನ್ನನ್ನು ಕಾಡುತ್ತಾಳೆಂದೇ ಕಾಣುತ್ತದೆ.

ಕುವೆಂಪು ರಚಿಸಿರುವ 'ಜನಪ್ರಿಯ ವಾಲ್ಮೀಕಿ ರಾಮಾಯಣ' ನನ್ನ ಪ್ರೀತಿಯ ಪುಸ್ತಕ. ಮೊದಲ ಬಾರಿ ನಾನದನ್ನು ಓದುವಾಗ ಮಿಡ್ಲ್ ಸ್ಕೂಲಿನಲ್ಲಿದ್ದೆ. ಆ ಸರಳ ಸುಂದರ ಗದ್ಯ ಮನಮೋಹಕವೆನಿಸಿದರೂ ಮಧ್ಯೆಮಧ್ಯೆ ಎಷ್ಟೋ ಪದಗಳು ಅರ್ಥವೇ ಆಗುತ್ತಿರಲಿಲ್ಲ. ಮತ್ತೆ ಮತ್ತೆ ದೊಡ್ಡವರನ್ನು ಕೇಳಬೇಕಾದ ಪ್ರಸಂಗ. ನಮ್ಮ ಅಣ್ಣಯ್ಯನಿಗೆ ಲಹರಿ ಚೆನ್ನಾಗಿದ್ದರೆ ಆನಂದವಾಗಿ ಪದ್ಮಾಸನ ಹಾಕಿ ಕೂತು ದೊಡ್ಡ ಗಂಟಲಿನಲ್ಲಿ ಸೊಗಸಾಗಿ ವ್ಯಾಖ್ಯಾನ ಹೇಳುತ್ತಿದ್ದರು. ಇನ್ನ್ಯಾವುದಾದರೂ ಗುಂಗು ಅವರನ್ನು ಕಾಡುತ್ತಿತ್ತೇ, ''ಏನದು ಸ್ಪೂನ್ ಫೀಡಿಂಗು? ಬೇಕಾದ್ರೆ ಡಿಕ್ಷನರಿ ನೋಡ್ಕೋ....'' ಅಂತ ನಿರ್ದಾಕ್ಷಿಣ್ಯವಾಗಿ ಗದರಿಬಿಡುತ್ತಿದ್ದರು. ಇನ್ನು ನನ್ನ ತಾಯಿಯನ್ನು ಕೇಳಿದರೆ ಆಕೆ ಮುಸಿನಕ್ಕು ಕೆಂಪಾಗುವಂಥ ಅಲಂಕಾರದ ಪದಗಳೂ ರಸಿಕ ಕವಿಯ ಶುದ್ಧ ಶಬ್ದಭಂಡಾರದಲ್ಲಿದ್ದವು. ಅಂತೂ ಒಟ್ಟಾರೆ ರಾಮಾಯಣದ ಪಠನ ನನ್ನೊಳಗೊಂದು ಬೆಳಕಿನ ಲೋಕವನ್ನೇ ಬಿಚ್ಚಿಟ್ಟಿತ್ತು. ಮನುಷ್ಯರ ಒಳ್ಳೆಯತನಗಳು, ದೌರ್ಬಲ್ಯಗಳು, ಅವರವರ ಜೀವನ ದರ್ಶನ, (ಮಡದಿಯನ್ನು ಆಗಾಗ ವಸ್ತುವಿನಂತೆ ಡಿಸ್‌ಪೋಸ್ ಮಾಡಿಬಿಡುವ ಜಾನಕೀವಲ್ಲಭನ ಚಾಣಾಕ್ಷ ಮುತ್ಸದ್ದಿತನವನ್ನುಳಿದು) ತಾವು ನಂಬಿದಂಥ ಮೌಲ್ಯಗಳಿಗಾಗಿ ಜೀವನವನ್ನೇ ಮುಡಿಪಾಗಿಡುವ ಅಚಲ ನಿಷ್ಠೆ, ಇವೆಲ್ಲ ನನ್ನ ಮೇಲೆ ಗಾಢ ಪರಿಣಾಮ ಬೀರಿದ್ದವು. ಸ್ನೇಹ, ಪ್ರೇಮಗಳಂಥ ಕೋಮಲ ಭಾವಗಳಂತೂ ರಾಮಾಯಣದಲ್ಲಿ ಕಂಡಷ್ಟು ಬೇರೆಲ್ಲೂ ಕಾಣಲಾರದು.

ನಾನು ಈಗಲೂ ಆಗಾಗ ನೆನಪು ಮಾಡಿಕೊಳ್ಳುವ ಸಂಗತಿಯೆಂದರೆ ರಾಮ ಶಿವಧನುಸ್ಸನ್ನು ಮುರಿದು ಸೀತೆಯನ್ನು ವರಿಸುವ ಸಂದರ್ಭ. ಜನಕ ಹೇಳಿ ಕಳುಹಿಸಿದ್ದ ಒಸಗೆ ನುಡಿಗಳನ್ನು ಕೇಳಿ ಪುಳಕಿತನಾದ ದಶರಥ ಒಡನೆ ರಾಣಿಯರೊಡನೆ ಮಿಥಿಲೆ ತಲುಪುತ್ತಾನೆ. ಸ್ವತಃ ಜನಕನೇ ರಾಮನ ತಂದೆಯನ್ನು ಎದುರ್ಗೊಂಡು ''ದೇವತೆಗಳೊಡಗೂಡಿ ದೇವೇಂದ್ರನೇ ನನ್ನ ಮನೆಗೆ ಬಂದಂತಾಯಿತು,'' ಎಂದು ಹರ್ಷದಿಂದುಲಿಯುತ್ತಾನೆ. ಸೌಶೀಲ್ಯದಲ್ಲಿ ದಶರಥನೇನು ಕಮ್ಮಿ? ''ನಿನಗೆ ತಿಳಿಯದ ಧರ್ಮವಾದರೂ ಯಾವುದು? ನಿನ್ನ ಇಷ್ಟದಂತೆ ನಡೆದುಕೊಳ್ಳಲು ನಾನು ಸಿದ್ಧನಿದ್ದೇನೆ,'' ಎಂದು ಸಮಾನ ಸಜ್ಜನಿಕೆಯ ಪ್ರತ್ಯುತ್ತರ ಕೊಡುತ್ತಾನೆ. ಮನಮಿಡಿಯುವ ರಸಕಾವ್ಯದಂಥ ಅವರ ಸವಿ ಸಂಭಾಷಣೆ ಲವಲವಿಕೆಯಿಂದ ಮುಂದುವರಿಯುತ್ತದೆ. ಆ ಇಡೀ ವಾತಾವರಣ ಮಾರ್ದವವಾಗಿ ಕಣ್ಮುಂದೆ ತೇಲುವಂತೆ ಚಿತ್ರಿಸಿರುವ ಲೇಖಕರು ಕಡೆಯಲ್ಲಿ ಹೇಳುತ್ತಾರೆ : ''ಹೀಗೆ ಪರಸ್ಪರ ಸೌಜನ್ಯದಿಂದ ಇಬ್ಬರೂ ಸಂತೋಷಗೊಂಡರು.'' ಇಲ್ಲಿ ಜನಕ ದಶರಥರು ದೊಡ್ಡವರಾದದ್ದು ತಮ್ಮ ಸಾಮ್ರಾಜ್ಯಗಳಿಂದಲ್ಲ : ತಮ್ಮ ನಡವಳಿಕೆಗಳಿಂದ.

ನಾಗಚಂದ್ರ ಕವಿಯ ಪದ್ಯವೊಂದು ನೆನಪಾಗುತ್ತಿದೆ :

ಕಡೆದೊಡೆ ಪಾಲ್ಗಡಲ್ ವಿವಿಧ ವಸ್ತುಗಳನೀಯದೆ? ತೇಯೆ, ಚಂದನಂ
ಕುಡದೆ ಸುಗಂಧಮಂ? ಪಿಳಿಯೆ ಕಬ್ಬಿನಿದಾಗದೆ? ಕಾಸೆ, ಕಾಂಚನಂ
ಪಡೆಯದೆ ಕಾಂತಿಯಂ? ನಿಜದಿನ್ ಒಳ್ಳಿದಪ್ಪವರೆಂತು ಬಾಧೆವ
ಟ್ಟೊಡಂ ಉಪಕಾರಮಂ ಪೆರರ್ಗೆ ಮಾಡದೆ ಬಾಧೆಯನೇಕೆ ಮಾಡುವರ್?

ಕವಿ ಹೇಳುವಂತೆ ಕಡೆದು ನೋಯಿಸಿದರೂ ಕಾಣಿಕೆಗಳನ್ನೇ ಕೊಡುವ ಕಡಲಿನಂತೆ, ತಿದ್ದಿ ತೀಡಿದರೂ ಪರಿಮಳ ಬೀರುವ ಶ್ರೀಗಂಧದಂತೆ, ಹಿಂಡಿ ಹಿಪ್ಪೆ ಮಾಡಿದರೂ ಮಧುರ ರಸವೊಸರುವ ಸಿಹಿ ಕಬ್ಬಿನಂತೆ, ಬೆಂಕಿಯಲ್ಲಿ ಬೆಂದರೂ ಬಿಡದೆ ಹೊಳೆಯುವ ಬಂಗಾರದಂತೆ..... ಕಷ್ಟ-ನಷ್ಟಗಳ ಕೋಟಲೆಗಳಲ್ಲೂ ಒಳ್ಳೆಯತನವನ್ನೇ ಜೀವಿಸುವ ಮನುಷ್ಯರು ಎಲ್ಲ ಕಡೆ ಇದ್ದಾರೆ. ಯಾಕೆಂದರೆ ಅದೇ ಅವರಿಗೆ ಸಹಜ ಸ್ವಭಾವ, ಬದುಕಿನ ನಿಜವಾದ 'ಅರ್ಥ'.

ನಮಗೆ ಬೇಕು ಇಂಥ ಸಿರಿತನ.

ಭಾರತೀ ಕಾಸರಗೋಡು
೮೩, ೨ನೇ ಮಹಡಿ, ೫ನೇ 'ಬಿ' ಮುಖ್ಯರಸ್ತೆ, ಆರ್.ಪಿ.ಸಿ. ಲೇಔಟ್, ವಿಜಯನಗರ, ಬೆಂಗಳೂರು - ೪೦

*(೩ನೇ ಪುಟದಿಂದ)*

ಫರ್ಮಾನುಗಳನ್ನು ಮಾನ್ಯ ಮಾಡಬೇಕಿಲ್ಲವೆಂದು ಒಂದು ಸ್ವಾಗತಾರ್ಹ ಆಜ್ಞೆ ಹೊರಡಿಸಿತು. ಅದರ ವಿರುದ್ಧ ಜಡ್ಡುತನದ ಸಾಕಾರರೂಪಿಗಳು ಬೀದಿಗಿಳಿದು ದೊಂಬಿ ಎಬ್ಬಿಸಿದ್ದಾರೆ, ಬಾಂಬುಗಳನ್ನು ಸಿಡಿಸಿದ್ದಾರೆ, ಸರ್ಕಾರದ ಆಜ್ಞೆಯನ್ನು ಬೆಂಬಲಿಸಿರುವ ಬಾಂಗ್ಲಾದೇಶದ ಮಹಿಳೆಯರ ಮೇಲೆ ಹಲ್ಲೆ ನಡೆಸಿದ್ದಾರೆ. ಮೌಢ್ಯದಿಂದ ಹೊರಬಂದ ಮಹಿಳೆಯರು ತಮ್ಮ ಕಪಿಮುಷ್ಟಿಗೆ ದಕ್ಕುವುದಿಲ್ಲವೆಂಬುದೊಂದೇ ಈ ಮುಲ್ಲಾಗಳ ಹಾಗೂ ಅವರ ವಾನರಸೈನ್ಯದ ಯೋಚನೆಯಾಗಿದೆ. ಯಾರ ಸ್ವಂತಿಕೆಯೂ ಮತಧರ್ಮದ ಜಡ್ಡು ಪ್ರತಿನಿಧಿಗಳಿಗೆ ಹಿಡಿಸುವುದಿಲ್ಲ. ಸಂವಿಧಾನದಲ್ಲಿ ಪ್ರಜಾಪ್ರಭುತ್ವದ ಸೂತ್ರಗಳಿದ್ದರೂ ವ್ಯವಹಾರದಲ್ಲಿ ಜಡ್ಡು ಮತಾಧಿಪತಿಗಳ ಸೊಲ್ಲಿರಬೇಕೆಂಬುದು ಎಲ್ಲ ಧರ್ಮ ಸಂಸ್ಥೆಗಳ ಸಾರಾಂಶ. ಅದನ್ನೆದುರಿಸಲು ಸನ್ನದ್ಧರಾಗಿರುವ ಬಾಂಗ್ಲಾದೇಶದ ಮಹಿಳೆಯರಂತೆ ನಾವೂ ಎಚ್ಚೆತ್ತುಕೊಳ್ಳಬೇಕಾಗಿದೆ. ❏❏❏

# ಪೋಲಿಯೋ ರೋಗ ನಿರ್ಮೂಲನೆ

**ಡಾ|| ಎಸ್. ದ್ವಾರಕಾನಾಥ್**

**ಪೋ**ಲಿಯೋ ರೋಗ ವಿಶ್ವದ ಎಲ್ಲಾ ದೇಶಗಳಲ್ಲಿಯೂ ಕಂಡುಬರುತ್ತಿತ್ತು. ಪೋಲಿಯೋ ನಿರೋಧಕ ಔಷಧಗಳ ಬಳಕೆಯಿಂದ ಮುಂದುವರಿದ ದೇಶಗಳಲ್ಲಿ ೧೯೫೪ನೇ ಇಸವಿಯಿಂದಲೇ ಪೋಲಿಯೋ ರೋಗವನ್ನು ನಿರ್ಮೂಲನ ಮಾಡಲಾಗಿದೆ. ಉದಾಹರಣೆಗೆ, ಅಮೆರಿಕಾ ದೇಶದಲ್ಲಿ ವರ್ಷಕ್ಕೆ ಸುಮಾರು ೨೦೦ ಸಾವಿರ ಪೋಲಿಯೋ ರೋಗಿಗಳು ಇರುತ್ತಿದ್ದರೆ ಪೋಲಿಯೋ ನಿರೋಧಕ ಔಷಧದ ಬಳಕೆಯಿಂದ ಪೋಲಿಯೋ ವೈರಾಣುವನ್ನು ನಿರ್ಮೂಲನ ಮಾಡಿ ೧೯೯೧ರಿಂದ ಯಾವುದೇ ಪೋಲಿಯೋ ರೋಗಿಯ ಪತ್ತೆಯಾಗಿಲ್ಲ ಎಂಬುದನ್ನು ಗಮನಿಸಬಹುದು. ಆದರೆ ಪ್ರಪಂಚದ ಬೇರೆ ಬೇರೆ ದೇಶಗಳಲ್ಲಿ ಇದರ ಪರಿಸ್ಥಿತಿ ಭಿನ್ನವಾಗಿದೆ. ವಿಶ್ವ ಆರೋಗ್ಯ ಸಂಸ್ಥೆಯ ಪ್ರಕಾರ ೧೯೯೬ನೇ ಇಸವಿಯಲ್ಲಿ ೨೦ ಸಾವಿರ ಪೋಲಿಯೋ ರೋಗ ಪ್ರಕರಣಗಳ ವರದಿಯಾಗಿ ಆ ಪೈಕಿ ೬,೦೦೦ ಜನ ಮೃತ್ಯುವಿನ ದವಡೆಗೆ ಬಲಿಯಾಗಿದ್ದಾರೆಂಬುದನ್ನು ನೋಡಿದರೆ ನಾವು ಇನ್ನೂ ಸಾಧಿಸಬೇಕಾದ ಕೆಲಸದ ಪ್ರಮಾಣ ಊಹಿಸಬಹುದು.

ವಿಶ್ವ ಆರೋಗ್ಯ ಸಂಸ್ಥೆಯು ೨೦೦೦ ನೇ ಇಸವಿಯ ಕೊನೆಗೆ ವಿಶ್ವದಿಂದ ಪೋಲಿಯೋ ರೋಗವನ್ನು ನಿರ್ಮೂಲನ ಮಾಡಲು ನಿರ್ಧಾರ ಮಾಡಿದೆ. ಇದರ ಫಲವಾಗಿ ವಿಶ್ವದಾದ್ಯಂತ ಪೋಲಿಯೋ ರೋಗ ನಿರೋಧಕ ಔಷಧಿಯನ್ನು ಮಕ್ಕಳಿಗೆ ನೀಡಲು ಪ್ರಾರಂಭಿಸಿ, ೧೯೯೫ರಲ್ಲಿ ೩೦೦ ಮಿಲಿಯನ್ ಮಕ್ಕಳಿಗೆ ಒಂದೇ ದಿನದಲ್ಲಿ ನೀಡಿದ್ದರೆ, ಭಾರತದಲ್ಲಿ ೮೭ ಮಿಲಿಯನ್ ಮಕ್ಕಳಿಗೆ ಪೋಲಿಯೋ ಹನಿಯನ್ನು ನೀಡಲಾಗಿದೆ. ಇಷ್ಟೊಂದು ವ್ಯಾಪಕವಾಗಿ ಈ ರೋಗದ ವಿರುದ್ಧ ಕ್ರಮ ಕೈಗೊಳ್ಳಲು ಕಾರಣ ಏನೆಂದರೆ ಪೋಲಿಯೋ ರೋಗ ನಮ್ಮ ದೇಶದಲ್ಲೂ ಇನ್ನೂ ಒಂದು ಮುಖ್ಯ ಸಾಮಾಜಿಕ ಪಿಡುಗು ಆಗಿದೆ. ಪೋಲಿಯೋ ಅಂಗವಿಕಲತೆಯ ಸಂಶೋಧನೆಯ ಪ್ರಕಾರ ಇನ್ನೂ ಶಾಲೆಗೆ ಹೋಗದಿರುವ ಮಕ್ಕಳಲ್ಲೇ ಎರಡರಿಂದ ಐದರವರೆಗೆ ಪ್ರತಿ ಸಾವಿರ ಮಕ್ಕಳು ಗ್ರಾಮಾಂತರ ಪ್ರದೇಶದಲ್ಲಿದ್ದರೆ, ನಗರಗಳಲ್ಲಿ ಇದರ ಪ್ರಮಾಣ ೧ರಿಂದ ೩ರವರೆಗೆ ಪ್ರತಿ ಸಾವಿರ ಮಕ್ಕಳಲ್ಲಿ ಕಂಡುಬಂದಿದೆ. ಅಲ್ಲದೆ ಶಾಲೆಗೆ ಹೋಗುವ ಮಕ್ಕಳಲ್ಲಿ ಪೋಲಿಯೋ ಅಂಗವಿಕಲತೆ ೩% ಪ್ರತಿ ಸಾವಿರ ಮಕ್ಕಳಲ್ಲಿ ಇದ್ದು, ಪ್ರತಿ ವರ್ಷ ೧೦೦ ಸಾವಿರ ಜನರ ಪೈಕಿ ೧೫ ಜನರಿಗೆ ಪೋಲಿಯೋ ರೋಗ ತಗಲುವುದೆಂದು ಅಂದಾಜು ಮಾಡಲಾಗಿದೆ. ಇಲ್ಲಿ ಇನ್ನೊಂದು ಅಂಶವನ್ನು ನೆನಪಿನಲ್ಲಿ ಇಟ್ಟುಕೊಳ್ಳಬೇಕು. ಅದು ಏನೆಂದರೆ ಈ ವರದಿಯಲ್ಲಿ ಶೇಕಡಾ ೨೫ರಷ್ಟು ರೋಗಿಗಳು ಸಾವಿನಿಂದಲೋ ಪೂರ್ಣ ಗುಣವಾಗಿಯೋ ಅಥವಾ ಸ್ಥಳ ಬದಲಾವಣೆಯಿಂದಲೋ ಕಂಡು ಹಿಡಿಯಲಾಗುವುದಿಲ್ಲ ಎಂಬುದು. ಇದನ್ನೇ ಮಕ್ಕಳ ವಯಸ್ಸಿನಲ್ಲಿ ಲೆಕ್ಕ ಹಾಕಿದರೆ ನಮ್ಮ ದೇಶದಲ್ಲಿ ಹುಟ್ಟಿನಿಂದ ನಾಲ್ಕು ವರ್ಷಗಳ ವರೆಗಿನವರು ಜನಸಂಖ್ಯೆಯಲ್ಲಿ ಶೇಕಡಾ ೨೦ರಷ್ಟು ಇದ್ದಾರೆ. ಅವರಲ್ಲಿ ಪ್ರತಿ ೧೦೦ ಸಾವಿರ ಮಕ್ಕಳಲ್ಲಿ ೫೦ ಮಕ್ಕಳಿಗೆ ಪ್ರತಿವರ್ಷ ಪೋಲಿಯೋ ರೋಗ ತಗಲುತ್ತದೆ. ಇಷ್ಟೊಂದು ಸಂಖ್ಯೆಯನ್ನು ನೋಡಿ ಕಳವಳ ಪಡಬೇಕಿಲ್ಲ. ಭಾರತ ಸರ್ಕಾರದ, ಖಾಸಗಿ ಸೇವಾ ಸಂಸ್ಥೆಗಳ ಹಾಗೂ ಎಲ್ಲಕ್ಕಿಂತ ಮುಖ್ಯವಾಗಿ ಜನರ ಸಹಕಾರದಿಂದ ಪೋಲಿಯೋ ರೋಗವನ್ನು ೨೦೦೦ನೇ ಇಸವಿಯಲ್ಲಿ ಸಂಪೂರ್ಣವಾಗಿ ನಿವಾರಿಸಲು ಖಂಡಿತ ಸಾಧ್ಯವಿದೆ.



*ಪೋಲಿಯೋ ರೋಗಪೀಡಿತ ಮಗು*

ಪೋಲಿಯೋ ರೋಗ ಬಂದ ಆರ್. ಎನ್. ಎ. ಗುಂಪಿನ ವೈರಾಣುವಿನಿಂದ ಹರಡುವ ರೋಗ ಇದು. ಈ ವೈರಾಣು ಮನುಷ್ಯರಲ್ಲಿ ಮಾತ್ರ ಕಂಡುಬರುತ್ತದೆ. ಪೋಲಿಯೋ ವೈರಾಣುಗಳನ್ನು ಒಂದು, ಎರಡು ಹಾಗೂ ಮೂರು ಎಂಬುದಾಗಿ ವಿಂಗಡಿಸಿದ್ದಾರೆ. ಈ ರೋಗವು ವೈರಾಣು ರೋಗಿಯ ಜೊಲ್ಲು, ಗಂಟಲಿನ ದ್ರವ ಹಾಗೂ ಮಲದಿಂದ ಮತ್ತೊಬ್ಬರಿಗೆ ೭ರಿಂದ ೧೦ ದಿನಗಳವರೆಗೆ ಹರಡುತ್ತದೆ. ಪೋಲಿಯೋ ರೋಗವನ್ನು ನಾಲ್ಕು ವಿಧಗಳಲ್ಲಿ ಕಂಡುಬರುವ ಲಕ್ಷಣಗಳಿಂದ ವಿಂಗಡಿಸಬಹುದು. ಶೇಕಡಾ ೯೫ರಷ್ಟು ಮಕ್ಕಳಿಗೆ ವೈರಾಣು ದೇಹದಲ್ಲಿ ಪ್ರವೇಶಿಸಿದ್ದರೂ ಯಾವುದೇ ಪರಿಣಾಮ ಕಂಡುಬರುವುದಿಲ್ಲ. ಇನ್ನು ಉಳಿದವರಲ್ಲಿ ಶೇಕಡಾ ೪ರಿಂದ ೮ರವರೆಗೆ ಸಣ್ಣ ಪುಟ್ಟ ಲಕ್ಷಣಗಳು ಕಾಣಿಸಿಕೊಂಡು ಯಾವುದೇ ದುಷ್ಪರಿಣಾಮವಿಲ್ಲದೆ ವಾಸಿಯಾಗುತ್ತದೆ. ಉಳಿದವರಲ್ಲಿ ಶೇಕಡಾ ೧ರಷ್ಟು ಮಕ್ಕಳಿಗೆ ಕುತ್ತಿಗೆ, ಬೆನ್ನಿನ ನೋವು ಹಾಗೂ ಸೆಳೆತ ಕಾಣಿಸಿಕೊಂಡು ೨ರಿಂದ ೧೦ ದಿನಗಳೊಳಗೆ ವಾಸಿಯಾಗುತ್ತದೆ. ಇನ್ನುಳಿದ ಶೇಕಡಾ ೧ಕ್ಕಿಂತ ಕಡಿಮೆ ಮಕ್ಕಳಲ್ಲಿ ಪೋಲಿಯೋ ರೋಗ ನರಮಂಡಲಕ್ಕೆ ವ್ಯಾಪಿಸಿ ವಿವಿಧ ಬಗೆಯ ಪಾರ್ಶ್ವವಾಯು ಉಂಟುಮಾಡುತ್ತದೆ. ಜ್ವರದಿಂದ ಆರಂಭವಾಗಿ ಕಾಲು ಸ್ವಾಧೀನ ತಪ್ಪಿಹೋಗುವುದು ಈ ರೋಗದ ಮುಖ್ಯ ಲಕ್ಷಣ. ಇದರ ಜೊತೆಗೆ ರೋಗಿಗೆ ಹಸಿವಾಗದಿರುವುದು, ವಾಕರಿಕೆ, ವಾಂತಿ, ತಲೆನೋವು, ಗಂಟಲು ನೋವು, ಮಲಬದ್ಧತೆ ಹಾಗೂ ಹೊಟ್ಟೆ ನೋವು ಕಾಣಬರುತ್ತದೆ. ಮೆದುಳಿನ ಒಳಗೆ ರೋಗ ಹರಡಿದರೆ ಆಗ ಕುತ್ತಿಗೆ ಹಾಗೂ ಬೆನ್ನಿನ ಸ್ನಾಯುಗಳ ಸೆಳೆತ, ಪಾದಾಭಿಮುಖವಾಗಿ ಸ್ವಾಧೀನತಪ್ಪುವಿಕೆ ಕಾಣುತ್ತದೆ. ಮೆದುಳಿನ ನರಗಳಿಗೆ ವೈರಾಣು ಹಬ್ಬಿದರೆ ಆಗ ನುಂಗಲು ತೊಂದರೆ, ಧ್ವನಿ ಹೊರಡದೆ ಇರುವುದು, ಉಸಿರಾಟದ ತೊಂದರೆ ಇವೆಲ್ಲಾ ಉಂಟಾಗಿ ಜೀವಕ್ಕೆ ಸಂಚಕಾರ ಬರುತ್ತದೆ. ವಾಸಿಯಾದರೆ ಸ್ವಾಧೀನ ತಪ್ಪಿದ ಸ್ನಾಯುಗಳು ಮತ್ತೆ ಮೊದಲಿನ ಶಕ್ತಿ ಗಳಿಸದೆ ಅಂಗವಿಕಲತೆ ಉಂಟಾಗಿ ಜೀವನಪೂರ್ತಿ ತೊಂದರೆ ಅನುಭವಿಸಬೇಕಾಗುತ್ತದೆ.

ಒಮ್ಮೆ ಪೋಲಿಯೋ ರೋಗ ಬಂದರೆ ಅದನ್ನು ಪೂರ್ಣ ಗುಣಮಾಡುವಂತಹ ಯಾವುದೇ ನಿರ್ದಿಷ್ಟ ಔಷಧಿಗಳು ಲಭ್ಯವಿಲ್ಲ. ಆದುದರಿಂದ ಈ ರೋಗ ನಿರ್ಮೂಲನಕ್ಕೆ ರೋಗ ಬಾರದಂತೆ ಪೋಲಿಯೋ ರೋಗನಿರೋಧಕ ಲಸಿಕೆ ತೆಗೆದುಕೊಳ್ಳುವುದೊಂದೇ ಅತ್ಯಂತ ಮಹತ್ವದ ಸಲಹೆಯಾಗಿದೆ. ಎರಡು ಬಗೆಯ

ಪೋಲಿಯೋ ನಿರೋಧಕ ಲಸಿಕೆಗಳು ಈಗ ಲಭ್ಯವಿವೆ :

(ಅ) ನಿಷ್ಕ್ರಿಯಗೊಳಿಸಿದ ಪೋಲಿಯೋ ಲಸಿಕೆ (ಸಾಲ್ಕ್ ವ್ಯಾಕ್ಸೀನ್) : ಇದನ್ನು ಮೂರೂ ಬಗೆಯ ಪೋಲಿಯೋ ವೈರಾಣುಗಳನ್ನು ನಿಷ್ಕ್ರಿಯಗೊಳಿಸಿ ತಯಾರಿಸಲಾಗಿದೆ. ಇದನ್ನು ಚುಚ್ಚುಮದ್ದಿನ ರೂಪದಲ್ಲಿ ಕೊಡಬೇಕು. ಪ್ರಾಥಮಿಕ ಹಂತದಲ್ಲಿ ನಾಲ್ಕು ಚುಚ್ಚುಮದ್ದನ್ನು ನೀಡಬೇಕು. ಮೊದಲ ಮೂರು ಚುಚ್ಚುಮದ್ದನ್ನು ಒಂದರಿಂದ ಎರಡು ತಿಂಗಳ ಅಂತರದಲ್ಲಿ ನೀಡಿ ನಾಲ್ಕನೆಯ ಚುಚ್ಚುಮದ್ದನ್ನು ಆರರಿಂದ ಹನ್ನೆರಡು ತಿಂಗಳಾದ ಮೇಲೆ ನೀಡಬೇಕು. ಅನಂತರ ಮಗು ಶಾಲೆಗೆ ಹೋಗುವ ಮುನ್ನ ಮತ್ತು ಪ್ರತಿ ಐದು ವರ್ಷಕ್ಕೊಮ್ಮೆ ಹದಿನೆಂಟು ವರ್ಷ ತುಂಬುವವರೆವಿಗೂ ನೀಡಬೇಕು. ಮಗುವಿಗೆ ೬ ವಾರಗಳಾದಾಗಿನಿಂದಲೇ ಇದನ್ನು ನೀಡಲು ಆರಂಭಿಸಬೇಕು. ಆದರೆ ಅನೇಕ ಕಾರಣಗಳಿಂದ ಈ ರೀತಿಯ ರೋಗ ನಿರೋಧಕ ಲಸಿಕೆಯ ಉಪಯೋಗ ಕಡಿಮೆಯಾಗಿದೆ.

(ಆ) ಪೋಲಿಯೋ ಹನಿ (ಸಬೀನ್ ವ್ಯಾಕ್ಸೀನ್) : ೧೯೫೭ರಿಂದ ಬಳಕೆಗೆ ಬಂದಿರುವ ಪೋಲಿಯೋ ಹನಿಗಳು ಜೀವಂತ ನಿಸ್ಸತ್ವಗೊಳಿಸಿದ ಮೂರು ಬಗೆಯ ಪೋಲಿಯೋ ವೈರಾಣುಗಳನ್ನು ಒಳಗೊಂಡಿದೆ. ವಿಶ್ವ ಆರೋಗ್ಯ ಸಂಸ್ಥೆ ಹಾಗೂ ರಾಷ್ಟ್ರೀಯ ಆರೋಗ್ಯ ಕಾರ್ಯಕ್ರಮದ ಪ್ರಕಾರ ಪೋಲಿಯೋ ಹನಿಯನ್ನು ಪ್ರಾಥಮಿಕವಾಗಿ ಮೂರು ಬಾರಿ ತಿಂಗಳಿಗೆ ಒಮ್ಮೆ ಮಗುವಿಗೆ ೬ ವಾರಗಳಾಗಿದ್ದಾಗಿನಿಂದ ನೀಡಬೇಕು. ಮಗುವಿಗೆ ಆರು ತಿಂಗಳು ತುಂಬುವುದಕ್ಕೆ ಮುಂಚೆ ಪ್ರಾಥಮಿಕ ಹಂತದ ಲಸಿಕೆ ನೀಡುವುದು ಅವಶ್ಯಕ. ಚಮಚದಲ್ಲಿ ಪೋಲಿಯೋ ಹನಿ ಹಾಕಿದರೆ ಚಮಚವನ್ನು ಶುದ್ಧಿ ಮಾಡಲು ಡೆಟಾಲ್ ಮುಂತಾದ ಕ್ರಿಮಿನಾಶಕ ಉಪಯೋಗಿಸಬಾರದು; ಚಮಚದ ಉಷ್ಣಾಂಶವನ್ನು ಹಿಮದ ಸಮಕ್ಕೆ ತರುವುದೂ ಅವಶ್ಯಕ. ಮೂರು ಬಾರಿಯ ಪೋಲಿಯೋ ಹನಿಯಿಂದ ರೋಗ ನಿರೋಧಕ ಶಕ್ತಿ ಕೇವಲ ಶೇಕಡಾ ೬೦ರಷ್ಟು ಮಕ್ಕಳಿಗೆ ಮಾತ್ರ ಬರುವುದರಿಂದ ಇತ್ತೀಚೆಗೆ ಮಕ್ಕಳ ತಜ್ಞರ ಸಮಿತಿಯ ಸಲಹೆ ಪ್ರಕಾರ ಲಸಿಕೆಯನ್ನು ೫ ಬಾರಿ ನೀಡಲು ಆರಂಭಿಸಲಾಗಿದೆ. ಪೋಲಿಯೋ ಹನಿ ನೀಡುವುದು ಚುಚ್ಚುಮದ್ದಿಗಿಂತಲೂ ಸರಳ. ಇದನ್ನು ನೀಡಲು ತಜ್ಞತೆಯ ಅಗತ್ಯವಿಲ್ಲ. ರೋಗ ನಿರೋಧಕತೆ ಕರುಳು ಹಾಗೂ ರಕ್ತದಲ್ಲೂ ಉಂಟಾಗುವುದು. ಇದಕ್ಕೆ ತಗಲುವ ವೆಚ್ಚವೂ ಕಡಿಮೆ. ಆದುದರಿಂದ ಬಹಳ ಸಂಖ್ಯೆಯಲ್ಲಿ ಇದನ್ನು ನೀಡಿ ಪೋಲಿಯೋ ರೋಗ ಹಬ್ಬುವುದನ್ನು ನಿಯಂತ್ರಿಸಬಹುದು.



***ಪೋಲಿಯೋ ರೋಗ ನಿರೋಧಕ ಲಸಿಕೆ***

ಪೋಲಿಯೋ ಹನಿಯನ್ನು ತೀವ್ರ ಸಾಂಕ್ರಾಮಿಕ ರೋಗದಿಂದ ನರಳುತ್ತಿರುವವರಿಗೆ, ಜ್ವರ, ಆಮಶಂಕೆ, ಭೇದಿಗಳಿಂದ ನರಳುತ್ತಿರುವವರಿಗೆ ರಕ್ತದ ಅರ್ಬುದ ರೋಗ ಇರುವವರಿಗೆ, ಹಾಗೂ ಸ್ಟೆರಾಯ್ಡ್ ಸೇವಿಸುತ್ತಿರುವವರಿಗೆ ನೀಡುವುದು ಒಳಿತಲ್ಲ.

ಪೋಲಿಯೋ ಹನಿಯನ್ನು ಅವು ಸತ್ವ ಕಳೆದುಕೊಳ್ಳದಂತೆ ಕಾಪಾಡಬೇಕಾದುದು ಅತ್ಯವಶ್ಯಕ. ಯಾವಾಗಲೂ ಪೋಲಿಯೋ ಹನಿಯನ್ನು ತಂಪಾದ ವಾತಾವರಣದಲ್ಲಿ ಹಿಮದ ಜೊತೆ ಇಡುವಂತೆ ನೋಡಿಕೊಳ್ಳಬೇಕು. ಬಿಸಿ ನೀರು, ಬಿಸಿ ಹಾಲು ಮುಂತಾದವುಗಳನ್ನು ಪೋಲಿಯೋ ಹನಿ ಹಾಕಿದ ನಂತರ ಅರ್ಧಗಂಟೆ ಕೊಡಬಾರದು. ಆದರೆ ತಾಯಿಯ ಹಾಲನ್ನು ಕೊಟ್ಟರೆ ಏನೂ ಕೆಡುಕಿಲ್ಲ.

ಪೋಲಿಯೋ ರೋಗದ ನಿರ್ಮೂಲನೆಗಾಗಿ ಭಾರತ ಸರ್ಕಾರದವರು ವಿಶ್ವ ಆರೋಗ್ಯ ಸಂಸ್ಥೆಯ ನಿರ್ದೇಶನದಲ್ಲಿ ವ್ಯಾಪಕ ಕಾರ್ಯಕ್ರಮಗಳನ್ನು ಕೈಗೊಂಡಿದ್ದಾರೆ. ಇವುಗಳಲ್ಲಿ ಎಲ್ಲಾ ಮಕ್ಕಳಿಗೆ ಪೋಲಿಯೋ ಹನಿಗಳನ್ನು ಹಾಕುವುದು, ಜಿಲ್ಲಾ ತಾಲ್ಲೂಕುಗಳಲ್ಲಿ, ನಗರದ ಕೊಳಚೆ ಪ್ರದೇಶಗಳಲ್ಲಿ ಎಲ್ಲ ಮಕ್ಕಳು ಪೋಲಿಯೋ ಹನಿ ಸೇವಿಸುವಂತೆ ನೋಡಿಕೊಳ್ಳುವುದು, ಪೋಲಿಯೋ ರೋಗದ ಸಮಗ್ರ ವಿಚಾರಣೆ ನಡೆಸುವುದು ಇವೆಲ್ಲಾ ಸೇರಿವೆ. ಇವುಗಳ ಜೊತೆ **ಪಲ್ಸ್ ಪೋಲಿಯೋ ಕಾರ್ಯಕ್ರ**ಮ ಅತ್ಯಂತ ಮುಖ್ಯವಾದ ಯೋಜನೆಯಾಗಿದೆ. ಇದರಲ್ಲಿ ಒಂದೇ ದಿನದಲ್ಲಿ ೫ ವರ್ಷದ ಒಳಗಿನ ಎಲ್ಲಾ ಮಕ್ಕಳಿಗೆ ಸಾರ್ವಜನಿಕವಾಗಿ ಆಸ್ಪತ್ರೆ, ಸಮಾಜಸೇವಾ ಸಂಸ್ಥೆಗಳು, ಖಾಸಗಿ ಆಸ್ಪತ್ರೆ ಮುಂತಾಗಿ ಪೋಲಿಯೋ ಹನಿಯನ್ನು ನೀಡಿ ಪೋಲಿಯೋ ವೈರಾಣುಗಳನ್ನು ನಾಶಮಾಡಿ ಯಶಸ್ಸು ಸಾಧಿಸುವುದೇ ಉದ್ದೇಶವಾಗಿದೆ. ಇಂತಹ ಬೃಹತ್ ಕಾರ್ಯಕ್ರಮದಲ್ಲಿ ಸರ್ವರೂ ಭಾಗವಹಿಸಿ ಪೋಲಿಯೋ ರೋಗದ ನಿವಾರಣೆ ಗಾಗಿ ನಡೆದಿರುವ ಅಂತಿಮ ಹೋರಾಟದಲ್ಲಿ ಭಾರತವು ಯಶಸ್ಸನ್ನು ಸಂಪಾದಿಸಲು ನಾವು ಸೊಂಟ ಕಟ್ಟಿ ನಿಲ್ಲಬೇಕು.

**ಡಾ|| ಎಸ್. ದ್ವಾರಕಾನಾಥ್**
ಉಪ ಮುಖ್ಯ ವೈದ್ಯಾಧಿಕಾರಿ, ಐ.ಟಿ.ಐ. ಆಸ್ಪತ್ರೆ,
ದೂರವಾಣಿ ನಗರ, ಬೆಂಗಳೂರು - ೫೬೦ ೦೧೬

## ವಿನೋದ ಗಣಿತ

**ಜನವರಿ ತಿಂಗಳ ಪ್ರಶ್ನೆಗೆ ಉತ್ತರ**

ಈ ಪ್ರಶ್ನೆಯ ನಿರೂಪಣೆಯಲ್ಲಿ ಒಂದು ಮುದ್ರಣ ದೋಷವಿದೆ. ''೪೫ ಒಕ್ಕಲುಗಳ ವಶದಲ್ಲಿ ತಲಾ ಒಂದರಂತೆ ಆಡುಗಳಿವೆ'' ಎಂದು ಮುದ್ರಣವಾಗಿದೆ. ಇಲ್ಲಿ '೪೫' ರ ಬದಲು '೨೫' ಎಂದಿರಬೇಕಾಗಿತ್ತು. ಇದನ್ನು ಸರಿಪಡಿಸಿಕೊಂಡರೆ ಉತ್ತರ ಕೆಳಗಿನಂತಿದೆ.

ಗ್ರಾಮದ ಒಟ್ಟು ಒಕ್ಕಲುಗಳಲ್ಲಿ ೨೫ ಒಕ್ಕಲುಗಳು ತಲಾ ಒಂದರಂತೆ ಆಡುಗಳನ್ನು ಹೊಂದಿದ್ದಾರೆಂದು ಮೊದಲೇ ತಿಳಿಸಲಾಗಿದೆ. ಆದರೆ ಪ್ರಶ್ನೆಯಲ್ಲಿ ಕೊಟ್ಟಿರುವ ಇನ್ನಿತರ ಮಾಹಿತಿಗಳಿಂದ, ಇತರ ಜಾನುವಾರುಗಳ ಜೊತೆ ಆಡುಗಳನ್ನೂ ಹೊಂದಿರುವವರನ್ನು ಎಣಿಸಿ ನೋಡಿದಾಗ ಆಡುಗಳನ್ನು ಹೊಂದಿರುವವರ ಸಂಖ್ಯೆ ೨೬ ಎಂದು ತಿಳಿಯುತ್ತದೆ ! ಪಂಡಿತರು ಸುಳ್ಳು ವರದಿಯನ್ನು ಕೊಡುವಾಗ ಈ ಬಗ್ಗೆ 'ತಾಳೆ' ನೋಡುವುದನ್ನು ಮರೆತು ಅಥವಾ ತಿಳಿಯದೆ ಸಿಕ್ಕಿಹಾಕಿಕೊಂಡರು !

**ಈ ತಿಂಗಳ ಪ್ರಶ್ನೆಗಳು**

ಪ್ರಶ್ನೆ ೧. ಒಂದು ಸಮಾರಂಭದಲ್ಲಿ ಕೆಲವರು ಇನ್ನು ಕೆಲವರಿಗೆ ಹಸ್ತಲಾಘವ ಕೊಟ್ಟು ಯೋಗ ಕ್ಷೇಮ ವಿಚಾರಿಸಿಕೊಂಡರು. ಇದರಲ್ಲಿ ಒಂದು ಬೆಸ ಸಂಖ್ಯೆಯು ನಮೂದಿಸುವಷ್ಟು ಬಾರಿ ಹಸ್ತಲಾಘವ ಮಾಡಿದವರ ಸಂಖ್ಯೆ ಒಂದು ಸಮ ಸಂಖ್ಯೆಯೇ ಆಗಿರಬೇಕು. ಏಕೆ?

ಪ್ರಶ್ನೆ ೨. ಒಂದು ೮ x ೮ ಚದರದ ಕೊಠಡಿಯ ವಿರುದ್ಧ ಮೂಲೆಗಳೆರಡರಲ್ಲೂ ೧ x ೧ ಚದರ ಜಾಗವನ್ನು ಸಿಂಕ್ ಇಡಲು ಮತ್ತು ಕಪಾಟು ಇಡಲು ಬಿಡಲಾಗಿದೆ. ಕೊಠಡಿಯ ಉಳಿದ ನೆಲವನ್ನು ೧ x ೨ ಚದರದ ಮೊಸಾಯಿಕ್ ಬಿಲ್ಲೆಗಳಿಂದ ಹಾಸಲು ಅಸಾಧ್ಯ. ಇದು ಏಕೆ? ❑❑❑

# ಖ್ಯಾತ ಪರಿಸರವಾದಿ ಸುಂದರಲಾಲ ಬಹುಗುಣ ಅವರೊಂದಿಗೆ ಒಂದು ಸ್ಮರಣೀಯ ಭೇಟಿ

**ನಾ. ಗೀತಾಚಾರ್ಯ**

ಸುಂದರಲಾಲ ಬಹುಗುಣರ ಹೆಸರು ಹೇಳುತ್ತಿದ್ದಂತೆ ದೇಶ-ವಿದೇಶಗಳಲ್ಲಿ ಪ್ರಸಿದ್ಧವಾಗಿರುವ ಭಾರತೀಯ ಪರಿಸರ – ವಿಶೇಷವಾಗಿ ಅರಣ್ಯ ರಕ್ಷಣೆಯ ಹೋರಾಟ ತಂತ್ರವಾದ 'ಚಿಪ್ಕೋ' ಚಳುವಳಿ – ನೆನಪಿಗೆ ಬರುತ್ತದೆ. ಈ ಚಳುವಳಿಯ ನೇತಾರ, ಹಿಮಾಲಯ ದೇಶದ ಗಿರಿ-ವನಗಳ ಸಂರಕ್ಷಕ, ಬದುಕನ್ನೇ ಪರಿಸರ ರಕ್ಷಣೆಗೆ ಮೀಸಲಿಟ್ಟಿರುವ ನಿರಂತರ ಹೋರಾಟಗಾರ, ಹೋರಾಟದಲ್ಲೇ ಎಂಟು ದಶಕಗಳನ್ನು ಕಳೆದಿರುವ ಆಧುನಿಕ ಋಷಿ, ಗಾಂಧಿಮಾರ್ಗದ ಸ್ವಾವಲಂಬಿ ಜೀವನ ಸಾಧಕ, ಜನಾನುರಾಗಿ, ಶ್ರೀ. ಸುಂದರಲಾಲ ಬಹುಗುಣ ಅವರನ್ನು ನೋಡುವ, ಅವರೊಂದಿಗೆ ಕೆಲ ಕಾಲ ಕಳೆಯುವ ಸುಯೋಗ ದೊರೆತದ್ದು ನನ್ನ ಜೀವನದ ಬಹುಮುಖ್ಯ ನೆನಪುಗಳಲ್ಲಿ ಒಂದು.

ಸರ್ವಿಸ್ ಸಿವಿಲ್ ಇಂಟರ್‌ನ್ಯಾಷನಲ್ (ಎಸ್. ಸಿ. ಐ.) ಎಂಬ ಅಂತರರಾಷ್ಟ್ರೀಯ ಸ್ವಯಂಸೇವಾ ಸಂಸ್ಥೆಯ ಭಾರತದ ಕೇಂದ್ರ ಹಮ್ಮಿಕೊಂಡಿದ್ದ, ದಕ್ಷಿಣ ಏಷ್ಯಾ ರಾಷ್ಟ್ರಗಳ ಪ್ರತಿನಿಧಿಗಳನ್ನೊಳಗೊಂಡ 'ಆಧುನಿಕ ತಂತ್ರಜ್ಞಾನ ಮತ್ತು ಸ್ವಾವಲಂಬಿ ಜೀವನ ಶೈಲಿ' ವಿಷಯಾಧಾರಿತ ಪ್ರಾತ್ಯಕ್ಷಿಕ ಶಿಬಿರ ಕಳೆದ ಅಕ್ಟೋಬರ್ ಮೊದಲವಾರದಲ್ಲಿ ದೆಹಲಿಯಲ್ಲಿ ನಡೆಯಿತು. ಕರ್ನಾಟಕದಿಂದ ನನ್ನ ವಿದ್ಯಾರ್ಥಿ ಗೆಳೆಯ ಬೈರೇಗೌಡ ಮತ್ತು ಇನ್ನೊಬ್ಬ ಗೆಳೆಯ ಪುರುಷೋತ್ತಮ ಅವರಿಂದ ಪಾಲ್ಗೊಂಡಿದ್ದ ನನಗೆ ಈ ಶಿಬಿರದಲ್ಲಿ ಬಿಹಾರದಿಂದ ನೂತನವಾಗಿ ರಚನೆಯಾದ ಜಾರ್ಖಂಡ ರಾಜ್ಯದ ರಾಂಚಿಯ ಸುಜಾತ ಹಾಗೂ ನೆರೆದೇಶಗಳಾದ ನೇಪಾಳದ ಚಂಚಲ್, ಶಾಂತಿ ಪ್ರಧಾನ್, ಶ್ರೀಲಂಕಾದ ನಿಲಾಂತ್ ಮತ್ತು ಬಾಂಗ್ಲಾದೇಶದ ಮಹಮದ್ ಜಾಹಿರ ಅವರುಗಳು ಸ್ನೇಹಿತರಾದರು. ಈ ಶಿಬಿರವನ್ನು ಸಂಘಟಿಸಿದ್ದ ಎಸ್. ಸಿ. ಐ.ನ ರಾಷ್ಟ್ರೀಯ ಕಾರ್ಯದರ್ಶಿ ತಮಿಳುನಾಡಿನ ಅರುಳ್‌ರಾಜ್. ಉಪಾಧ್ಯಕ್ಷ ಮತ್ತು ಶಿಬಿರದ ಸಂಚಾಲಕ ಉತ್ತರ ಪ್ರದೇಶದಿಂದ ನೂತನವಾಗಿ ರಚನೆಯಾದ ಉತ್ತರಾಂಚಲ ರಾಜ್ಯದ ಮನೋಜ್ ಪಾಂಡೆ ಅವರು ತಮ್ಮ ಮಾರ್ಗದರ್ಶನದಲ್ಲಿ ನಮ್ಮ ತಂಡವನ್ನು ಸುಂದರ ದೆಹಲಿಯ ರಾಜ್‌ಘಾಟ್‌ಗೆ ಹೊಂದಿಕೊಂಡಿರುವ ಕೊಳಚೆ ಪ್ರದೇಶ, ಜಮುನಾ ಪುಷ್ಪ ಹಾಗೂ ಹೃಷಿಕೇಶದ ಪರಮಾರ್ಥ ಆಶ್ರಮ, ಗಾಂಧಿಸ್ಮಾರಕ ನಿಧಿ ಕಟ್ಟಡದಲ್ಲಿರುವ ಹಿಮಾಲಯ ಸೇವಾಸಮರ, ನೂತನ ಉತ್ತರಾಂಚಲ ರಾಜ್ಯದ 'ಖಾಡಿ'ಯಲ್ಲಿರುವ ಉತ್ತರಖಂಡ ಜನಜಾಗೃತಿ ಸಂಘ, ರಾಣಿಚಾರಿಯಲ್ಲಿರುವ ಸ್ವಾಸ್ಥ್ಯವಾಟಿ 'ಹಿಮ' ರಾನ್ ಹಿಮಾಲಯ ಸಂರಕ್ಷಣ ಕೇಂದ್ರ, ಟೇಹರಿ ಪಟ್ಟಣದಲ್ಲಿರುವ ಟೇಹರಿ ಡ್ಯಾಂ ಸೈಟ್‌ನ ಆಕ್ಷನ್ ಕ್ಯಾಂಪ್‌ನಲ್ಲಿರುವ ಸುಂದರಲಾಲ ಬಹುಗುಣ, ಬುಡಾಖೇದಾರ್‌ನಲ್ಲಿರುವ ಲೋಕಜೀವನ ವಿಕಾಸಭಾರತಿ - ಈ ಕೆಲವು ಸ್ವಯಂಸೇವಾ ಸಂಘಗಳಲ್ಲಿಗೆ ಕೊಂಡೊಯ್ದು ವಿಚಾರ ವಿನಿಮಯ ಹಾಗೂ ಸ್ವಾವಲಂಬಿ ಜೀವನದ ವಿವಿಧ ಸಾಧನೆಗಳ ಪ್ರಾತ್ಯಕ್ಷಿಕ ಪರಿಚಯವನ್ನು ಮಾಡಿಕೊಟ್ಟರು. ಇದೊಂದು ಅತ್ಯಂತ ಉಪಯುಕ್ತ ಕಾರ್ಯಕ್ರಮವಾಗಿತ್ತು ಮತ್ತು ಮರೆಯಲಾಗದ ಪ್ರವಾಸದ ಅನುಭವಗಳನ್ನು ನಮ್ಮದನ್ನಾಗಿಸಿತು. ಭಾರತದ ಹಿಮಾಲಯದ ತಪ್ಪಲಿನ ಸುಂದರ ಪ್ರಕೃತಿಸೌಂದರ್ಯ, ಅದಕ್ಕೂ ಮಿಗಿಲಾಗಿ ನಮ್ಮನ್ನು ಆದರದಿಂದ ಬರಮಾಡಿಕೊಂಡು ಆತ್ಮೀಯವಾಗಿ ಸತ್ಕರಿಸಿದ ಸಂಘಗಳ ಕಾರ್ಯಕರ್ತರ ಸೌಹಾರ್ದ ಸಂಬಂಧ ನಮ್ಮನ್ನು ಮೂಕರನ್ನಾಗಿಸಿತು. ಭಾರತಾಂಬೆಯ ಹೆಜ್ಜೆಯ ಗೆಜ್ಜೆಯಾಗಿರುವ ನಾವು (ಕರ್ನಾಟಕದ ಪ್ರತಿನಿಧಿಗಳು) ಆಕೆಯ ಮುಡಿಯ ಹೂವುಗಳಾಗಿ ಇರುವವರನ್ನು ನೋಡಿ ನಲಿಯುವ ಸುಯೋಗ ಈ ಪ್ರವಾಸದಿಂದ ಲಭಿಸಿತು. ಭವ್ಯ ಭಾರತದ ದಿವ್ಯ ದರ್ಶನವಾಯಿತು. ಭಾರತೀಯರು ನಾವು ಎಂದೆಂದೂ ಒಂದೇ ಎಂಬ ಕವಿವಾಣಿಗೆ ಕೇವಲ ಎಂದೆಂದೂ ಮಾತ್ರವಲ್ಲ ಎಲ್ಲಿಂದೆಲ್ಲಿಗೂ ಒಂದೇ ಎಂದು ಮನಸ್ಸು ಮಿಡಿಯಿತು.

ಈ ಪ್ರವಾಸದಿಂದ ಲಭಿಸಿದ ಮರೆಯಲಾಗದ ಅನುಭವದಲ್ಲಿ ಸುಂದರಲಾಲ ಬಹುಗುಣರನ್ನು ಭೇಟಿ ಮಾಡಿದ್ದು ಒಂದು. ಬಹುಗುಣರ ಹೆಸರನ್ನು ಅಷ್ಟೇ ಕೇಳಿದ್ದ ನಮಗೆ ಅವರನ್ನು ಪ್ರತ್ಯಕ್ಷವಾಗಿ ನೋಡಿ ಮಾತಾಡಿ ಕೆಲಹೊತ್ತು ಅವರೊಂದಿಗೆ ಕಾಲ ಕಳೆಯುವ ಅವಕಾಶ ಲಭಿಸುತ್ತದೆ ಎಂದುಕೊಂಡಿರಲಿಲ್ಲ. ಸದಾ ಪ್ರವಾಸದಲ್ಲಿರುವ ಅವರು ನಮಗೆ ನಮ್ಮ ಸಮಯಕ್ಕೆ ಸಿಗುತ್ತಾರೆಂದು ಖಾತರಿಯಿರಲಿಲ್ಲ.

ನವರಾತ್ರಿಯ ಒಂದು ಶುಭದಿನ (ಅಕ್ಟೋಬರ್ ೬, ಶುಕ್ರವಾರ) ಸಮುದ್ರಮಟ್ಟದಿಂದ ಸುಮಾರು ನಾಲ್ಕುಸಾವಿರ ಅಡಿ ಎತ್ತರದ ಗಿರಿಶಿಖರದಲ್ಲಿರುವ ಖಾಡಿಯ ಉತ್ತರಖಂಡ ಜನ ಜಾಗೃತಿ ಸಂಘದ ಅತಿಥಿ ಗೃಹದಲ್ಲಿ ತಂಗಿದ್ದ ನಾವು ಚಂಬಲ್ ನಗರದ ಮೂಲಕ ರಾಣಿಚೌರಿ ಎಂಬ ಇನ್ನೊಂದು ಗಿರಿಶಿಖರದಲ್ಲಿರುವ ಸುಂದರ ಸ್ಥಳಕ್ಕೆ ಭೇಟಿಕೊಟ್ಟು ಅಲ್ಲಿಯ ಸ್ವಾಸ್ಥ್ಯ ವಾಟಿಕಾಲಯದಲ್ಲಿ, ಹಿಮಾಲಯದ ಅಮೂಲ್ಯ ಆಯುರ್ವೇದ ಔಷಧಿ ಸಸ್ಯಗಳ ವನದಲ್ಲಿ, ಅವುಗಳ ಸುವಾಸನೆ ಹೀರುತ್ತ ಉಪಹಾರ ಮುಗಿಸಿ ಗಿರಿಶಿಖರಗಳನ್ನು ಏರುತ್ತ ಇಳಿಯುತ್ತ ಸುತ್ತಿ ಬಳಸುತ್ತ ಮಧ್ಯಾಹ್ನದ ವೇಳೆಗೆ ಟೇಹರಿ ಎಂಬ ನಗರಕ್ಕೆ ಬಂದು ಸೇರಿದೆವು. ಈ ಪ್ರಯಾಣ ನಮ್ಮ ಮಲೆನಾಡಿನ ಪರ್ವತ ಪ್ರದೇಶದ ಪ್ರಯಾಣದಂತೆಯೇ ಇದ್ದರೂ ಅದಕ್ಕಿಂತ ಭಿನ್ನವಾಗಿ ಮನಮೋಹಕವಾಗಿ ಕಣ್ಮನ ಸೆಳೆಯಿತು. ಸಾವಿರಾರು ಅಡಿ ಎತ್ತರದ ಗಿರಿ ಶಿಖರಗಳ ತುಟ್ಟ ತುದಿಗೆ ಏರಿ ತಳಮಟ್ಟದ ನದಿ ಮೂಲಕ್ಕೆ ಇಳಿದು ಮತ್ತೆ ಏರಿ ಸುತ್ತಿ ಬಳಸುವ ಪ್ರಯಾಣ ಅತ್ಯದ್ಭುತ.



*ಸುಂದರಲಾಲ ಬಹುಗುಣ (ಹಿನ್ನಲೆಯಲ್ಲಿ ಟೇಹರಿ ಡ್ಯಾಂ ಸೈಟ್, ಜೊತೆಯಲ್ಲಿ ಬೈರೇಗೌಡ)*

ಇಲ್ಲಿಯ ಹಳ್ಳಿ ನಗರ ಪಟ್ಟಣಗಳೆಲ್ಲ ಗಿರಿಶಿಖರಗಳ ಮೇಲೆ ಇಳಿಜಾರಿನ ತಪ್ಪಲಿನಲ್ಲಿರುವುವೇ. ಅವುಗಳನ್ನೆಲ್ಲ ಸಂಪರ್ಕಿಸಬೇಕಾಗಿ ಇರುವುದರಿಂದ ರಸ್ತೆಗಳು ಬೆಟ್ಟಗಳನ್ನು ಏರಿ ಇಳಿದು ಸುತ್ತುತ್ತ ಬಳುಕುತ್ತ ಸಾಗುತ್ತವೆ. ಈ ಬೆಟ್ಟಗಳು ನಮ್ಮ ಮಲೆನಾಡ ಬೆಟ್ಟಗಳಂತಲ್ಲ. ಒಂದೊಂದೂ ಪ್ರತ್ಯೇಕವಾಗಿ ಸಾವಿರಾರು ಅಡಿ ಎತ್ತರದವರೆಗೆ ಕಡಿದಾಗಿ ಏರಿರುವ ಬೆಟ್ಟಗಳ ಸಾಲುಗಳು. ಅವುಗಳ ಶಿಖರಗಳಲ್ಲಿ, ಇಳಿಜಾರುಗಳಲ್ಲಿ, ಹಬ್ಬಿರುವ ಮರಗಳು ದಟ್ಟ ಹಸಿರಿನ ನಡುವೆ ಹಗಲೂ (ಬಣ್ಣಗಳಿಂದ) ರಾತ್ರಿಯೂ (ಬೆಳಕಿನಿಂದ) ಬೆಳ್ಳಿ ಚುಕ್ಕಿಗಳ ಸಮೂಹದಂತೆ ಕಂಗೊಳಿಸುತ್ತವೆ. ಈ ಬೆಟ್ಟಗಳಲ್ಲೇ ಅಡಿಯಿಂದ ಮುಡಿಯವರೆಗೆ ಕಡೆದು ಮೂಡಿರುವ ಹೊಲಗದ್ದೆಗಳು ಸ್ವರ್ಗಕ್ಕೆ ಮೆಟ್ಟಿಲು ಹಾಕಿದಂತೆ ಶೋಭಿಸುತ್ತವೆ. ಬಿಸಿಲು ನೆರಳಿನ ಕಣ್ಣಾಮುಚ್ಚಾಲೆಯಾಟದಲ್ಲಿ ಮೋಡಗಳೊಂದಿಗೆ ಗಿರಿಶಿಖರಗಳು ಕೈ ಜೋಡಿಸುತ್ತವೆ. ಮೋಡಗಳೇ ಒಮ್ಮೊಮ್ಮೆ ಸೋತು ಕರಗಿ ಮಳೆಹನಿಯ ಸಿಂಚನವಾಗಿ ಕರಗಿ ಔಟಾಗುತ್ತವೆ. ಕಣಿವೆಗಳಲ್ಲಿ ಹರಿಯುವ ನದಿಗಳ ಜುಳುಜುಳು ನಾದ ಎಲ್ಲಿ ಹೋದರೂ ಕಿವಿಗೆ

ಅಪ್ಪಳಿಸುತ್ತಿರುತ್ತದೆ. ಕಿವಿಗೊಟ್ಟು ಆಲಿಸುವವರಿಗೆ ಇದರ ಮುಂದೆ ಬಸ್ಸಿನ ಶಬ್ದ ಗೌಣವಾಗಿಬಿಡುತ್ತದೆ. ಇವುಗಳ ಮೂಲಕ ಬೆಟ್ಟಗಳ ನಡುವೆ ವನಸಿರಿಯನ್ನು ಸವರುತ್ತ ಹಾಯ್ದುಬರುವ ತಂಪಾದ ಹವೆ 'ಮಂದಾನಿಲ' ಮನಸ್ಸಿಗೆ ಮುದ ನೀಡುತ್ತದೆ. ಪಂಚೇಂದ್ರಿಯಗಳನ್ನು ತಟ್ಟಿ ಎಚ್ಚರಿಸುವ ಈ ಹಿಮಾಲಯದ ತಪ್ಪಲಿನ ಪ್ರಯಾಣದ ಆನಂದದಲ್ಲಿ ಮೈಮರೆತಿದ್ದಾಗ ಇದ್ದಕ್ಕಿದ್ದಂತೆ ಭಾರಿ ವಾಹನಗಳ ಭರಾಟೆ, ಧೂಳಿನ ಆಕ್ರಮಣ, ಕಲ್ಲುಬಂಡೆಗಳನ್ನು ಕೊರೆಯುವ-ಸಿಡಿಸುವ, ಮಣ್ಣರಾಶಿಯನ್ನು ತುಂಬುವ ಸುರಿಯುವ ಕಲ್ಲು ಮಣ್ಣುಗಳ ಆಕ್ರಂದನ ಅಪ್ಪಳಿಸಿತು.

ಗಾಬರಿಯಾಗಿ ಏನೆಂದು ವಾಸ್ತವಕ್ಕೆ ಬಂದಾಗ ಮನೋಜ್ ಪಾಂಡೆ ವಿವರಿಸುತ್ತಿದ್ದರು : ''ಇದು ಟೇಹರಿ ಡ್ಯಾಂ ಸೈಟು. ಇಲ್ಲಿಯ ಬೆಟ್ಟಗುಡ್ಡಗಳನ್ನೆಲ್ಲ ಕಡಿದು, ಡ್ಯಾಂ ಕಟ್ಟಲು ಕೊಂಡೊಯ್ಯುತ್ತಿದ್ದಾರೆ. ಕಳೆದ ಹತ್ತಾರು ವರ್ಷಗಳಿಂದ ಪರಿಸರವಾದಿಗಳ ಹೋರಾಟದ ಅಡೆತಡೆಗಳ ನಡುವೆಯೂ ಈ ನಿರ್ಮಾಣಕಾರ್ಯ ನಿರಂತರವಾಗಿ ನಡೆಯುತ್ತಲೇ ಇದೆ. ಇದರಿಂದ ಇಲ್ಲಿಯ ಸುಂದರ ಪ್ರಕೃತಿಯೆಲ್ಲ ನಾಶವಾಗಿದೆ. ನೋಡಿ, ಹಿಮಾಲಯದ ತಪ್ಪಲು ಹೇಗೆ ಬೋಡುಗುಡ್ಡಗಳಾಗಿ ನಗ್ನವಾಗಿ ನಿಂತಿವೆ. ಧೂಳಿನ ರಾಶಿ ನೋಡಿ, ಮೋಡವನ್ನು ಮೀರಿಸುತ್ತಿವೆ. ರಸ್ತೆಗಳೆಲ್ಲ ನೋಡಿ, ಹೇಗೆ ಹಳ್ಳ ಗುಂಡಿಗಳ ಜಾಲಾಗಿವೆ. ಗಿಡಮರ ಮನೆಗಳ ಮೇಲೆಲ್ಲ ಮಂಜಿನ ರಾಶಿಯಂತೆ ಕುಳಿತಿರುವ ಧೂಳನ್ನು ನೋಡಿ, ಈ ಧೂಳನ್ನು ಕುಡಿಯುತ್ತ ಬದುಕುತ್ತಿರುವ ಜನರ ಆರೋಗ್ಯವನ್ನು ಊಹಿಸಿಕೊಳ್ಳಿ. ನೀರಿನ ಕಲುಷಿತತೆಯನ್ನು ಕಲ್ಪಿಸಿಕೊಳ್ಳಿ. ಅಗೋ ನೋಡಿಲ್ಲಿ, ಬೆಟ್ಟವನ್ನೇ ಕ್ಷಣಾರ್ಧದಲ್ಲಿ ಕರಗಿಸುವ ಭಾರಿ ಕ್ರಷರ್‌ಗಳು, ಬಕಾಸುರನಂತೆ ಮಣ್ಣನ್ನು ಬಾಚುತ್ತಿರುವ ಡಿಪ್ಪರ್‌ಗಳು, ಅವುಗಳಿಂದ ತುಂಬಿಸಿಕೊಂಡು ಹೊತ್ತು ಸಾಗುತ್ತಿರುವ ಲಾರಿಗಳು, ಹೇಗೆ ಇರುವೆ ಸಾಲಿನಂತೆ ಚಲಿಸುತ್ತಿವೆ. ಎಲ್ಲೆಲ್ಲಿ ಧೂಳು ಮೇಲೇಳುತ್ತಿದೆಯೋ ಅಲ್ಲೆಲ್ಲ ಈ ಲಾರಿಗಳ ಓಡಾಟವಿದೆ. ಇದೊಂದು ಆಧುನಿಕ ಭಾರತದ ದುರಂತ, ಮಾನವನಿರ್ಮಿತ ಪರಿಸರ ವಿನಾಶ, ಸ್ವಾವಲಂಬೀ ಜೀವನಕ್ಕೆ ನೀಡುತ್ತಿರುವ ಪ್ರಹಾರ,'' ಎಂದೆಲ್ಲ ವೀಕ್ಷಕ ವಿವರಣೆ ನೀಡುತ್ತಿರುವಾಗಲೇ ನಾವು ಟೇಹರಿ ನಗರದ ಸಮೀಪ ಬಂದಿದ್ದೆವು.

ಟೇಹರಿ ಎಂಬುದು ಉತ್ತರ ಪ್ರದೇಶದಿಂದ ಈ ಪ್ರವಾಸಕಾಲದಲ್ಲೇ ಸರ್ಕಾರದಿಂದ ಘೋಷಿಸಲಾದ ನೂತನ ರಾಜ್ಯವಾದ ಉತ್ತರಾಂಚಲಕ್ಕೆ ಸೇರಿದ ಒಂದು ಪ್ರಮುಖ ಜಿಲ್ಲಾ ಕೇಂದ್ರ. ಇದು ಗಂಗಾನದಿಯ ಮೂಲನದಿಗಳಾದ 'ಭಾಗೀರಥಿ ಮತ್ತು ಬನಾಂಗಿನಿ'ಯರ ಸಂಗಮಸ್ಥಳ. ಈ ಭಾಗೀರಥಿ ನದಿಯನ್ನು ದಾಟಿ ಟೇಹರಿ ಪಟ್ಟಣಕ್ಕೆ ಪ್ರವೇಶಿಸಬೇಕು. ಆ ಸೇತುವೆಯ ಈಚೆಯ ದಡದಲ್ಲಿ ನದಿಯ ಬುಡದಲ್ಲಿದ್ದ ಒಂದು ಜಿಂಕ್‌ಷೀಟಿನ ಷೆಡ್ಡಿಗೆ ಬಂದು ಸೇರಿದೆವು. ಸುಂದರ ಕನಸಿನಿಂದ ಭಗ್ನಗೊಂಡ ಮನಸ್ಸು, ಧೂಳಿನಿಂದ ಬೇಸತ್ತಿದ್ದ ಮುಖ, ಸರಿಯಾಗಿ ಹನ್ನೆರಡು ಗಂಟೆಯ ಮಟಮಟ ಮಧ್ಯಾಹ್ನದ ಉರಿಬಿಸಿಲಿನ ಬೇಗೆ, ಹಳ್ಳ ಗುಂಡಿಗಳ ರಸ್ತೆಯಲ್ಲಿ ಹಾದುಬಂದ ಆಯಾಸಗಳಿಂದ ಚುರುಗುಟ್ಟಿದ್ದ ಹೊಟ್ಟೆಗೆ ತಂಪು ಮಾಡಿಕೊಳ್ಳಲು ಹಾತೊರೆಯುತ್ತಿದ್ದ ನಮ್ಮನ್ನು ಈ ಹಳೆಯ ಷೆಡ್ಡಿಗೇಕೆ ಕರೆತಂದರೆಂದು ಕೊಳ್ಳುತ್ತಿರುವಾಗಲೇ ಬಾಗಿಲಿನಲ್ಲಿ ಒಂದು ನಾಮಫಲಕ ಎದುರಾಯಿತು. ''ಗಂಗಾ ಕುಟೀರ'' ಆಕ್ಷನ್ ಕ್ಯಾಂಪ್- ಸುಂದರಲಾಲ ಬಹುಗುಣ. ಏನು, ಅಂತರರಾಷ್ಟ್ರೀಯ ಖ್ಯಾತಿಯ ಈ ವ್ಯಕ್ತಿ ಈ ಹಳೆಯ ಷೆಡ್ಡಿನಲ್ಲಿದ್ದಾರೆಯೇ ಎಂದು ಹುಬ್ಬೇರಿಸುವಂತಾಯಿತು.

ಅದು ಸೇತುವೆಗೂ ರಸ್ತೆಗೂ ನಡುವೆ ಉಳಿದಿರುವ ಗುಡ್ಡದ ಪಕ್ಕದ ಜಾಗ. ದೂರದಲ್ಲಿ ಕಟ್ಟುತ್ತಿರುವ ಟೇಹರಿ ಡ್ಯಾಂಗೆ ಅಭಿಮುಖವಾಗಿದೆ. ನದಿಯ ಆಕಡೆ ದಡದಲ್ಲಿ ಡ್ಯಾಂಗೆ ಹೋಗುವ ರಸ್ತೆಯಿದ್ದು ಸದಾ ಲಾರಿಗಳ ಭರಾಟೆ, ತೂರಾಟವಿದೆ. ಡ್ಯಾಂನಿಂದ ಬರುತ್ತಿರುವ ಧೂಳಿನ ಮೋಡಗಳೂ ಇವರ ಷೆಡ್ಡಿನ ಮೂಲಕವೇ ಹಾದು ಟೇಹರಿ ಪಟ್ಟಣವನ್ನು ಸೇರುತ್ತವೆ. ಕಟ್ಟುತ್ತಿರುವ ಡ್ಯಾಂಗೆ ಸೆಡ್ಡುಹೊಡೆದು ಆ ಧೂಳನ್ನೆಲ್ಲ ತಾವೇ ಹೀರುತ್ತಿರುವವರಂತೆ ನಿರಂತರ ಹೋರಾಟದ ಬ್ಯಾನರನ್ನು ಹಿಡಿದು ಈ ಷೆಡ್ಡಿನಲ್ಲಿ ಜೀವಿಸುತ್ತಿದ್ದಾರೆ ಸರಳ ಸಜ್ಜನಿಕೆಯ, ತೆಳ್ಳಗಿನ ದೇಹದ, ಆದರೆ ಪ್ರಬಲವಾದ ಮನೋಬಲದ ಬಹುಗುಣ. ತೀರಾ ಸಾಧಾರಣವಾದ ಖಾದಿ ಬನೀನು ದಟ್ಟಿಪಂಚೆಯಲ್ಲಿದ್ದರು. ಋಷಿಯಂತೆ ಇಳಿಬಿಟ್ಟಿರುವ ಗಡ್ಡ-ತಲೆಗೂದಲು, ಷೆಡ್ಡಿನೊಳಗೆ ಹೊರಗೆ ಎಲ್ಲಿ ನೋಡಿದರೂ ಪುಸ್ತಕ, ಪುಸ್ತಕ, ಪುಸ್ತಕಗಳೇ. ದೇಶವಿದೇಶಗಳಿಂದ ಹರಿದುಬಂದಿರುವ ಕಾಗದ, ಪತ್ರಿಕೆ, ಪುಸ್ತಕಗಳ ರಾಶಿ; ಅದರ ನಡುವೆಯೇ ಹತ್ತಾರು ಜನ ಕುಳಿತುಕೊಳ್ಳಲು ಸ್ಥಳಾವಕಾಶ. ನೆಲದಲ್ಲಿ ಹಾಸಿರುವ ಜಮಖಾನದ ಮೇಲೆ ನಾವೆಲ್ಲ ಕುಳಿತೆವು. ನಮ್ಮನ್ನು ಆದರದಿಂದ ಬರಮಾಡಿಕೊಂಡು ನಮ್ಮ ಪರಿಚಯವನ್ನೆಲ್ಲ ವಿಚಾರಿಸಿಕೊಂಡರು. ನಾವು ಕರ್ನಾಟಕದವರೆಂದು ಪರಿಚಯಿಸಿಕೊಳ್ಳುತ್ತಿರುವಾಗ ಸಿರ್ಸಿಯ ಪರಿಸರ ಹೋರಾಟಗಾರ ಪಾಂಡುರಂಗ ಹೆಗಡೆ ತಮ್ಮಲ್ಲಿಗೆ ಬಂದು ಹೋಗುತ್ತಿದ್ದುದನ್ನು ನೆನಪಿಸಿ



*ಸುಂದರಲಾಲ ಬಹುಗುಣ ಅವರೊಂದಿಗೆ ನಾ. ಗೀತಾಚಾರ್ಯ ಮತ್ತು ಎಸ್. ಸಿ. ಐ. ತಂಡ. ಹಿನ್ನೆಲೆಯಲ್ಲಿ ಟೇಹರಿ ಡ್ಯಾಂ ಸೈಟ್*

ಕೊಂಡರು (ಬಹುಗುಣರ ಚಿಪ್ಕೋ ಚಳುವಳಿಯ ಪ್ರಭಾವದಿಂದಲೇ ಕರ್ನಾಟಕದಲ್ಲೂ ಅಪ್ಪಿಕೋ ಚಳುವಳಿ ಆರಂಭವಾದದ್ದು).

ಬಹುಗುಣರು ನಮ್ಮನ್ನು ಮೊದಲು ವಿಚಾರಿಸಿಕೊಂಡಿದ್ದು 'ಊಟಕ್ಕೆ ಏನು ಮಾಡಿಕೊಂಡಿದ್ದೀರಿ' ಎಂದು. ಸಂಚಾಲಕ ಮನೋಜ್ ಪಾಂಡೆ (ಬಹುಗುಣರಿಗೆ ಪರಿಚಿತರು, ಪರಿಸರ ಹೋರಾಟಗಾರರು) ಕೆದರಿದ ಕೂದಲು, ಗುಂಗುರು ಗಡ್ಡ, ದೊಗಲೆ ಜುಬ್ಬ-ಪ್ಯಾಂಟಿನ 'ಬುದ್ಧಿಜೀವಿ'ಯ ಸಿದ್ಧ ವೇಷದಲ್ಲಿದ್ದರು. ದೆಹಲಿಯನ್ನೆಲ್ಲ ಸೈಕಲ್‌ನಲ್ಲೇ ಸುತ್ತಾಡುವ ಸ್ವಾವಲಂಬಿ ಜೀವನಶೈಲಿಯ ಸಾಧಕ ಯಾವ ಸಂಕೋಚವೂ ಇಲ್ಲದೆ ಹೇಳಿದರು: 'ಏನೂ ಇಲ್ಲ, ನಿಮ್ಮಲ್ಲಿಗೆ ಬಂದಿದ್ದೇವೆ!' ಬಹುಗುಣರು ಸಂತೋಷದಿಂದಲೇ ಎದ್ದು ತಮ್ಮ ಶ್ರೀಮತಿಯವರಿಗೆ ಸೂಚನೆ ಕೊಟ್ಟರು. ಅವರು ಷೆಡ್ಡಿನಲ್ಲಿ ಮಾಡಿಕೊಂಡಿರುವ ಅಡಿಗೆ ಮನೆಯ ಕೋಣೆಯಿಂದ ದೊಡ್ಡದೊಂದು ಡಬರಿ, ಅಕ್ಕಿ, ತರಕಾರಿ, ಮಸಾಲೆಪುಡಿಗಳನ್ನು ತಂದಿಟ್ಟರು. ಸರಿ, ನಾವೆಲ್ಲ ಸೇರಿ ಷೆಡ್ಡಿನ ಹೊರಗೆ ಕೈತೋಟದಲ್ಲಿ ಒಲೆ ಇಟ್ಟು ಅವನ್ನೆಲ್ಲ ಒಟ್ಟಿಗೆ ಹಾಕಿ ಕಿಚಡಿ ಮಾಡತೊಡಗಿದೆವು. ಆಕಡೆ ಕಿಚಡಿ ಬೇಯುತ್ತಿದ್ದಂತೆ ಈಕಡೆ ಅಲ್ಲೇ ನೆಲದಲ್ಲಿ ಕುಳಿತ ಬಹುಗುಣರೊಂದಿಗೆ ಮಾತುಕತೆ ಶುರುವಾಯಿತು. ಅವರ ಅನುಭವದ ಅನ್ನವೂ ಬೇಯುತ್ತ ಪಕ್ವವಾಗುತ್ತಿತ್ತು. ಅವರ ಕಣ್ಣುಗಳಲ್ಲಿದ್ದ ಮಿಂಚಿನ ಹೊಳಪು, ಮಾತಿನಲ್ಲಿದ್ದ ಖಚಿತತೆ, ಮುಖದಲ್ಲಿದ್ದ ಆತ್ಮಸ್ಥೈರ್ಯ, ಸಹಜವೆಂಬಂತೆ ಸರಾಗವಾಗಿ ಹೇಳುತ್ತಿದ್ದ ಅನುಭವ ಸಾರದಿಂದ ಅವರಲ್ಲಿ ಋಷಿಸದೃಶವಾದ ಸಾತ್ವಿಕ ತೇಜಸ್ಸು ಕಾಣುತ್ತಿತ್ತು. ಗಾಂಧೀಜಿಯ, ಭಾರತೀಯ ಋಷಿ ಪರಂಪರೆಯ ಕೊಂಡಿಯಂತೆ ಅವರು ನನಗೆ ಕಾಣುತ್ತಿದ್ದರು. ನಮ್ಮ ತಂಡದಿಂದ ಅವರಿಗೆ ಮೊದಲು ಎದುರಾದ ಪ್ರಶ್ನೆ ನಿಮ್ಮ ಹೋರಾಟದ ಜೀವನಕ್ಕೆ ಹಿನ್ನೆಲೆಯೇನು? ಸ್ಫೂರ್ತಿ ಯಾವುದು? ''ಮೂರನೇ ವರ್ಷದಲ್ಲೇ ನಾನು ಈ ಹೋರಾಟದ ಜೀವನಕ್ಕೆ ಕಾಲಿಟ್ಟೆ. ನಮ್ಮ ತಂದೆ ರಿಟೈರ್ಡ್ ಫಾರೆಸ್ಟ್ ಆಫೀಸರ್. ಅವರಿಗೆ ನಾನು ಐದನೇ ಮತ್ತು ಕೊನೆಯ ಮಗ. ಹೆಜ್ಜೆ ಹೆಜ್ಜೆಯಲ್ಲೂ ಅವರು ಕಲಿಸಿದ ಶಿಸ್ತು, ಪರಿಸರದ ನಡುವೆಯ ಬದುಕು, ಒಡನಾಟಗಳ ಮೂಲಕ ಸಣ್ಣ ವಯಸ್ಸಿನಲ್ಲಿ ನಾನು ಕಲಿತಿದ್ದೇ ನನ್ನ ಹೋರಾಟದ ಮೂಲ ಬಂಡವಾಳ. ನನ್ನ ತಂದೆಯವರೇ ನನ್ನನ್ನು ಸಾರ್ವಜನಿಕ ಸೇವೆಗೆ ತರಬೇತುಗೊಳಿಸಿದವರು. ಅವರೇ ನನ್ನ ಸ್ಫೂರ್ತಿ.''

ಪರಿಸರ ಹೋರಾಟವೇ ಏಕೆ ನಿಮಗೆ ಮುಖ್ಯವಾಯಿತು? ''ನಮ್ಮ ಹಳ್ಳಿಯ ಜನರಲ್ಲಿ ಅದ್ಭುತವಾದ ತಂತ್ರಜ್ಞಾನವಿದೆ, ಸ್ವಾವಲಂಬಿ ಜೀವನ ವಿಧಾನವಿದೆ. ಯಂತ್ರ ನಾಗರೀಕತೆಯಿಂದ ಅದನ್ನೆಲ್ಲ ನಾವು ಹಾಳುಮಾಡುತ್ತಿದ್ದೇವೆ. ನಮ್ಮ ಮೂಲಭೂತ ಜ್ಞಾನವನ್ನು ನಾವು ಗುರುತಿಸಬೇಕು, ಗೌರವಿಸಬೇಕು. ನೀವು ಖಾಡಿಯಲ್ಲಿ ತಂಗಿದ್ದ ಸ್ಥಳ ನೋಡಿರಬಹುದು. ಅಲ್ಲಿನ ಜನ ನದಿಯ ನೀರಿನ ಶಕ್ತಿ ಬಳಸಿ ಗೋಧಿಹಿಟ್ಟು ಬೀಸುವ ತಂತ್ರಜ್ಞಾನ ಹೊಂದಿದ್ದಾರೆ. ಇದು ಬಡವರ ಕಲೆ. ಹಿಟ್ಟು ಬೀಸಿಕೊಳ್ಳುವವರೆಲ್ಲ ಅವರಿಗೆ ಸ್ವಲ್ಪ ಹಿಟ್ಟು ಕೊಟ್ಟು ಅವರ ಕಲೆಯನ್ನು, ಆ ತಂತ್ರಜ್ಞಾನವನ್ನು, ಗೌರವಿಸುತ್ತಾರೆ, ಪ್ರೋತ್ಸಾಹಿಸುತ್ತಾರೆ. ಈ ವಾಟರ್ ಮಿಲ್‌ನ ತಂತ್ರಜ್ಞಾನಕ್ಕೆ ಯಾವ ಆಧುನಿಕ ತಂತ್ರಜ್ಞಾನ ಸಮ ಹೇಳಿ,'' ಎಂದು ಪ್ರಶ್ನಿಸುತ್ತಲೇ ''ಪ್ರತಿಯೊಬ್ಬರೂ ಸಾಮಾನ್ಯ ಮನುಷ್ಯನಾಗಿ ಬದುಕುವುದನ್ನು ಕಲಿಯಬೇಕು.

ಸಾಮಾನ್ಯರಲ್ಲಿ ಒಂದಾಗಿ ಗುರುತಿಸಿಕೊಳ್ಳಬೇಕು. ಯಾವುದೇ ಅನ್ಯಾಯದ ವಿರುದ್ಧ ಹೋರಾಡುವ ಮನೋಭಾವ ಬೆಳೆಸಿಕೊಳ್ಳಬೇಕು. ಇಂದಿನ ಆಧುನಿಕ ಜೀವನಶೈಲಿ ನಮ್ಮನ್ನು ಪರಾವಲಂಬಿಗಳನ್ನಾಗಿ ಮಾಡುತ್ತಿದೆ. ದೇಹವನ್ನು ಬೆಳೆಸುತ್ತಿದೆಯೇ ವಿನಾ ಮನಸ್ಸನ್ನು ಬೆಳೆಸುತ್ತಿಲ್ಲ. ಕನಿಷ್ಠ ಅಗತ್ಯಗಳನ್ನು ಮಾತ್ರ ಪೂರೈಸಿಕೊಳ್ಳುವ ಮನೋಭಾವ ನಗರದವರಲ್ಲಿ ಬರಬೇಕು. ಇದು ಭಾರತದ ಹಳ್ಳಿಗಳಲ್ಲಿದೆ. ನಿಜವಾದ ಸ್ವಾವಲಂಬಿ ಜೀವನ ಪರಿಸರದ ಒಡನಾಟದಲ್ಲಿದೆ. ಅದಕ್ಕೆ ನಾವು ಒತ್ತುಕೊಡಬೇಕು. ಅದನ್ನು ಬೆಳೆಸಬೇಕು. ಡ್ಯಾಂನಂಥ ತಂತ್ರಜ್ಞಾನಗಳು ನಮ್ಮ ಸ್ವಾವಲಂಬಿ ಜೀವನವನ್ನು ನಾಶಮಾಡುತ್ತವೆ. ಪರಿಸರಾವಲಂಬನವನ್ನು ತಪ್ಪಿಸಿ ನಮ್ಮ ಜನರ ಆತ್ಮಸ್ಥೈರ್ಯವನ್ನು ಕುಗ್ಗಿಸುತ್ತದೆ. ಮೂಲತಃ ಸ್ವಾವಲಂಬಿಗಳಾದ ನಮಗೆ ಇಂತಹ ದಾಸ್ಯ ಜೀವನ ಬೇಕೆ?'' ಎಂದು ಕೇಳುವ ಅವರ ಪ್ರಶ್ನೆಯಲ್ಲಿ ಅಗಾಧವಾದ ಕಾಳಜಿ ಇದೆ.

ಭಾರತದ ಇಂದಿನ ಹೋರಾಟದ ಯಶಸ್ಸಿನ ಗುಟ್ಟೇನು? ಆಧುನಿಕ ಹೋರಾಟದ ಯಶಸ್ಸಿನ ಗುಟ್ಟೇನು?

''ಆಧುನಿಕ ಜೀವನದ ಶೈಲಿ, ದೇಶದ ದಿವಾಳಿತನ, ಪರರಾಷ್ಟ್ರಗಳತ್ತ ಕೈಚಾಚುವ ದೈನ್ಯತೆ, ಹಣವಂತ-ಬಡವರನ್ನಾಗಿ ಪ್ರತ್ಯೇಕಿಸುವ ಸ್ಥಿತಿ, ಮುಂತಾದವುಗಳೆಲ್ಲ ಹೊಳೆಯುತ್ತಿತ್ತು. ಗಾಂಧೀವಾದದಲ್ಲಿ ಸ್ವಾವಲಂಬಿ ಜೀವನ ಶೈಲಿ ರೂಪಿಸುವ, ದೇಶೀಯ ತಂತ್ರಜ್ಞಾನಗಳನ್ನು ಅಭಿವೃದ್ಧಿಪಡಿಸುವ, ಯಾರಿಗೂ ತೊಂದರೆಯಾಗದ ರೀತಿಯಲ್ಲಿ ಆಧುನಿಕ ಸೌಲಭ್ಯಗಳನ್ನು, ತಂತ್ರಜ್ಞಾನಗಳನ್ನು ರೂಢಿಸಿಕೊಳ್ಳುವ ಸ್ವದೇಶಿ ಚಳುವಳಿಯ ಕಲ್ಪನೆ ನಿಚ್ಚಳವಾಗಿತ್ತು. ಸಿಂಪ್ಲಿಸಿಟಿ ನಮ್ಮ ಜೀವನದ ಧ್ಯೇಯವಾಗಬೇಕು. ಸೆಲ್ಫ್ ಕಾನ್ಫಿಡೆನ್ಸ್ ಬೆಳೆಸಿಕೊಳ್ಳಬೇಕು. ಜನರ ನಡುವೆ ಬೆಳೆಯಬೇಕು. ಜನರ ಅಗತ್ಯಗಳಿಗೆಲ್ಲ ಸ್ಪಂದಿಸಬೇಕು. ಅನ್ಯಾಯದ ವಿರುದ್ಧ ಹೋರಾಡಬೇಕು. ನಾವು ಬಹುಸಂಖ್ಯಾತರಿದ್ದರೂ, ಸಮರ್ಥರಿದ್ದರೂ ಇತರರನ್ನು ಬೇಡುವ ಸ್ಥಿತಿಯಲ್ಲಿರುವುದು ನಮ್ಮ ದೌರ್ಬಲ್ಯ. ನಾವು ನ್ಯಾಯಕ್ಕೆ ಕೈ ಎತ್ತಬೇಕು. ನಮಗೆ ಬರಬೇಕಾದ್ದನ್ನು ಪಡೆಯುವುದಕ್ಕೆ ಬೇಡಬಾರದು, ಹಿಂಜರಿಯಬಾರದು, ಸರಿದಾರಿಯಲ್ಲಿ ಹೋರಾಡಬೇಕು. ಗಾಂಧೀಜಿಯವರ ಜೀವನ ಶೈಲಿ ಬೆಳೆಸಿಕೊಳ್ಳಬೇಕು.''

ಇದು ಸ್ವತಃ ಬಹುಗುಣರ ಜೀವನಶೈಲಿಯೇ ಆಗಿತ್ತು. ಯಾವುದೇ ಯಶಸ್ವಿ ನಾಯಕನ ಗುಣ ನುಡಿದಂತೆ ನಡೆಯುವುದು. ನಮ್ಮ ತಂಡದಲ್ಲಿದ್ದ ಬಾಂಗ್ಲಾದೇಶದ ಪ್ರತಿನಿಧಿ ಮಹಮದ್ ಜಾಹಿರ್ ಒಂದು ಪ್ರಶ್ನೆ ಹಾಕಿದರು: ನಾನು ಇದೇ ಎಸ್.ಸಿ.ಐ. ಮೂಲಕ ಹತ್ತು ವರ್ಷದ ಹಿಂದೆ ಇಲ್ಲಿಗೆ ಭೇಟಿಕೊಟ್ಟಿದ್ದೆ. ಆಗಿಗಿಂತ ಈಗಿನವರೆಗೆ ಹೆಚ್ಚಿನ ಬದಲಾವಣೆಯೂ ಕಂಡುಬರುತ್ತಿಲ್ಲ. ಡ್ಯಾಂ ನಿರ್ಮಾಣ ನಡೆಯುತ್ತಲೇ ಇದೆ. ನಿಮ್ಮ ಹೋರಾಟದಿಂದ ಪ್ರಯೋಜನವೇನು?

ಬಹುಗುಣ ಅಳುಕದೆ ಉತ್ತರಿಸಿದರು: ''ಕಮ್ಮಾರನಂತೆ ಕಬ್ಬಿಣ ಬಗ್ಗುವವರೆಗೆ ಬಡಿಯುವುದೇ ನಮ್ಮ ಹೋರಾಟದ ಗುಟ್ಟು. ನಮ್ಮ ವಿಚಾರಗಳು ಆಳುವವರಿಗೆ ಅರ್ಥವಾಗುವವರೆಗೆ ಹೋರಾಡುತ್ತಲೇ ಇರಬೇಕು. ಆಡಳಿತ ನಡೆಸುವವರ ಕುರುಡು ಆಲೋಚನೆಗಳೇ ಮುಖ್ಯವಲ್ಲ, ಬದುಕು ನಡೆಸುವ ಜನರ ಅಗತ್ಯಗಳು ಮುಖ್ಯವೆಂಬುದನ್ನು ಅರ್ಥಮಾಡಿಸುವುದಕ್ಕಾಗಿ ನಮ್ಮ ಹೋರಾಟ. ಜನಶಕ್ತಿಯನ್ನು ತೋರಿಸಲು ನಮ್ಮ ಹೋರಾಟ. ಮನುಷ್ಯ ಶಕ್ತಿಯ ಮುಂದೆ ಸರ್ಕಾರದ ಶಕ್ತಿ ಶೂನ್ಯವೆಂಬುದನ್ನು ಸಾರುವುದು ನಮ್ಮ ಉದ್ದೇಶ. ಯಾವುದೇ ಅನ್ಯಾಯದ ಅಕ್ರಮದ ಅವಾಸ್ತವದ ಉದ್ದೇಶಗಳ ವಿರುದ್ಧ ಹೋರಾಡಲು ಮುಂದಿನವರಿಗೆ ಉದಾಹರಣೆಯಾಗಿಸುವುದೇ ನಮ್ಮ ಹೋರಾಟದ ಫಲ.''

ಅವರ ಖಂಡಿತಾಭಿಪ್ರಾಯ ಸಿಡಿಗುಂಡಿನಂತೆ ಸಿಡಿಯುತ್ತಿತ್ತು. ಡ್ಯಾಂ ನಿರ್ಮಾಣದ ಶಬ್ದಗಳಾಗಲಿ ಲಾರಿ ಬಸ್ಸುಗಳ ಓಡಾಟದ ಅಬ್ಬರವಾಗಲಿ ಇದರ ಮುಂದೆ ನಿಲ್ಲಲಿಲ್ಲ. ಅವರ ಮಾತಿನಲ್ಲಿದ್ದ ಮೊನಚು, ಅವರ ಹೋರಾಟ, ಜೀವನದ ಅಚಲ ವಿಶ್ವಾಸಕ್ಕೆ ಸಾಕ್ಷಿಯಾಗಿತ್ತು. ಟೀಹರಿ ಯೋಜನೆ ಹೊಟ್ಟೆಯ, ಬದುಕಿನ, ಪ್ರಶ್ನೆಯಾದಾಗ ಅದು ಹೋರಾಟಕ್ಕೆ ಇಳಿಯುತ್ತದೆ. ಯಾವುದೇ ಹೋರಾಟದ ಹಿಂದೆ ಅಂಥ ಒಂದು ಅನಿವಾರ್ಯತೆ ಇರುತ್ತದೆ. ಅವರ ಹೇಳಿಕೆಗಳು ಅವರ ಹೋರಾಟದ ಮನೋಭಾವವನ್ನು ಸಾರುವಂತಿದ್ದುವು, ಅವರ ಹೋರಾಟಕ್ಕಿದ್ದ ಜನಶಕ್ತಿಯ ದ್ಯೋತಕವಾಗಿತ್ತು. ಬಹುಗುಣರು ತಮ್ಮ ಅನುಭವದ ನೇರನುಡಿಗಳಿಂದ ನಮ್ಮಲ್ಲಿದ್ದ ಅಪಕ್ವ ವಿಚಾರಗಳನ್ನೆಲ್ಲ ಪಕ್ವಗೊಳಿಸುತ್ತಿದ್ದಂತೆ 'ಕಿಚಡಿ' ಯೂ ಪಕ್ವವಾಗಿತ್ತು. ಮಾತಿನ ನಡುವೆಯೂ ಉರಿ ಮಾಡಿ, ತಿರುವಿ, ಅದರ ಪಾಕವನ್ನೂ ಪದೇ ಪದೇ ನಾವು ಸರಿಮಾಡುತ್ತಿದ್ದೆವು. ಮತ್ತೆ ಅಡುಗೆ ಮನೆಯಿಂದ ತಟ್ಟೆಗಳು ಬಂದುವು. ಬಹುಗುಣರೇ ಸೌಟು ಹಿಡಿದು ನಿಂತು ಕಿಚಡಿಯನ್ನು ಎಲ್ಲರಿಗೂ ಉಣಬಡಿಸಿದರು. ಕೊನೆಯಲ್ಲಿ ಉಳಿದದ್ದನ್ನು-ಸೀಕಲು ಸಮೇತ- ತಾವು, ತಮ್ಮ ಮಡದಿ ನಮ್ಮೊಂದಿಗೇ ತಿಂದು ಅಂದಿನ ತಮ್ಮ ಊಟದ ಶಾಸ್ತ್ರ ಮುಗಿಸಿದರು.



*ಸ್ವರ್ಗಕ್ಕೆ ಮೆಟ್ಟಿಲೋಪಾದಿಯಲ್ಲಿರುವ ಹಿಮಾಲಯ ತಪ್ಪಲಿನ ನೋಟ*

ಕಿಚಡಿ ಸವಿಯುತ್ತಾ ''ಹದಗೆಟ್ಟಿರುವ ಇಂದಿನ ಸಮಾಜ ಸರಿದಾರಿಗೆ ಬರುತ್ತದೆಯೇ'' ಎಂಬ ಕೊನೆ ಪ್ರಶ್ನೆಗೆ ದೃಢವಿಶ್ವಾಸದಿಂದಲೇ ಹೇಳಿದರು:

''ಖಂಡಿತವಾಗಿಯೂ ಜನಾಂಗ ಸರಿದಾರಿಗೆ ಬರುತ್ತದೆ, ನಮ್ಮ ತಪ್ಪುಗಳನ್ನು ಅರ್ಥ ಮಾಡಿಕೊಳ್ಳುತ್ತದೆ ಎಂಬ ಭರವಸೆಯಲ್ಲಿ ನಾನಿದ್ದೇನೆ. ಇಂದಿನ ಹಿರಿಯರು ಕಲ್ಪ್ರಿಟ್ಸ್ ಆಗಿರುವುದರಿಂದಲೇ ಕಿರಿಯರು ತಪ್ಪುದಾರಿಗೆ ಹೋಗುತ್ತಿದ್ದಾರೆ. ಇದು ಬಹಳ ದಿನ ಹೀಗೆ ಇರುವುದಿಲ್ಲ, ಮುಂದೊಂದು ದಿನ ಖಂಡಿತ ಅರ್ಥವಾಗುತ್ತದೆ,'' ಎಂದು ನಮ್ಮಲ್ಲಿ ಭರವಸೆ ಮೂಡಿಸಿ ನಮ್ಮನ್ನೆಲ್ಲ ಆತ್ಮೀಯವಾಗಿ ಬೀಳ್ಕೊಟ್ಟರು (ನಾವು ಹೊರಡುತ್ತಿದ್ದಂತೆ ಒಂದಿಬ್ಬರು ವಿದೇಶಿ ವ್ಯಕ್ತಿಗಳು ಅವರ ಭೇಟಿಗಾಗಿ ಬಂದರು).

ಬಹುಗುಣರ ಕಿಚಡಿಯ ಅನುಭವ ರಸಾಯನವನ್ನು ಸವಿಯುತ್ತ ಕಿಚಡಿಯೇ ಆಗಿದ್ದ ಟೀಹರಿಯ ರಸ್ತೆಗಳಲ್ಲಿ ಹುಷಾರಾಗಿ ಕಾಲಿಡುತ್ತ ಇನ್ನೊಂದು ವಾಹನದಲ್ಲಿ ಬುಡಾಖೇದಾರ್‌ನತ್ತ ಬನಾಂಗಿನಿ ನದಿಯ ದಡದಲ್ಲೇ ಹಳ್ಳ ತಗ್ಗುಗಳ ರಸ್ತೆಯಲ್ಲಿ ಧೂಳನ್ನು ಸೀಳುತ್ತ ಹೊರಟೆವು.

ಟೀಹರಿ ಡ್ಯಾಂ ನಿರ್ಮಾಣದ ಹತ್ತಿರದಿಂದಲೇ ನಮ್ಮ ವಾಹನ ಹೋಗುತ್ತಿತ್ತು. ಎರಡು ಎತ್ತರವಾದ ಬೆಟ್ಟಗಳ ನಡುವೆ ಇನ್ನೊಂದು ಬೆಟ್ಟ ಮಾಡುವುದೇ ಈ ಡ್ಯಾಂನ ನಿರ್ಮಾಣ ಕಾರ್ಯ. ನೀರು ನಿಲ್ಲುವ ಸ್ಥಳದ ಸಣ್ಣಪುಟ್ಟ ಗುಡ್ಡಗಳನ್ನೆಲ್ಲ ಕಡಿದು ಇಲ್ಲಿ ತಂದು ಸುರಿಯಲಾಗುತ್ತಿದೆ. ಇದು ಪೂರ್ಣವಾದ ಮೇಲೆ ಸಂಪೂರ್ಣ ದೇಶೀಯ ತಂತ್ರಜ್ಞಾನದಲ್ಲಿ ಕಟ್ಟಿದ ಪ್ರಪಂಚದ ನಾಲ್ಕನೇ ಅತಿ ಎತ್ತರದ ಡ್ಯಾಂ ಆಗುತ್ತದೆಂದು ಹೇಳಿಕೆಯಿದೆ. ಈ ಹೆಗ್ಗಳಿಕೆಗಾಗಿ ನೂರಾರು ಬೆಟ್ಟಗುಡ್ಡಗಳ ಸೌಂದರ್ಯಭರಿತ ಪ್ರಕೃತಿ ಸಂಪತ್ತು, ಊರು-ಕೇರಿಗಳು, ಸಹಸ್ರಾರು ಸ್ವಾವಲಂಬಿ ಜೀವಿಗಳು ಬಲಿಯಾಗಬೇಕಾಗಿದೆ. ಶಾಶ್ವತವಾಗಿ ಇವರ ಬದುಕು ಅತಂತ್ರದ ಆತಂಕದ ಸಮಸ್ಯೆಯ ಸುಳಿಯಲ್ಲಿ ಸಿಕ್ಕಿ ಆತ್ಮವಿಶ್ವಾಸ ಕಳೆದುಕೊಂಡು ಪರಾವಲಂಬಿಗಳಾಗಿ ಬದುಕಬೇಕಾದ ಸ್ಥಿತಿಗೆ ತಲುಪಬೇಕಾಗಿದೆ. ಯಾರಿಗೆ ಬೇಕು ಇಂಥ ವಿನಾಶಕಾರಕ ಆಧುನಿಕ ತಂತ್ರಜ್ಞಾನಗಳು?

ಮತ್ತೊಮ್ಮೆ ನಾನಿಲ್ಲಿಗೆ ಬರುವ ಕಾಲಕ್ಕೆ ನಾನು ಓಡಾಡಿದ ಈ ರಸ್ತೆಗಳಿರುವುದಿಲ್ಲ. ಈ ಬೆಟ್ಟಗುಡ್ಡಗಳ ಸೌಂದರ್ಯವಿರುವುದಿಲ್ಲ. ಗಜಿಬಿಜಿಯಿಂದ ಕೂಡಿರುವ ಪುರಾತನ ಐತಿಹಾಸಿಕ ಮಹತ್ವವಿರುವ ಈ ಟೀಹರಿ ಪಟ್ಟಣವಿರುವುದಿಲ್ಲ. ಬದಲು ಇವುಗಳ ಮೇಲೆ ನೂರಾರು ಅಡಿಗಳ ನೀರು ನಿಂತು, ಇವೆಲ್ಲ ಜಲಸಮಾಧಿಯಾಗಿರುತ್ತವೆ. ಗಾಂಧೀಜಿ ಬಹುಗುಣರ ಆದರ್ಶಗಳೂ ಕೂಡ. ಆದರೂ ಆ ನೀರಿನ ಮೇಲೂ ಕಮಲ ಅರಳುವಂತೆ ಈ ಸಾತ್ವಿಕ ಗುಣದ ಕೆಸರುಮಣ್ಣಿನಿಂದ ಇನ್ನೊಬ್ಬ ಗಾಂಧೀಜಿ ಬಹುಗುಣರಂಥವರು ತಲೆ ಎತ್ತುತ್ತಾರೆ, ನಮ್ಮ ತಲೆ ಕಾಯುತ್ತಿರುತ್ತಾರೆ.

**ನಾ. ಗೀತಾಚಾರ್ಯ**
ನಂ. ೧, ೫ನೇ ಕ್ರಾಸ್, ಕೆಂಪೇಗೌಡನಗರ, ಬೆಂಗಳೂರು - ೫೬೦ ೦೧೯

ಸೂಫಿ ಕತೆ

# ಭಾರತ ದೇಶದ ಹಕ್ಕಿ

ವ್ಯಾಪಾರಿಯೊಬ್ಬನು ಭಾರತ ದೇಶದ ಹಕ್ಕಿಯೊಂದನ್ನು ಸಾಕಿದ್ದ. ಅದನ್ನು ಅವನು ಸದಾ ಪಂಜರದೊಳಗಿಡುತ್ತಿದ್ದ. ಒಮ್ಮೆ ಆ ವ್ಯಾಪಾರಿಯು ಭಾರತ ದೇಶದ ಪ್ರವಾಸವನ್ನು ಕೈಕೊಳ್ಳಬೇಕಾಗಿ ಬಂತು. ಪಂಜರದೊಳಗೆ ಬಂಧಿಯಾಗಿದ್ದ ಹಕ್ಕಿಯು ತಾಯ್ನಾಡಿನಿಂದ ತನಗಿಷ್ಟವಾದ ಏನನ್ನಾದರೂ ಬಯಸಬಹುದೇ ಎಂಬುದನ್ನು ತಿಳಿದುಕೊಳ್ಳಲು ಇಚ್ಛಿಸಿದ. ಹಾಗೇನಾದರೂ ಅದು ಬಯಸುವುದಾದರೆ ತಂದು ಕೊಡುವುದಾಗಿಯೂ ಹಕ್ಕಿಗೆ ಹೇಳಿದ. ಸರಳುಗಳ ಗೂಡಿನಿಂದ ಸದಾ ಬಿಡುಗಡೆಗಾಗಿ ಚಡಪಡಿಸುತ್ತಿದ್ದ ಹಕ್ಕಿಗೆ ಬೇರಾವುದರ ಮೇಲೂ ಮನಸ್ಸಿರಲಿಲ್ಲ. ಹಾಗೆಯೇ ಅದನ್ನು ಬಿಡುಗಡೆ ಮಾಡಿ ಸ್ವಾತಂತ್ರ್ಯ ನೀಡಬೇಕೆಂಬ ಮನಸ್ಸು ವ್ಯಾಪಾರಿಯದಾಗಿರಲಿಲ್ಲ.

''ಅಯ್ಯಾ, ನೀನು ಭಾರತ ದೇಶಕ್ಕೆ ಹೋಗುತ್ತಿರುವೆ. ಪ್ರವಾಸ ಕಾಲದಲ್ಲಿ ಯಾವುದಾದರೊಂದು ಅರಣ್ಯ ಪ್ರದೇಶವನ್ನು ನನಗಾಗಿ ಪ್ರವೇಶಿಸು. ಮುಕ್ತ ವಾತಾವರಣದಲ್ಲಿ ಜೀವಿಸುತ್ತಿರುವ ಅಲ್ಲಿನ ಹಕ್ಕಿಗಳಿಗೆ ನನ್ನ ದುಃಸ್ಥಿತಿಯ ಕತೆಯನ್ನು ತಿಳಿಸಿ ಹೇಳು. ಅಷ್ಟೇ ಸಾಕು'' ಎಂದು ಹಕ್ಕಿಯು ಅವನನ್ನು ಕೇಳಿಕೊಂಡಿತು.

ವ್ಯಾಪಾರಿಯು ಹಕ್ಕಿಯ ಕೋರಿಕೆಯಂತೆ ಅರಣ್ಯವನ್ನು ಪ್ರವೇಶಿಸಿ ಅಲ್ಲಿನ ಪಕ್ಷಿಸಮೂಹಕ್ಕೆ ಅದರ ಕತೆಯನ್ನು ಹೇಳಿದ. ಕತೆಯನ್ನು ಕೇಳುತ್ತಿದ್ದಂತೆಯೇ ಮರದ ಮೇಲಿದ್ದ ಒಂದು ಹಕ್ಕಿಯು ಕಳಚಿಕೊಂಡು ತೊಪ್ಪನೆ ಕೆಳಗೆ ಬಿದ್ದಿತು. ದೂರದ ದೇಶದಲ್ಲಿ ಬಂಧಿತನಾಗಿ ಕೊಳೆಯುತ್ತಿರುವ ಹಕ್ಕಿಯ ಸಂಬಂಧಿಕ ಹಕ್ಕಿಯು ಇದಾಗಿರಬಹುದು, ಆ ಕಾರಣದಿಂದಲೇ ಈ ಹಕ್ಕಿಯ ಪ್ರಾಣವು ಹಾರಿ ಹೋಗಿರಬಹುದೆಂದು ವ್ಯಾಪಾರಿಯು ಊಹಿಸಿಕೊಂಡ.

ಪ್ರವಾಸ ಮುಗಿದ ನಂತರ ಅವನು ಸ್ವದೇಶಕ್ಕೆ ವಾಪಸಾದ. ತಾಯ್ನಾಡಿನಿಂದ ತಂದಿರುವ ಶುಭವಾರ್ತೆ ಏನಾದರೂ ಇದೆಯೇ ಎಂದು ಹಕ್ಕಿಯು ಅವನನ್ನು ವಿಚಾರಿಸಿತು.

'ಸಮಾಚಾರವೇನೊ ಇದೆ. ಆದರೆ ಅದನ್ನು ಶುಭವಾರ್ತೆ ಎಂದು ಹೇಳಲಾರೆ. ನಿನ್ನ ಕತೆಯನ್ನು ಕೇಳಿದ ಮರುಕ್ಷಣವೇ ಹಕ್ಕಿಯೊಂದು ಮರದಿಂದ ಕೆಳಗುರುಳಿ ಪ್ರಾಣ ಕಳೆದುಕೊಂಡಿತು. ಬಹುಶಃ ಅದು ನಿನ್ನ ಸಂಬಂಧಿಕನಿರಬಹುದು' ಎಂದು ವ್ಯಾಪಾರಿಯು ಹೇಳಿದ.

ಈ ವಾರ್ತೆಯನ್ನು ಕೇಳುತ್ತಿದ್ದಂತೆಯೇ ಹಕ್ಕಿಯು ಹಿಡಿಸೂಪ್ಪಿನಂತಾಗಿ ಪಂಜರದೊಳಗೆ ಕುಸಿದು ಬಿತ್ತು. ತನ್ನ ಸಂಬಂಧಿಕ ಹಕ್ಕಿಯ ಅಕಾಲಿಕ ಮರಣ ವಾರ್ತೆಯನ್ನು ಕೇಳಿ ಈ ಹಕ್ಕಿಯ ಪ್ರಾಣ ಹಾರಿಹೋಯಿತಲ್ಲಾ ಎಂದು ಅವನು ಖೇದಗೊಂಡ. ಅದನ್ನು ಅಲ್ಲಿಂದ ಎತ್ತಿ ಕಿಟಕಿಯ ಹೊರಗಿನ ಮೇಜು ಕಡ್ಡಿನ ಮೇಲಿರಿಸಿದ. ಹಕ್ಕಿಯು ಪಟಕ್ಕನೆ ಗರಿ ಬಿಚ್ಚಿ ಸಮೀಪದಲ್ಲಿದ್ದ ಮರದತ್ತ ಹಾರಿತು.

ಮರದ ಮೇಲೆ ಕುಳಿತು ವ್ಯಾಪಾರಿಗೆ ಹೀಗೆ ಹೇಳಿತು: 'ಅಶುಭ ಎಂದು ನೀನು ಭಾವಿಸಿದ ವಾರ್ತೆಯು ನನಗೆ





ಶುಭವಾರ್ತೆಯಾಗಿತ್ತು. ಆಪತ್ಕಾಲದಲ್ಲಿ ಜೀವ ರಕ್ಷಿಸಿಕೊಳ್ಳುವ ಉಪಾಯ ಯಾವುದು ಎಂಬ ರಹಸ್ಯವು ಆ ವಾರ್ತೆಯಲ್ಲಿ ಅಡಗಿತ್ತು. ನೀನು ನನ್ನನ್ನು ಬಂಧನದಲ್ಲಿಟ್ಟುಕೊಂಡಿದ್ದವನು. ಭಾರತದ ಆ ಹಕ್ಕಿಯು ನನ್ನ ಬಿಡುಗಡೆಯ ನಿಗೂಢ ಸಂದೇಶವನ್ನು ನಿನ್ನಂಥವನ ಮೂಲಕವೇ ತಲುಪಿಸಿತು.'

ಬಂಧಮುಕ್ತವಾದ ಹಕ್ಕಿಯು ಹೀಗೆ ಹೇಳಿ ಮರದಿಂದ ಮೇಲಕ್ಕೆ ಹಾರುತ್ತಾ ವಿಶಾಲ ನೀಲಾಂಬರವನ್ನು ಸೇರಿತು.

*ಕನ್ನಡಕ್ಕೆ : ಗಂಗಾಧರ ಮೂರ್ತಿ* - ರೂಮಿ

# ತಾತನೂರಿಗೆ ಬಾರೆಲೆ, ತಮ್ಮಾ

ತಾತನೂರಿಗೆ ಬಾರೆಲೆ, ತಮ್ಮಾ,
ಬ್ಯಾಸಿಗೆ ರಜೆ ಬಂದೈತೆ,
ಹೋಗೋಣ ಕುಣ್ಕೊಂಡು

ಇಲ್ಲಿಯ ಪ್ಯಾಟೆಯೊಳಗಿನ ಮನೆ
ನೋಡೋಕೆ ಅರಮನೆ
ನಮ್ಮಂಥ ಮಕ್ಕಳಿಗೆ
ಏಕಾಂತ ಸೆರೆಮನೆ.
ಒಬ್ಬೊಬ್ಬರಿಗೆ ಒಂದೊಂದು ರೂಮು
ಹೆತ್ತವರು ಕೂಡಾ ಹರದಾರಿ ದೂರ
ಒಂಟಿತನವೆನ್ನುವುದು
ಬಲು ದೊಡ್ಡ ಜೋಮು.

ಹಳ್ಳಿಯಲಿ ಹಾಗಲ್ಲ
ಮಾಡಿದ್ದರಾಯ್ತು.
ಗೋಡೆಗಳು ಬೇಕಿಲ್ಲ,
ಇದ್ದ ಗೋಡೆಗೆ ಕೂಡಾ
ಬಾಗಿಲುಗಳಿಲ್ಲ.
ತೆರೆದ ಹೊರ ಬಾಗಿಲಿಗೆ
ಕರೆಗಂಟೆ ಬೇಕಿಲ್ಲ.
ಸರ್ವರಿಗು ಸ್ವಾಗತ.

ಇಲ್ಲಿ ಅಂತಸ್ತಿನಂತರವಿಲ್ಲ
ತೆರೆದ ಅಂಗಳದಲ್ಲಿ
ನೆರೆಯುವರು ಹೈಕಳು

ಕುಂಟೆ ಬಿಲ್ಲೆಯ ಕರೆಗೆ,
ಊಟ, ಆಟಿಕೆ ಮಾತ್ರವೆ ಅಲ್ಲ
ಒಂದು ಮನೆ ಕೆಲಸಕ್ಕೆ



ನೆರೆಯುವುದು ಊರೆಲ್ಲ
ಇಡಿ ಹಳ್ಳಿಯೇ ಒಂದು ಮನೆ ಎಂಬಂತೆ.

ಜಳಕವೆನ್ನುವುದಿಲ್ಲಿ ಕೂಡಿ ಆಡುವ ಆಟ,
ಹೊಳೆಯಲ್ಲಿ ಒಟ್ಟಾಗಿ
ಕೈ ಕಾಲು ಬಡಿಯುವುದು,
ಮುಖಕ್ಕೆ ನೀರೆರಚಿ ನಲಿಯುವುದು
ಎಷ್ಟೊಂದು ಮೋಜು!
ಪ್ಯಾಟೇಲಿ ಒಬ್ಬೊಬ್ಬರೇ ಕದ ಮುಚ್ಕೊಂಡು
ಸುರ್ಕೋ ಬೇಕು ಬ್ಯಾಸರದ ಬಿಸಿ ನೀರು!

ಹೊರಗಲೆದು ಹಣ್ಣನ್ನು ಹೆಕ್ಕಿ
ತಿನ್ನಬಹುದಿಲ್ಲಿ ಮನ ಬಂದಂತೆ.
ಪ್ಯಾಟೇಲಿ ಹಾಗಲ್ಲ,
ಎಂದೋ ಕೊಂಡು ಫ್ರಿಜ್ಜಲ್ಲಿ ತೆಗೆದಿಟ್ಟ
ಸೇಬನ್ನು ಹೊರ ತೆಗೆದು
ಕಲಾತ್ಮಕವಾಗಿ ಕತ್ತರಿಸಿ ಪ್ಲೇಟಲ್ಲಿಟ್ಟು
ನಾಜೂಕಾಗಿ ತಿನ್ನುವೆವು ಒಂದೊಂದು ಹೋಳು,
ಸಹಜವಾಗಿ ತಿನ್ನುವುದೆ ತಪ್ಪೆಂಬಂತೆ !

ಪ್ಯಾಟೆ ನೋಡಲು ಚಂದ, ತಮ್ಮಾ,
ಹಳ್ಳಿ ಬದುಕಲು ಚಂದ.

ಹಾಲಾಡಿ ಮಾರುತಿರಾವ್
೩/೪, ಮ್ಹಾಳಸಾ ನಿವಾಸ, ಅಬ್ಬಿಗೆರೆ ಬಡಾವಣೆ
ಚಿಕ್ಕ ಬಾಣಾವರ ರಸ್ತೆ, ಬೆಂಗಳೂರು - ೫೬೦ ೦೯೦

ಎಷ್ಟೋ ವೇಳೆ ನಮಗೆ ಚೆನ್ನಾಗಿ ಪರಿಚಯವಿರುವ, ದಿನಬಳಕೆಯ ವಸ್ತುವಿಷಯಗಳ ಬಗ್ಗೆ ನಾವು ಗಂಭೀರ ಚಿಂತನೆ ಮಾಡುವುದಿಲ್ಲ. ಉದಾಹರಣೆಗೆ, ಆಲೂಗಡ್ಡೆ ಯಾರಿಗೆ ತಾನೆ ಗೊತ್ತಿಲ್ಲ ? ಆದರೆ, ಅದೊಂದು 'ಮಾಂಸಾಹಾರಿ ಸಸ್ಯ'ವೆಂಬುದನ್ನು ಆಕ್ಸ್‌ಫರ್ಡ್ ಯೂನಿವರ್ಸಿಟಿಯವರು ಪ್ರಕಟಿಸಿರುವ ಒಂದು ಗ್ರಂಥದಲ್ಲಿ ಚಿತ್ರಸಹಿತ ಕೊಟ್ಟಿರುವುದನ್ನು ಓದಿ ತಿಳಿದುಕೊಂಡೆ. ಆಲೂಗಡ್ಡೆಯ ಎಲೆಗಳಲ್ಲಿರುವ ಕೂದಲಿನಂಥ ರಚನೆ ಕೀಟಭಕ್ಷಣೆಗೆ ಕಾರಣವೆಂಬುದನ್ನು ಓದಿ ನನಗೆ ಅಚ್ಚರಿಯಾಯಿತು. ಈ ವಿಚಾರವನ್ನಿಲ್ಲಿ ಏಕೆ ಹೇಳುತ್ತಿದ್ದೇನೆಂದರೆ 'ಸಂವಿಧಾನ'ವನ್ನು ಕುರಿತ ನಮ್ಮ ಗ್ರಹಿಕೆ ಕೂಡ ಇದನ್ನೇ ಹೋಲುತ್ತದೆ. ಸ್ವತಂತ್ರ ಭಾರತ, ಭಾರತೀಯ ಪ್ರಜೆ, ಪೌರ ಹಕ್ಕುಗಳು, ಇವನ್ನು ಕುರಿತು ಹೆಮ್ಮೆಪಡುವ,

*ನಿವೃತ್ತ ನ್ಯಾಯಾಧೀಶರಾದ ಶ್ರೀ. ಎಚ್. ಜಿ. ಬಾಲಕೃಷ್ಣ ಅವರು ಈ ಕುರಿತು ವ್ಯಕ್ತಪಡಿಸಿರುವ ಅಭಿಪ್ರಾಯ ಉಲ್ಲೇಖನಾರ್ಹವಾಗಿದೆ: "ಕಳೆದ ಐವತ್ತು ವರ್ಷಗಳ ಅನುಭವಗಳ ಹಿನ್ನೆಲೆಯಲ್ಲಿ ಹೇಳುವುದಾದರೆ ನಿಜಕ್ಕೂ ಪರಾಮರ್ಶೆ ಆಗಬೇಕಾಗಿರುವುದು ಕಾರ್ಯಾಂಗ ಮತ್ತು ಶಾಸಕಾಂಗದ ಕಾರ್ಯನಿರ್ವಹಣೆಯೇ ಹೊರತು ಸಂವಿಧಾನವಲ್ಲ. ಆದರೆ ಇಂದು ಸಂವಿಧಾನವನ್ನೇ ಆರೋಪಿ ಸ್ಥಾನದಲ್ಲಿ ನಿಲ್ಲಿಸಿ ಅದರ ಪರಾಮರ್ಶೆಗೆ ಹೊರಟಿರುವುದು ನಿಜಕ್ಕೂ ವಿಪರ್ಯಾಸದ ಸಂಗತಿಯಾಗಿದೆ (ಪ್ರಜಾವಾಣಿ ಸಾಪ್ತಾಹಿಕ ಪುರವಣಿ: ೧೩. ೨. ೨೦೦೦). ಇದನ್ನು ಮನದಟ್ಟು ಮಾಡಲು ಶ್ರೀ. ಎಚ್. ಜಿ. ಬಾಲಕೃಷ್ಣ ಅವರು "ಎತ್ತಿಗೆ ಜ್ವರ, ಎಮ್ಮೆಗೆ ಬರೆ' - ಎಂಬ ಗಾದೆಯನ್ನು ಬಳಸಿಕೊಂಡಿದ್ದಾರೆ. ವೇದ ಸುಳ್ಳಾದರೂ ಗಾದೆ ಸುಳ್ಳಾಗದೆಂಬ ಕನ್ನಡ ಜನಪದರ ವಿವೇಕ ಸರಿಯಾಗಿದೆ. ಈ ವೈಪರೀತ್ಯವನ್ನು ಮತ್ತೊಂದು ಗಾದೆಯಲ್ಲೂ ಬಿಂಬಿಸಬಹುದು : ಆಡಳಿತಶಾಹಿಯೆಂಬ ಕೋತಿ ಮೊಸರನ್ನ ತಿಂದು ಸಂವಿಧಾನವೆಂಬ ಮೇಕೆ ಮೂತಿಗೆ ಒರೆಸಿತು. ನಮ್ಮ ದೇಶದಲ್ಲಿ ಅಕ್ಷರಕ್ಕೂ ಆಚರಣೆಗೂ ನಿಕಟಮೈತ್ರಿ, ಮತ್ತು ಸಾಮರಸ್ಯ ಇದೆಯೇ ? ಎಂಬ ಪ್ರಶ್ನೆ ಹಾಕಿಕೊಳ್ಳಬೇಕು.*

# ಸಂವಿಧಾನದ ಬಗ್ಗೆ ಸಂವಿಧಾನ ಶಿಲ್ಪಿಯ ಅಭಿಮತ

ಯಥೇಚ್ಛವಾಗಿ ಮಾತನಾಡುವ ಮಂದಿ 'ಸಂವಿಧಾನ' ಕುರಿತು ಗಂಭೀರ ಚಿಂತನೆ ನಡೆಸುವುದಿಲ್ಲ. ಸುವಿಚಾರ ಸೋಪಾನ ಸರಣಿಯ ಬಗ್ಗೆ ಅಪಾರ ಕಾಳಜಿಯನ್ನು ಹೊಂದಿದ್ದ ಅಂಬೇಡ್ಕರ್ ಅಭಿಪ್ರಾಯವಿದು : "ಮನುಷ್ಯರು ಮರ್ತ್ಯರು. ಅದೇ ರೀತಿ ವಿಚಾರಗಳು ಕೂಡಾ. ಸಸಿಯೊಂದಕ್ಕೆ ನೀರುಣಿಸುವುದು ಎಷ್ಟು ಅಗತ್ಯವೋ ಅದೇ ರೀತಿ ವಿಚಾರವೊಂದಕ್ಕೆ ಪ್ರಚಾರ ನೀಡುವುದೂ ಅಗತ್ಯ. ಹೀಗಲ್ಲದಿದ್ದರೆ ಎರಡೂ ಸಹ ಸೊರಗಿ ಮರಣವನ್ನಪ್ಪುತ್ತವೆ." ಅಕ್ಟೋಬರ್ ಕ್ರಾಂತಿಯ ನೇತಾರನಾದ ಲೆನಿನ್ "ಕ್ರಾಂತಿಕಾರಿ ತತ್ವಜ್ಞಾನದ ಹೊರತು ಕ್ರಾಂತಿಕಾರಿ ಕ್ರಿಯೆ ಇಲ್ಲ" ಎಂದಿರುವ ಮಾತು ವಿಚಾರ ನಿರ್ಮಾಣದ ದೃಷ್ಟಿಯಲ್ಲಿ ಮುಖ್ಯವಾಗಿದ್ದು ಅಂಬೇಡ್ಕರ್ ಅಭಿಪ್ರಾಯವನ್ನು ಸಮರ್ಥಿಸುತ್ತದೆ.

'ಸಂವಿಧಾನ ಪರಾಮರ್ಶೆ' ವಿಚಾರ ಸಂಕಿರಣದಲ್ಲಿ ಭಾಗವಹಿಸಲು ನನ್ನನ್ನಿಲ್ಲಿಗೆ ಬರಮಾಡಿಕೊಂಡ ಶಿವಮೊಗ್ಗದ ವಿಚಾರವಾದಿ ಗೆಳೆಯರ ಬಳಗಕ್ಕೆ 'ಸಂವಿಧಾನದ ಬಗ್ಗೆ ಸಂವಿಧಾನಶಿಲ್ಪಿಯ ಅಭಿಮತ'ವೆಂಬ ವಿಷಯವನ್ನು ಸ್ವತಃ ನಾನೇ ಸೂಚಿಸಿದ್ದೇನೆಂಬುದನ್ನು ತಿಳಿಸಲಿಚ್ಛಿಸುತ್ತೇನೆ. ಇಲ್ಲಿ 'ಸಂವಿಧಾನಶಿಲ್ಪಿ' ಎಂಬ ವಿಶೇಷಣ ಪ್ರಶಸ್ತಿಯನ್ನು ರೂಢಿವಶನಾಗಿ ಬಳಸಿದ್ದೇನೆಯೇ ಹೊರತು 'ಸಂವಿಧಾನ' ರಚನೆಯು ಅಂಬೇಡ್ಕರ್ ಒಬ್ಬರಿಂದಲೇ ಆಗಿದೆಯೆಂಬ ಅಭಿಪ್ರಾಯ ನನ್ನಲಿಲ್ಲ. 'ಸಂವಿಧಾನಶಿಲ್ಪಿ' ಎಂದರೆ, ಅಂಬೇಡ್ಕರ್ ಎಂಬ ಭಾವನೆ ಬರುವಂತೆ ನಮ್ಮ ಶಿಕ್ಷಣ ವ್ಯವಸ್ಥೆ ಮತ್ತು ಮಾಧ್ಯಮಗಳು ಬಿಂಬಿಸುತ್ತಿವೆಯಷ್ಟೆ. ನಮ್ಮ ದೇಶದ ಸಂವಿಧಾನವು ಏಕ ಕರ್ತೃಕವಲ್ಲ. 'ಸಂವಿಧಾನ ರಚನಾ ಸಮಿತಿ'ಯಲ್ಲಿ ಪ್ರಜೆಗಳಿಂದ ಚುನಾಯಿತರಾದ ೨೯೯ ಜನ ಧೀಮಂತ ಸದಸ್ಯರಿದ್ದರೆಂದು ನಾನು ಓದಿ ತಿಳಿದಿದ್ದೇನೆ. ಸಂವಿಧಾನದ ಕರಡು ಸಿದ್ಧಪಡಿಸುವಲ್ಲಿ ಬೆನಗಲ್ ನರಸಿಂಗರಾವ್, ಕೆ.ಟಿ. ಶಾಹ, ಎಚ್. ಸಿ. ಮುಖರ್ಜಿ, ಟಿ.ಡಿ. ಕೃಷ್ಣಮಾಚಾರಿ ಮುಂತಾದ ಮಹನೀಯರು ಅಂಬೇಡ್ಕರ್ ಅವರೊಂದಿಗೆ ಹೆಗಲೆಣೆಯಾಗಿ ಹಗಲಿರುಳು ಶ್ರಮಿಸಿದ್ದಾರೆ. ಆದ್ದರಿಂದ 'ಸಂವಿಧಾನಶಿಲ್ಪಿ' ಎನ್ನುವಾಗ ಇಂಥ ಬಹುಜನ ಸಮುದಾಯದ ಚಿತ್ರವೂ ನಮ್ಮ ಮನಸ್ಸಿನಲ್ಲಿರಬೇಕೇ ವಿನಾ ಅಂಬೇಡ್ಕರ್ ಒಬ್ಬರ ಚಿತ್ರವಲ್ಲ! ಒಟ್ಟಿನಲ್ಲಿ ೨೯೯ ಮಂದಿ ಚುನಾಯಿತ ಸದಸ್ಯರ (ಆ ಚುನಾವಣೆಯ ಮಿತಿಗಳನ್ನೂ ಗಮನದಲ್ಲಿರಿಸಿಕೊಳ್ಳಬೇಕು) ಭಾಗವಹಿಸುವಿಕೆಯಿಂದ ಆರಂಭವಾದ ಸಂವಿಧಾನ ರಚನೆಯ ಕಾರ್ಯವು ಪೂರ್ಣಗೊಂಡು ಜನವರಿ ೨೬ನೇ ದಿನಾಂಕ ೧೯೫೦ರಂದು ಅಧಿಕೃತವಾಗಿ ಅಂಗೀಕಾರಗೊಂಡದ್ದು ಇತಿಹಾಸವಾಗಿದೆ. ಈ ಹಿನ್ನೆಲೆಯಲ್ಲಿ ಗಮನಿಸಬೇಕಾದ ಮತ್ತೊಂದು ಸಂಗತಿಯೆಂದರೆ, ಕೇಂದ್ರದಲ್ಲಿ ಅಧಿಕಾರ ನಡೆಸುತ್ತಿರುವ ಅಲ್ಪಮತದ ಸರ್ಕಾರವೊಂದು 'ಸಂವಿಧಾನ ಪರಾಮರ್ಶೆ'ಗಾಗಿ ಪ್ರಜೆಗಳಿಂದ ಚುನಾಯಿತರಲ್ಲದ ೧೧ ಮಂದಿ ಸದಸ್ಯರಿರುವ ಶ್ರೀ ಎಂ. ಎನ್. ವೆಂಕಟಾಚಲಯ್ಯ ಸಮಿತಿಯನ್ನು ನೇಮಿಸಿರುವುದು ಅಣಕು ನಟನೆಯಾಗಿದ್ದು ಮೂಲಸತ್ವವೇ ಇಲ್ಲವಾಗಿದೆ.

ಈ ವಿಷಯ ಕುರಿತು ಮಾತಾಡಲಿರುವ ನನ್ನನ್ನು ಭೇಟಿಯಾದ ಕೆಲವರು ಹೀಗೆಲ್ಲ ಪ್ರಶ್ನಿಸಿದ್ದಾರೆ: ೧. ನೀವು ಸಂವಿಧಾನ ಪರಾಮರ್ಶೆಯ ಪರವೆ ? ವಿರೋಧವೆ ? ೨. ನೀವು ಸಂವಿಧಾನ ಪರಾಮರ್ಶೆ 'ಸರಿ' ಎನ್ನುತ್ತೀರೋ ? 'ತಪ್ಪು' ಎನ್ನುತ್ತೀರೋ ? ೩. ನಿಮಗೆ ಸಂವಿಧಾನ ಪರಾಮರ್ಶೆ ಬೇಕೆ ? ಬೇಡವೆ ?- ಸುದೀರ್ಘ ಚರ್ಚೆ ಮತ್ತು ಗಂಭೀರವಾದ ಸಹೃದಯ ಸಂವಾದಕ್ಕೆ ಸಿದ್ಧರಿಲ್ಲದ, ನಗರ ಜೀವನ ಶೈಲಿಗೆ ಸಹಜವಾದ ಒಂದು ಬಗೆಯ ಅವಸರದ ಪ್ರವೃತ್ತಿಯ ಇಂಥ ಪ್ರಶ್ನೆಗಳಿಗೆ ಉತ್ತರಿಸಲಾಗದು ! ಕಣ್ಣುಪಟ್ಟಿ ಕಟ್ಟಿಕೊಂಡ ಜಟಕಾ ಕುದುರೆಯ ನೋಟವಿದು. ಇದನ್ನೇ ನಾನು ತೋಪುದೃಷ್ಟಿ ಎಂದು ಕರೆಯುತ್ತೇನೆ. ಏಕರೂಪಾತ್ಮಕವಾದ ತೋಪುಗಳಲ್ಲಿ ಜೀವಸಂಕುಲವೇ ಇರುವುದಿಲ್ಲ. ಆದರೆ, ಬಹುರೂಪಾತ್ಮಕವಾದ ಕಾಡುಗಳು ಜೀವಸಂಕುಲದ ನೆಲಮನೆ. ಹುಲ್ಲಿನಿಂದ ಹಿಡಿದು ಮಹಾವೃಕ್ಷದವರೆಗೆ, ಇರುವೆಯಿಂದ ಹಿಡಿದು ಆನೆಯವರೆಗೆ ಅದೊಂದು ಜೀವಿ ವೈವಿಧ್ಯದ, ವೈರುಧ್ಯ ವಿಕಾಸಗಳ ಸಕಲ ಜೀವರಾಶಿಯ ಸಾಗರವಾಗಿದೆ. ಆದ್ದರಿಂದ ನಾವು ಯಾವುದೇ ವಿಷಯವನ್ನು ಕುರಿತು ಚಿಂತಿಸುವಾಗ ಏಕರೂಪಾತ್ಮಕ ನೆಲೆಗಳನ್ನು ಛಿದ್ರಿಸಬೇಕಾಗುತ್ತದೆ; ಬಹುರೂಪಾತ್ಮಕವಾದ ಕಾಡುದೃಷ್ಟಿಯೊಂದನ್ನು ಪಡೆಯಬೇಕಾಗುತ್ತದೆ.

ನೂರು ಮಾತಿನಲ್ಲಿ ಹೇಳುವುದನ್ನು ಒಂದು ಮಾತಿನಲ್ಲಿ ಹೇಳುವುದೇ ಧೀಮಂತಿಕೆಯೆನಿಸಿಕೊಳ್ಳುತ್ತದೆ. ಈ ದೃಷ್ಟಿಯಿಂದ ಸಾಹಿತ್ಯದಲ್ಲಿ ಉಪಮೆ, ರೂಪಕ, ಪ್ರತಿಮೆ, ಸಂಕೇತಗಳನ್ನು ಬಳಸುವುದುಂಟು. ನಾನು ಕೂಡ ಇದೇ ಮಾರ್ಗ ಹಿಡಿದು 'ಸಂವಿಧಾನ ಮತ್ತು ಆಡಳಿತಶಾಹಿ' ಎಂಬುದನ್ನು ಸರಿಯಾಗಿ ಗ್ರಹಿಸಿ ನಿರೂಪಿಸಲು 'ದೇವರು ಮತ್ತು ಪುರೋಹಿತಶಾಹಿ' ಎಂದು ಹೋಲಿಸಲಿಚ್ಛಿಸುತ್ತೇನೆ. ಪುರೋಹಿತಶಾಹಿಯೆಂದರೆ ಬ್ರಾಹ್ಮಣರಲ್ಲ ; ಎಲ್ಲ ಧರ್ಮಗಳಲ್ಲೂ ಪುರೋಹಿತಶಾಹಿ ವ್ಯವಸ್ಥೆಯೊಂದಿರುತ್ತದೆ ಎಂದು ಕುವೆಂಪು ಸ್ಪಷ್ಟವಾಗಿ ಸಾರಿ ಹೇಳಿದ್ದಾರೆ. ಧಾರ್ಮಿಕ ಸಂಸ್ಥೆಗಳು, ಧಾರ್ಮಿಕ ಮುಖಂಡರು, ಧಾರ್ಮಿಕ ಬರಹಗಳು ಇವು ಪುರೋಹಿತಶಾಹಿಯ ಮೂರು ಮುಖಗಳು. ಅಂತೆಯೇ ಕಾರ್ಯಾಂಗ, ಶಾಸಕಾಂಗ, ನ್ಯಾಯಾಂಗಗಳು ಆಡಳಿತಶಾಹಿಯ ಮೂರು ಮುಖಗಳಾಗಿವೆ. ಪುರೋಹಿತಶಾಹಿಯ ವಿಜೃಂಭಣೆಯು ದೇವರನ್ನು ಮುಚ್ಚಿಹಾಕಿರುವಂತೆಯೇ ಆಡಳಿತಶಾಹಿಯ ಅಟ್ಟಹಾಸ ಸಂವಿಧಾನವನ್ನು ಮೂಲೆಗೆ ತಳ್ಳಿರುವುದೇ ಸ್ವತಂತ್ರಭಾರತದ ಇತಿಹಾಸವಾಗಿದೆ. ಪುರೋಹಿತಶಾಹಿ ಮತ್ತು ಆಡಳಿತಶಾಹಿಯ ಆಚರಣೆಗಳ ಕರ್ಮಕಾಂಡಕ್ಕೆ ಸಿಲುಕಿ ಗುಡಿಯಲ್ಲಿ ದೇವರೂ ಇಲ್ಲ, ದೇಶದಲ್ಲಿ ಸಂವಿಧಾನವೂ ಇಲ್ಲ ಎಂಬ ಪರಿಸ್ಥಿತಿಯು ನಿರ್ಮಾಣವಾಗಿದೆ. ಮನುಧರ್ಮಶಾಸ್ತ್ರ ಮತ್ತು ವರ್ಣಾಶ್ರಮ ವ್ಯವಸ್ಥೆಗಳಿಗಿರುವ ನಖ-ಮಾಂಸ ಸಂಬಂಧವನ್ನು ಗಮನಿಸಿದರೆ, ಅಕ್ಷರ ಮತ್ತು ಆಚರಣೆಗಳ ನಡುವಣ ಸಾಮರಸ್ಯಕ್ಕೆ ಇದೊಂದು ಏಕಮಾತ್ರ ನಿದರ್ಶನವೆಂಬಂತೆ ತೋರುತ್ತದೆ. ಉಳಿದಂತೆ ಅಕ್ಷರಕ್ಕೂ ಆಚರಣೆಗೂ ನಡುವೆ ಬಹು ದೊಡ್ಡ ವೈರುಧ್ಯವನ್ನಿಲ್ಲಿ ಗಮನಿಸಬಹುದು. ಅಕ್ಷರಗಳಿಗೆ ಅನುಗುಣವಾಗಿ ಆಚರಣೆ ಇರಲಾರದು !

ಹನ್ನೆರಡನೆ ಶತಮಾನದ ವಚನಗಳು ಹೇಳುವುದಕ್ಕೂ ಇಂದಿನ ವೀರಶೈವರ ಆಚರಣೆಗಳಿಗೂ ತಂಬಾ ವ್ಯತ್ಯಾಸಗಳಿವೆ. ಹಾಗೆಯೇ ಸಂವಿಧಾನವು ಹೇಳುವುದಕ್ಕೂ ಅದರ ಅನುಷ್ಠಾನಕ್ಕೂ ಅಜಗಜಾಂತರ ವ್ಯತ್ಯಾಸಗಳಿವೆ. ಅಕ್ಷರನಿಷ್ಠೆ 'ಲಿಖಿತ' ಮಾತ್ರವಾಗಿಬಿಡುವ ಅಪಾಯವನ್ನು ಮನಗಂಡೇ ಬ್ರಿಟನ್ ಸಂವಿಧಾನವನ್ನು 'ಲಿಖಿತ'ಗೊಳಿಸದೆ (ಅಂದರೆ, 'ನುಡಿ'ಗಿಂತಲೂ 'ನಡೆ'ಗೆ ಮನ್ನಣೆ ಕೊಟ್ಟು)

ಎ. ಚಂದ್ರಶೇಖರ ನಂಗಲಿ

ಪ್ರಜಾಪ್ರಭುತ್ವದ ಮೌಲ್ಯಗಳನ್ನುಳಿಸಿಕೊಳ್ಳಲು ಇಚ್ಛಿಸಿದೆ. ಇದಕ್ಕೆ ವಿರುದ್ಧವಾಗಿ ೨೮೦ ಪುಟಗಳಲ್ಲಿ ಮುದ್ರಿತವಾಗಿರುವ ನಮ್ಮ ಸಂವಿಧಾನವು 'ಲಿಖಿತ'ಮಾತ್ರವಾಗುಳಿದು ಪ್ರಜಾಪ್ರಭುತ್ವದ ಮೌಲ್ಯಗಳನ್ನೆಲ್ಲ ಗಾಳಿಗೆ ತೂರಿದೆ. ಇಂಥ ಅಪಾಯವನ್ನು ಮುಂಗಾಣ್ಕೆಯಿಂದ ಮೊದಲೇ ಮನಗಂಡಿದ್ದ ಅಂಬೇಡ್ಕರ್, ''ಈ ಸಂವಿಧಾನ ಸರಿಯಾಗಿ ಜಾರಿಯಾಗದಿದ್ದರೆ ಸಂವಿಧಾನವನ್ನು ದೂರಬೇಡಿ; ಸಂವಿಧಾನವನ್ನು ಜಾರಿಗೊಳಿಸುವ ದಗಾಕೋರರನ್ನು (ರ್‍ಯಾಸ್ಕಲ್) ದೂರಿ'' ಎಂದು ಹೇಳಿಬಿಟ್ಟಿದ್ದಾರೆ.

'ಸರ್ಕಾರಿ ಸಮಾಜವಾದ'ವನ್ನು ಬಲವಾಗಿ ಪ್ರತಿಪಾದಿಸುತ್ತಿದ್ದ ಅಂಬೇಡ್ಕರ್ ಭಾರತದ ಸಂದರ್ಭದಲ್ಲಿ ಪ್ರಜಾಪ್ರಭುತ್ವವು ಧಾವಿಸುತ್ತಾ ತಲುಪುವ ತಪ್ಪುನಡೆಗಳನ್ನು ಸರಿಯಾಗಿಯೇ ತರ್ಕಿಸಿ ನಿರೂಪಿಸಿದ್ದಾರೆ: ''ಸಂಸದೀಯ ಪ್ರಜಾಸತ್ತೆಯಲ್ಲಿ 'ಸರ್ಕಾರಿ ಸಮಾಜವಾದ' ಖಾಯಂ ಆಗಿ ಇರಲು ಸಾಧ್ಯವಿಲ್ಲ. ಈ ವ್ಯವಸ್ಥೆಯಲ್ಲಿ - ಶಾಸಕಾಂಗ, ರಾಜ್ಯಾಂಗ- ಬಹುಮತವಿದ್ದವರ ನೀತಿಗಳೇ ಬಹುಮತದ ಸರ್ಕಾರದ ನೀತಿಯಾಗುತ್ತವೆ. ಒಮ್ಮೆ ಚುನಾಯಿತರಾದವರಿಗೆ 'ಸರ್ಕಾರಿ ಸಮಾಜವಾದ'ದಲ್ಲಿ ನಂಬಿಕೆಯಿದ್ದು ಅನಂತರ ಸರ್ಕಾರ ರಚಿಸಿದವರು ಇದಕ್ಕೆ ವಿರುದ್ಧವಾಗಬಹುದು. ಆದ್ದರಿಂದ, 'ಸರ್ಕಾರಿ ಸಮಾಜವಾದ' ಶಾಶ್ವತವಾಗಿರಲು ಅದು ಸಂವಿಧಾನದಲ್ಲಿ ಮೂಲಭೂತ ಕಾನೂನು ಆಗಿರಬೇಕು ಮತ್ತು ಈ ನೀತಿಯನ್ನು ಬದಲಾಯಿಸಲು, ಕೈ ಬಿಡಲು ಯಾರಿಗೂ ಅವಕಾಶವಿರಕೂಡದು''. ಆದರೆ, ಇಂದಿನ ಪರಿಸ್ಥಿತಿಯಲ್ಲಿ ಸರ್ಕಾರಿ ಸ್ವಾಮ್ಯಕ್ಕೆ ಸೇರಿದ ಕ್ಷೇತ್ರಗಳೆಲ್ಲ ಒಂದೊಂದಾಗಿ ಖಾಸಗಿ ಕ್ಷೇತ್ರಕ್ಕೆ ಹಸ್ತಾಂತರವಾಗುತ್ತಿರುವ ವಿಷಮ ಸನ್ನಿವೇಶದಲ್ಲಿರುವ ನಮಗೆ ಅಂಬೇಡ್ಕರ್ ಪ್ರತಿಪಾದಿಸಿದ 'ಸರ್ಕಾರಿ ಸಮಾಜವಾದ'ದ ಪ್ರಸ್ತುತತೆ ಸ್ವಯಂವೇದ್ಯವಾಗಿದೆ. ಇಂದು ಭಾರತದ ಪ್ರಮುಖ ನಗರಗಳಲ್ಲಿ ಜರಗುತ್ತಿರುವ 'ವಿಶ್ವ ಬಂಡವಾಳ ಹೂಡಿಕೆದಾರರ ಸಮ್ಮೇಳನ'ವು ವಾಸ್ತವವಾಗಿ ಜಾಗತಿಕ ಮಟ್ಟದಲ್ಲಿ ಖಾಸಗೀಕರಣಕ್ಕೆ ಕೊಟ್ಟಿರುವ ಉದಾರದ ಕರೆಯೋಲೆಯೇ ಸೈ! ಇಂಥ ಮೂಲಭೂತ ಸಂಗತಿಗಳ ಪರಾಮರ್ಶೆ ನಡೆಸದೆ, ಕೇಂದ್ರ-ರಾಜ್ಯ ಸಂಬಂಧಗಳ ೩೫೬ನೇ ವಿಧಿ, ಸಂವಿಧಾನದ ಮೂಲಸ್ವರೂಪ ಕುರಿತ ೩೬೮ನೇ ವಿಧಿ, ಕಾಶ್ಮೀರವನ್ನು ಲಕ್ಷಿಸಿರುವ ೩೭೦ನೇ ವಿಧಿಗಳ ಹೆಸರಿನಲ್ಲಿ 'ಸಂವಿಧಾನ ಪರಾಮರ್ಶೆ'ಗೆ ಕೈಯಿಕ್ಕಿರುವ ಭಾ.ಜ.ಪ.ದ ಪರಿ ಇಟ್ಟಿಗೆ ಮಂತ್ರ, ರಾಮ ಮಂತ್ರ, ಮಂದಿರ ಮಂತ್ರ, ಬಾಂಬು ಮಂತ್ರ, ಯುದ್ಧ ಮಂತ್ರಗಳ ನಂತರದ ಒಂದು ಗಿಮಿಕ್ ಅಷ್ಟೇ! ಈ ಸಂವಿಧಾನ ಮಂತ್ರದ ಆಟ ನಡೆಯುವುದಿಲ್ಲವೆಂಬುದು ಸ್ವತಃ ಭಾ.ಜ.ಪ.ಕ್ಕೆ ಚೆನ್ನಾಗಿ ಗೊತ್ತಿದೆ. ಗುಳ್ಳೆ ನರಿ ಎಟುಕದ ದ್ರಾಕ್ಷಿಗಾಗಿ ರಾತ್ರಿಯೆಲ್ಲ ಎಗರಾಡಿ ಬೆಳಗಾದೊಡನೆ ಹುಳಿ ಎಂದು ಜರಿದು ನಿರ್ಗಮಿಸಿದಂತೆ, ಭಾ.ಜ.ಪ.ವೂ ನಿರ್ಗಮಿಸಬೇಕಾದ್ದು ಅನಿವಾರ್ಯವಾಗಿದೆ.

'ಮನುಧರ್ಮಶಾಸ್ತ್ರ'ವನ್ನು ಸಾರ್ವಜನಿಕವಾಗಿ ಸುಟ್ಟುಹಾಕಿದ ಅಂಬೇಡ್ಕರ್ 'ಸಂವಿಧಾನ'ದ ಬಗ್ಗೆ ಹೇಳುವ ಈ ಮಾತುಗಳನ್ನು ಕೇಳಿ : ''ಸ್ವತಂತ್ರಭಾರತದ ಸಂವಿಧಾನ ಶಿಲ್ಪಿಯೆಂದು ಜನ ನನ್ನನ್ನು ಕರೆಯುತ್ತಾರೆ. ಅದಕ್ಕೆ ನನ್ನ ಉತ್ತರವಿದು : ನಾನೊಂದು ಬಾಡಿಗೆ ಕುದುರೆಯಾಗಿದ್ದೆ. ನನಗೆ ಇಷ್ಟವಿಲ್ಲದಿದ್ದರೂ ನಾನು ಬೇರೆಯವರ ಮರ್ಜಿಯಂತೆ ಅದೆಲ್ಲಾ ಮಾಡಿದೆ. ಅದನ್ನೂ ಸುಟ್ಟು ಬೂದಿ ಮಾಡುತ್ತೇನೆ ಎಂದು ಹೇಳಲು ನಾನು ಸಿದ್ಧನಾಗಿದ್ದೇನೆ''. ಸಂವಿಧಾನವನ್ನು 'ಪವಿತ್ರಗ್ರಂಥ'ದಂತೆ ಅಂಬೇಡ್ಕರ್ ಪರಿಗಣಿಸಿಲ್ಲ. ಅಂಬೇಡ್ಕರ್ ಚಿಂತನೆಗಳನ್ನು ಸಮರ್ಪಕವಾಗಿ ವ್ಯಾಖ್ಯಾನ ಮಾಡಿರುವ ಡಾ॥ ಒಡೆಯರ್ ಡಿ. ಹೆಗ್ಗಡೆ ಅವರು, ಅಂಬೇಡ್ಕರ್ ಪ್ರತಿಪಾದಿಸಿರುವ ಎರಡು ಸಂವಿಧಾನಗಳತ್ತ ಜನತೆಯ ಮನ ಸೆಳೆದಿರುವುದು ಬಹು ಮುಖ್ಯವೆನಿಸುತ್ತದೆ: ''ಡಾ॥ ಅಂಬೇಡ್ಕರ್ ವಾಸ್ತವವಾಗಿ ಭಾರತಕ್ಕೆ ಎರಡು ಬಗೆಯ ಸಂವಿಧಾನ ಕರಡು ನೀಡಿದ್ದಾರೆ. ಮೊದಲನೆಯದು, ಅಂಬೇಡ್ಕರ್ ವೈಯಕ್ತಿಕವಾಗಿ ೧೯೪೭ರಲ್ಲಿ **ರಾಜ್ಯಗಳು ಮತ್ತು ಅಲ್ಪಸಂಖ್ಯಾತರು** ಎಂಬ ಗ್ರಂಥದಲ್ಲಿ ಪ್ರತಿಪಾದಿಸಿದ ಸಂವಿಧಾನ. ಎರಡನೆಯದು ಸ್ವತಂತ್ರ ಭಾರತದ ಸಂವಿಧಾನ ಸಭೆಯ ಸದಸ್ಯರಾಗಿ, ಸಂವಿಧಾನ ನಿರೂಪಣಾ ಸಮಿತಿಯ ಅಧ್ಯಕ್ಷರಾಗಿ ರೂಪಿಸಿ ರಾಷ್ಟ್ರವು ಜನವರಿ ೨೬, ೧೯೫೦ರಂದು ಅಂಗೀಕರಿಸಿದ ಸಂವಿಧಾನ.''

'ಸರ್ಕಾರಿ ಸಮಾಜವಾದ'ವನ್ನು ಕುರಿತ ಅಂಬೇಡ್ಕರ್ ಅವರ ಚಿಂತನೆಗಳು, ಕಾರ್ಯಸೂಚಿಗಳು ಮೇಲೆ ಪ್ರಸ್ತಾಪಿಸಿದ ಗ್ರಂಥದಲ್ಲಿ ಸವಿವರವಾಗಿವೆ. (೧) ಕೃಷಿಭೂಮಿಯು ಸರ್ಕಾರಿ ಸ್ವಾಮ್ಯಕ್ಕೆ ಒಳಪಟ್ಟಿರಬೇಕು ಮತ್ತು ಸಾಮೂಹಿಕ ಬೇಸಾಯ ಪದ್ಧತಿಯನ್ನು ಅಳವಡಿಸಿಕೊಳ್ಳಬೇಕು. (೨) ಜೀವವಿಮೆ, ಪ್ರಮುಖ- ಅತ್ಯಾವಶ್ಯಕ ಕೈಗಾರಿಕೆಗಳು ಸರ್ಕಾರದ ಹತೋಟಿಯಲ್ಲಿರಬೇಕು. ೧೯೪೭ರಲ್ಲಿ ಪ್ರಕಟವಾಗಿರುವ ಪ್ರಸ್ತಾಪಿತ 'ಗ್ರಂಥಸಂವಿಧಾನ'ದಲ್ಲಿರುವ ಇಂಥ ನಿರ್ದಿಷ್ಟ ಕಾರ್ಯಸೂಚಿಗಳ ವಿವರಗಳನ್ನು ೧೯೫೦ರ 'ಅಂಗೀಕೃತ ಸಂವಿಧಾನ'ದಲ್ಲಿ ಕಾಣಲಾರೆವು. ಬದಲಿಗೆ, ಭಾರತೀಯ ಪ್ರಜೆಗಳಿಗೆ ಸಾಮಾಜಿಕ-ಆರ್ಥಿಕ ನ್ಯಾಯದ ಅಕ್ಷರಸ್ಥ ಪ್ರತಿಪಾದನೆಯಿದೆ. ನಿರ್ದಿಷ್ಟ ಕಾರ್ಯಸೂಚಿಗಳ ಬದಲಾಗಿ ನೆಪಮಾತ್ರಕ್ಕೆ ಕಾರ್ಯಕ್ರಮವೊಂದನ್ನು ಹೆಸರಿಸುವ ಈ ಸಂವಿಧಾನದ ರಾಜಕೀಯಕ್ಕೆ ಯಾರನ್ನು ದೂರಬೇಕು ? ಕೃಷಿಭೂಮಿಯನ್ನು ಖಾಸಗಿ ಆಸ್ತಿಯನ್ನಾಗಿ ಗುರುತಿಸದೆ ಬಹುಜನಸಮುದಾಯದ ಹಿತಕ್ಕೆ ಬದ್ಧವಾಗಿಸುವ ಅಂಬೇಡ್ಕರ್ ದೃಷ್ಟಿಯನ್ನಿಲ್ಲಿ ವಿಶೇಷವಾಗಿ ಗಮನಿಸಬೇಕು.

'ಸಂವಿಧಾನ ಪರಾಮರ್ಶೆ' - ಕುರಿತು ಇಂದು ದೇಶದ ಎಲ್ಲೆಡೆ ಚರ್ಚೆಗಳು, ವಾದ-ವಿವಾದಗಳು, ವಿಚಾರ ಸಂಕಿರಣಗಳು ನಡೆಯುತ್ತಿವೆ. ನಾಡಿನ ಧೀಮಂತರು, ನ್ಯಾಯಮೂರ್ತಿಗಳು, ಸಾಹಿತಿಗಳು, ರಾಜಕಾರಣಿಗಳು ಯಥಾ ಸ್ವ-ಇಚ್ಛೆಯೆಂಬಂತೆ ಅಭಿಪ್ರಾಯ ಮಂಡನೆ ಮಾಡುತ್ತಿದ್ದಾರೆ. ಅಂಬೇಡ್ಕರ್ ಕಾಲದಲ್ಲಿ ಮುಖ್ಯನೆಲೆಗೆ ಬಾರದ ನೈಸರ್ಗಿಕ ಸಂಪನ್ಮೂಲಗಳು ಮತ್ತು ನಿಸರ್ಗ ಸಂರಕ್ಷಣೆಯ ಆಶಯಗಳು, ಪರಿಸರಮಾಲಿನ್ಯ ಮತ್ತು ತ್ಯಾಜ್ಯ ವಸ್ತುಗಳ ಸಮರ್ಪಕ ನಿರ್ವಹಣೆ ಇದೀಗ ಮುನ್ನೆಲೆಗೆ ಬರುತ್ತಿವೆ. ಬರಿದಾಗುತ್ತಿರುವ ನೈಸರ್ಗಿಕ ಸಂಪನ್ಮೂಲಗಳ ವಿಷಯದಲ್ಲಿ ಪ್ರಜೆಗಳ ಒಲವು-ನಿಲುವುಗಳೇನು ? ವಿಷಪೂರಿತವಾಗುತ್ತಿರುವ ನೆಲ-ನೀರು-ಗಾಳಿಗಳನ್ನೇ ಅವಲಂಬಿಸಿ ಪ್ರಜೆಗಳಿರಬೇಕೇ ? ಪೌರಹಕ್ಕುಗಳಾವುವು ? ಜನತೆ ಮೂಕ ಪ್ರೇಕ್ಷಕರಾಗಿರಬೇಕೇ ? ನಿಸರ್ಗ ಸಂಪತ್ತಿನ ಒಡೆಯರಾರು ? ಸರ್ಕಾರವೆ ? ಜನತೆಯೇ ? - ಇಂಥ ಪ್ರಶ್ನೆಗಳಿಗೆ ಉತ್ತರಿಸಿಕೊಳ್ಳಬೇಕಾದ ಸಂದಿಗ್ಧ ಪರಿಸ್ಥಿತಿ ನಮ್ಮೆದುರಿಗಿದೆ.

ನಮ್ಮ ದೇಶದ ರಾಷ್ಟ್ರೀಯ ಮಹಾಕಾವ್ಯಗಳೆನಿಸಿಕೊಂಡ ರಾಮಾಯಣ, ಮಹಾಭಾರತಗಳು ಕೂಡ ಸಂವಿಧಾನವೇ ಆಗಿವೆ. ಇದರ ಪ್ರಕಾರ ಪರ್ವತಾರಣ್ಯಗಳು ರಾಜಾಧಿಪತ್ಯಕ್ಕೆ ಒಳಪಟ್ಟಿರಲಿಲ್ಲ. ರಾಜ್ಯ ಕಳೆಕೊಂಡವರು, ರಾಜ್ಯಭ್ರಷ್ಟರು ಕಾಡುಗಳಿಗೆ ಸೇರಿಕೊಳ್ಳುತ್ತಿದ್ದರು. ಈ ಮಹಾಕಾವ್ಯಗಳ ಪ್ರಕಾರ ವನಸೀಮೆಗಳು, ಪರ್ವತಾರಣ್ಯಗಳು ಬೃಹತ್ ಜನಸಮುದಾಯದ ಭಾಗವಾಗಿದ್ದವು. ಇದೇ ಸಂಗತಿಯನ್ನೇ ಕುವೆಂಪು ಅವರು 'ಬೆರಳ್ಗೆ ಕೊರಳ್' ನಾಟಕದಲ್ಲಿ ಅರ್ಜುನ-ಏಕಲವ್ಯರ ಸಂಘರ್ಷದಲ್ಲಿ ಬಿಂಬಿಸಿದ್ದಾರೆ. ರಾಜಾಧಿಪತ್ಯಕ್ಕೆ ಹೊರತಾದ ವನ್ಯಸಂಸ್ಕೃತಿಯ ಪ್ರತಿನಿಧಿಯಾಗಿ ಏಕಲವ್ಯ ಮಾತನಾಡುತ್ತಾನೆ. ಆದರೆ, ಭಾರತವು ವಸಾಹತು ಆಳ್ವಿಕೆಗೊಳಪಟ್ಟಾಗ ಬ್ರಿಟಿಷರ ದೃಷ್ಟಿ-ಧೋರಣೆಗಳಿಗನುಗುಣವಾಗಿ ನಿಸರ್ಗಸಂಪತ್ತು ಆಳುವವರ ಖಜಾನೆಯಾಯ್ತು. ಬ್ರಿಟಿಷರ ಸ್ವಾರ್ಥಸಾಧನೆ ಮತ್ತು ಲಾಭದೃಷ್ಟಿಗಳೇ ಸ್ವತಂತ್ರಭಾರತಕ್ಕೂ ತಳಹದಿಯಾಗಿ ನಿಸರ್ಗಸಂಪತ್ತಿನ ಲೂಟಿಯಾಗುತ್ತಿರುವುದು ಕಣ್ಮುಂದಿನ ಸತ್ಯವಾಗಿದೆ. ಸ್ವತಂತ್ರ ಭಾರತದಲ್ಲಿ ನಮ್ಮ ಅರಣ್ಯಸೀಮೆಗಳು ಸ್ವದೇಶಿ ಬಂಡವಾಳಶಾಹಿ ಮತ್ತು ವಿದೇಶಿ ಬಂಡವಾಳಶಾಹಿಗೆ ಮುಕ್ತದ್ವಾರವಾಗಿವೆ. ಇದಕ್ಕೆ ಸರ್ಕಾರದ ಪರವಾನಗಿಯೇ ಇದೆ. ಜನ ಸಮುದಾಯ ಮೂಕ ಪ್ರೇಕ್ಷಕರಾಗಿದ್ದಾರೆ. ೧೯೭೬ರಲ್ಲಿ ಸಂವಿಧಾನಕ್ಕೆ ತಂದ ತಿದ್ದುಪಡಿಯಲ್ಲಿ ಭಾರತೀಯ ಪೌರನ ಹಕ್ಕುಗಳ ಬಗ್ಗೆ ೫೫(ಜ) ಹೀಗೆ ಹೇಳುತ್ತದೆ:

''ಪ್ರತಿ ಭಾರತೀಯ ಪೌರನೂ ವನಗಳು, ಸರೋವರಗಳು, ಮತ್ತು ವನ್ಯಜೀವಿಗಳೂ ಸೇರಿದಂತೆ ನೈಸರ್ಗಿಕ ಪರಿಸರದ ರಕ್ಷಣೆಯಲ್ಲಿ ಹಾಗೂ ಇದರ ಅಭಿವೃದ್ಧಿಯಲ್ಲಿ ಕಾಳಜಿಯನ್ನು ವಹಿಸತಕ್ಕದ್ದು. ಜೀವ ಕಾರುಣ್ಯವು ಆತನ / ಆಕೆಯ ಬದುಕಿನ ಮಾರ್ಗದರ್ಶಕ ಸೂತ್ರವಾಗಿರತಕ್ಕದ್ದು.''

ಭಾರತೀಯ ಸಂವಿಧಾನವು ಆದೇಶಿಸಿದ ಪೌರರ ಆದ್ಯ ಕರ್ತವ್ಯವು 'ಲಿಖಿತ' ಮಾತ್ರವಾಗುಳಿದಿರುವುದು ದುರಂತವಲ್ಲವೆ ? ಒಂದಲ್ಲ ಒಂದು ಬಗೆಯ ಗಣಿಗಾರಿಕೆ ಮತ್ತು ಮನುಷ್ಯ ಹಸ್ತಕ್ಷೇಪದಿಂದ ಮುಕ್ತವಾದ ಒಂದೇ ಒಂದು ಅಭಯಾರಣ್ಯ, ವನ್ಯಧಾಮ, ಮೀಸಲು ಅರಣ್ಯ ಭಾರತದಲ್ಲಿಂದು ಇಲ್ಲವೇ ಇಲ್ಲ. ಇದಕ್ಕೆ ನಿದರ್ಶನವಾಗಿ ಪಶ್ಚಿಮಘಟ್ಟಗಳಿಗೆ ಸೇರಿದ ಕುದುರೆಮುಖ ಗಿರಿಶ್ರೇಣಿಯನ್ನಿಲ್ಲಿ ಗಮನಿಸಬಹುದು. ಇಲ್ಲಿರುವ ವೈರುಧ್ಯಗಳನ್ನು ಗಮನಿಸಿ :

೧. ಈ ಗಿರಿಶ್ರೇಣಿಯ ವ್ಯಾಪ್ತಿಯಲ್ಲಿ ಜೇನು ಕುರುಬರು, ಮಲೆ ಕುಡಿಯರು ವಾಸವಾಗಿದ್ದು ಇವರ ಸಹಜ ಬದುಕಿನ ಗತಿಗೆ ಸಂಚಕಾರವುಂಟಾಗಿದೆ.

೨. ಕುದುರೆಮುಖ ಕಬ್ಬಿಣ ಅದಿರು ಕಂಪನಿ ಕೆ.ಐ.ಓ.ಸಿ.ಎಲ್. ನ ಗಣಿಗಾರಿಕೆ ನಿರಂತರವಾಗಿ ಹರಡುತ್ತಿದೆ.

೩. ಈ ಗಿರಿಶ್ರೇಣಿಯ 'ಜೀವವೈವಿಧ್ಯ' ಕಾಡುಗಳನ್ನು ಗಮನಿಸಿ ಸರ್ಕಾರವು 'ಕುದುರೆ ಮುಖ ರಾಷ್ಟ್ರೀಯ ಉದ್ಯಾನವನ'ದ ಪ್ರಸ್ತಾಪನೆ ಮಾಡಿ, ಸಂರಕ್ಷಣೆಯ ಪಥಕ ರೂಪಿಸುತ್ತಿದೆ.

೪. ಕೆ.ಐ.ಓ.ಸಿ.ಎಲ್. ನ ಕಾರ್ಯಾಚರಣೆಯಿಂದಾಗಿ ನೆಲ್ಲಿಬೀಡು, ಗಂಗಡಿಕಲ್ಲು ಪ್ರದೇಶದ ಕಾಡುಗಳಿಗೆ ಸಂಚಕಾರ ಉಂಟಾಗುತ್ತಿದೆ. ಈ ಪ್ರದೇಶದ ಹತ್ತಕ್ಕೂ ಮೇಲ್ಪಟ್ಟ ತೊರೆಗಳು ತುಂಗಾಮೂಲ ಮತ್ತು ಭದ್ರಾಮೂಲಕ್ಕೆ ಸೇರಿದ್ದು ಬೋಳುಗುಡ್ಡಗಳ ಅಗೆತದಿಂದಾಗಿ ಪಾತ್ರಹೀನವಾಗಿ ಕಣ್ಮರೆಯಾಗಿವೆ. ಈಗ ಉಳಿದಿರುವುದು ನಾಲ್ಕು ತೊರೆಗಳು ಮಾತ್ರವೆಂದು ಈ ವಿಷಯದ ಪರಿಸರ ತಜ್ಞ ಅ. ನ. ಯಲ್ಲಪ್ಪ ರೆಡ್ಡಿ ಹೇಳಿದ್ದಾರೆ.

(ಮುಂದಿನ ಪುಟಕ್ಕೆ)

ಶ್ರೀ ಡಿ. ಎನ್. ಶಂಕರ ಭಟ್ಟರ ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ ಇತ್ತೀಚೆಗೆ ಬಂದಿರುವ ವ್ಯಾಕರಣ ವಿಚಾರದ ಅತ್ಯುತ್ತಮ ಪುಸ್ತಕ. ವ್ಯಾಕರಣದ ಬಗೆಗಿನ ಸ್ವೀಕೃತ ತಪ್ಪು ನಂಬಿಕೆಗಳು, ಅಪಬಳಕೆಗಳನ್ನು ಒಡೆದು ಹಾಕುವ ಸಂಪ್ರದಾಯ ಭಂಜಕ ಪುಸ್ತಕ. ಇದು ಕೇವಲ ಒಂದು ತಿಳುವಳಿಕೆಯನ್ನು ನೀಡುವ ಪುಸ್ತಕವಲ್ಲ. ತಿಳುವಳಿಕೆಯನ್ನು ವಿಸ್ತರಿಸಿಕೊಳ್ಳಲು ನಮ್ಮನ್ನು ತೊಡಗಿಸುವ – ಹಾಗೇ ತೊಡಗಿಸಿಕೊಳ್ಳುವ ಅಗತ್ಯ ನಮ್ಮೆಲ್ಲರಿಗೂ ಇದೆ ಎಂಬುದನ್ನು ವಿವರಿಸುವ ಪುಸ್ತಕ.

ಶಂಕರ ಭಟ್ಟರೇ ಹೇಳುವ ಹಾಗೆ ''ಈ ಪುಸ್ತಕಕ್ಕೆ ಎರಡು ಮುಖ್ಯವಾದ ಉದ್ದೇಶಗಳಿವೆ. ಪ್ರೌಢಶಾಲೆಗಳಲ್ಲಿ ವಿದ್ಯಾರ್ಥಿಗಳಿಗೆ ಕನ್ನಡ ವ್ಯಾಕರಣವನ್ನು ಕಲಿಸುವುದಿದ್ದಲ್ಲಿ ಎಂತಹ ವ್ಯಾಕರಣವನ್ನು ಕಲಿಸಬೇಕು ಎಂಬುದನ್ನು ಸೂಚಿಸುವುದು ಒಂದು ಉದ್ದೇಶ. ವಿಶ್ವವಿದ್ಯಾಲಯಗಳಲ್ಲಿ ಕನ್ನಡ ವ್ಯಾಕರಣದ ಮೇಲೆ ಸಂಶೋಧನೆ ನಡೆಸುವವರು ಯಾವ ಮಾರ್ಗದಲ್ಲಿ ಹೋದರೆ ಸಫಲರಾಗಬಲ್ಲರು ಎಂಬುದನ್ನು ತಿಳಿಸುವುದು ಎರಡನೇ ಉದ್ದೇಶ.''

ಈ ಎರಡು ಉದ್ದೇಶಗಳ ಪೂರೈಕೆಗೆ ಪೂರಕವಾಗಿ ಶಂಕರ ಭಟ್ಟರು ಕನ್ನಡ ಮತ್ತು ಸಂಸ್ಕೃತ ವ್ಯಾಕರಣಗಳ ನಡುವಿನ ವ್ಯತ್ಯಾಸವನ್ನು ವಿವರವಾಗಿ, ಸೋದಾಹರಣವಾಗಿ ತಿಳಿಸುತ್ತಾರೆ. ಹಾಗೆ ತಿಳಿಸುವ ಮೂಲಕ ಕನ್ನಡಕ್ಕೆ ಸಂಸ್ಕೃತದಿಂದ ಭಿನ್ನವಾದ ಕನ್ನಡದ್ದೇ ವ್ಯಾಕರಣ ಇದೆಯೆಂಬುದನ್ನು ವಿವರಿಸುತ್ತಾರೆ. ನಮ್ಮ ಶಾಲೆಗಳಲ್ಲಿ ನಾವಿಂದು ತಪ್ಪು ವ್ಯಾಕರಣವನ್ನು ಕಲಿಸುತ್ತಿದ್ದೇವೆ; ಕನ್ನಡದ್ದಲ್ಲದ ಸಂಸ್ಕೃತ ವ್ಯಾಕರಣವನ್ನು ಕಲಿಸುತ್ತಿದ್ದೇವೆ ಎಂಬುದನ್ನು ಸಮರ್ಥವಾಗಿ ತೋರಿಸಿಕೊಟ್ಟಿದ್ದಾರೆ. ಹಾಗೇ ಹಳಗನ್ನಡ ಮತ್ತು ಹೊಸಗನ್ನಡ ವ್ಯಾಕರಣಗಳ ನಡುವೆ ಕೂಡ ವ್ಯತ್ಯಾಸವಿರುವುದನ್ನು ವಿವರಿಸಿದ್ದಾರೆ.

ಸಂಸ್ಕೃತ ಕನ್ನಡ ವ್ಯಾಕರಣಗಳ ನಡುವಿನ ಸಂಘರ್ಷದ ಕುರಿತಂತೆ ನಾವು ಬಾಯಿಮಾತಿನಲ್ಲಿ ಬಹಳಷ್ಟು ವರ್ಷಗಳಿಂದ ಚರ್ಚಿಸುತ್ತಿದ್ದ ಹಲವು ವಿಚಾರಗಳಿಗೆ ಇಲ್ಲಿ ಒಂದು ಸೈದ್ಧಾಂತಿಕ ನೆಲೆಗಟ್ಟು ದೊರಕಿದೆ. ಈ ಪುಸ್ತಕ ಹೊಸಗನ್ನಡ ವ್ಯಾಕರಣಕ್ಕೊಂದು ಪೂರ್ವ ಪೀಠಿಕೆಯ ರೀತಿ ಇದೆ. ಕನ್ನಡದ್ದೇ ವ್ಯಾಕರಣವೊಂದನ್ನು ಹೇಗೆ ರಚಿಸಿಕೊಳ್ಳಬಹುದೆಂಬ ಎಲ್ಲ ಮಾರ್ಗಸೂಚಿಗಳೂ ಇಲ್ಲಿ ಇವೆ.

ಕನ್ನಡ ಮತ್ತು ಸಂಸ್ಕೃತದ ಸಂಧಿ, ಸಮಾಸ, ವಿಭಕ್ತಿ, ಕ್ರಿಯೆ, ಸರ್ವನಾಮ, ಸಂಖ್ಯಾವಾಚಕ, ಪದವರ್ಗ, ವರ್ಣಮಾಲೆ ಇತ್ಯಾದಿಗಳ ಬಗ್ಗೆ ನಮ್ಮನ್ನು ದಂಗುಬಡಿಸುವ ರೀತಿಯಲ್ಲಿ ಕನ್ನಡದ ಸ್ವಂತಿಕೆಯನ್ನು ತಿಳಿಸುತ್ತಾರೆ. ಸಂಧಿಗಳನ್ನು ಧ್ವನಿ ರಚನೆಯ ಮೂಲಕವೂ, ಸಮಾಸಗಳನ್ನು ಪದ ರಚನೆಯ ಮೂಲಕವೂ, ವಿಭಕ್ತಿ-ವಿಶೇಷಣ-ಕ್ರಿಯೆಗಳನ್ನು ಅರ್ಥರಚನೆ ಮತ್ತು ವಾಕ್ಯರಚನೆಯ ಮೂಲಕವೂ ಪ್ರಧಾನವಾಗಿ ಇಲ್ಲಿ ಚರ್ಚಿಸಿದ್ದಾರೆ.

ಕನ್ನಡದಲ್ಲಿ ಕಾರಕಗಳ ಅಗತ್ಯವಿಲ್ಲ. ಕನ್ನಡದಲ್ಲಿ ವಿಭಕ್ತಿ ಪಲ್ಲಟ ಆಗುವುದಿಲ್ಲ. ಕ್ರಿಯಾಪದಗಳಿಗೆ ವಿಭಕ್ತಿ ಪ್ರತ್ಯಯ ಹತ್ತುವುದಿಲ್ಲ. ಸಂಸ್ಕೃತ ನಿಯಮಗಳ ಹಾಗೆ ಸಂಧಿಗಳಾಗಲಿ ಸಮಾಸಗಳಾಗಲಿ ನಡೆಯುವುದಿಲ್ಲ. ಗಮಕ ಕ್ರಿಯಾ ಸಮಾಸಗಳಾವುವೂ ಕನ್ನಡದಲ್ಲಿ ಇಲ್ಲ. ಸಂಖ್ಯಾವಾಚಕಗಳು




ಪುಟ : ೨೪೦ ಬೆಲೆ : ೭೫

ಭಾಷಾ ಪ್ರಕಾಶನ, ಮೈಸೂರು

ವಿಶೇಷಣಗಳಾಗಿ ವರ್ತಿಸುತ್ತವೆ. ಕನ್ನಡದಲ್ಲಿ ನಾಮಪದ, ಕ್ರಿಯಾಪದ ಮತ್ತು ಗುಣವಾಚಕಗಳೆಂದು ಮೂರು ಮುಖ್ಯ ಪದವರ್ಗಗಳಿವೆ. ಸಂಸ್ಕೃತದಂತೆ ಕನ್ನಡದಲ್ಲಿ ಗುಣವಾಚಕಗಳು ನಾಮಪದದ ಗುಂಪಿಗೆ ಸೇರುವುದಿಲ್ಲ. ಕನ್ನಡ ಪ್ರತ್ಯಯಗಳಿಗೆ ಅವುಗಳದ್ದೇ ಭಿನ್ನ ಸ್ವರೂಪವಿದೆ. ಕನ್ನಡದಲ್ಲಿ ಭೂತ, ಅಭೂತವೆಂದು ಎರಡೇ ಕಾಲ. ಕನ್ನಡದಲ್ಲಿ ಕರ್ಮಣಿ ಪ್ರಯೋಗವಿಲ್ಲ. ಹೀಗೆ ಹಲವಾರು ವಿಚಾರಗಳನ್ನು ಪುಸ್ತಕದುದ್ದಕ್ಕೂ ಪ್ರತಿಪಾದಿಸಿದ್ದಾರೆ. ಪುರುಷ, ಅವ್ಯಯ, ಸಂಖ್ಯಾವಾಚಕ, ಸಬ್ಜೆಕ್ಟ್ ತತ್ವ ಇತ್ಯಾದಿಗಳ ಬಗ್ಗೆ ಇನ್ನೂ ಚರ್ಚೆ ಆಗಬೇಕಿದೆ ಎಂಬುದನ್ನು ಸೂಚಿಸಿದ್ದಾರೆ.

ಪದಗುಚ್ಛ, ಪದಪ್ರತ್ಯಯ, ಪದರೂಪಪ್ರತ್ಯಯ, ಆತ್ಮನೇಪದ, ಪರಸ್ಮೈಪದ, ಸಮಸ್ತಪದ, ಸರ್ವಪದ, ಪ್ರತಿನಾಮ, ಐಚ್ಛಿಕತೆ-ಅನೈಚ್ಛಿಕತೆ ಹೀಗೆ ಹಲವಾರು ಹೊಸ ಪಾರಿಭಾಷಿಕಗಳನ್ನು ಹೇಳುವ ಮೂಲಕ ಹಲವು ವ್ಯಾಕರಣ ಪ್ರಕ್ರಿಯೆಗಳನ್ನು ಭಿನ್ನ ನೆಲೆಯಲ್ಲಿ ವಿವರಿಸುತ್ತಾರೆ. ಹಾಗೂ ಇನ್ನೂ ನಿರ್ವಚಿಸಿಕೊಳ್ಳಬೇಕಾಗಿರುವ ಹಲವು ವ್ಯಾಕರಣ ಪ್ರಕ್ರಿಯೆಗಳಿರುವುದನ್ನು ಧ್ವನಿಸಿದ್ದಾರೆ. ತಮ್ಮ ಹಲವಾರು ತಾತ್ವಿಕ ನಿರ್ವಚನಗಳನ್ನು ಓಪನ್ ಎಂಡೆಡ್ಡಾಗಿರಿಸುವ ಮೂಲಕ ಇನ್ನೂ ಇಂಥ ಹಲವಾರು ಹೊಸ ಪ್ರಯತ್ನಗಳಾಗಬೇಕಿದೆ ಎಂಬ ದಿಕ್ಸೂಚಿಯನ್ನೂ ನೀಡುತ್ತಾರೆ (ಉದಾ-೭.೬).

> *''ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ'' ಈ ಪುಸ್ತಕವನ್ನು ಕುರಿತ ಚರ್ಚೆಗೆ ಕಳೆದ ಡಿಸೆಂಬರ್‌ನಲ್ಲಿ ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಭಾಷಾಭಿವೃದ್ಧಿ ವಿಭಾಗವು ಒಂದು ಕಮ್ಮಟವನ್ನು ಏರ್ಪಡಿಸಿತ್ತು. ಕನ್ನಡ ಭಾಷೆ ಮತ್ತು ವ್ಯಾಕರಣದ ಹಿನ್ನೋಟ ಮುನ್ನೋಟಗಳನ್ನು ಶಂಕರ ಭಟ್ಟರ ಪುಸ್ತಕದ ಹಿನ್ನೆಲೆಯಲ್ಲಿ ಆಹ್ವಾನಿತ ವ್ಯಾಕರಣಾಸಕ್ತರು, ವಿದ್ವಾಂಸರು ಚರ್ಚಿಸಿದರು. ಚರ್ಚೆಯ ವಿವರಗಳನ್ನು ಕೂಡಿಸಿದ ಒಂದು ಪುಸ್ತಕವನ್ನು ಕಮ್ಮಟದ ನಂತರ ಸಿದ್ಧಪಡಿಸುವ ಯೋಜನೆಯೂ ಇದೆ ಎಂದು ಕನ್ನಡ ಭಾಷಾಭಿವೃದ್ಧಿ ವಿಭಾಗದ ಮುಖ್ಯಸ್ಥರಾದ ಕೆ. ವಿ. ನಾರಾಯಣ ತಿಳಿಸಿದರು. ಅಂದರೆ ಪುಸ್ತಕದ ಮಹತ್ವ ಎಷ್ಟು ಎಂಬುದು ಇದರಿಂದ ವ್ಯಕ್ತವಾಗುತ್ತದೆ.*

ರಾಮಲಿಂಗಪ್ಪ ಟಿ. ಬೇಗೂರು

ಹಲವೆಡೆ ಈಗಿನ ಪರಿಭಾಷೆಯನ್ನೇ ಬದಲಾಯಿಸಿ ನಮ್ಮದೇ ಪರಿಭಾಷೆಯನ್ನು ಕಟ್ಟಿಕೊಳ್ಳಬೇಕಾಗಿದೆ ಎಂಬುದನ್ನು ಪ್ರತ್ಯಯ, ಸಮಾಸ, ವಿಭಕ್ತಿಗಳ ವಿಚಾರದಲ್ಲಿ ಹೊಸ ಪರಿಭಾಷೆಯನ್ನು ಬಳಸುವ ಮೂಲಕ ಸೂಚಿಸಿದ್ದಾರೆ. ಶಂಕರ ಭಟ್ಟರು ತಮ್ಮ ಪುಸ್ತಕದಲ್ಲಿ ಹೊಸ ಪರಿಭಾಷೆಯನ್ನು ನಿರ್ಮಿಸುವ ಜೊತೆಗೆ ಪರಿಭಾಷೆಯನ್ನು ಸರಳಗೊಳಿಸುವ ಹಾಗೂ ವ್ಯಾಕರಣ ಸ್ವರೂಪವನ್ನೇ ಸರಳೀಕರಿಸುವ ಪ್ರಯತ್ನವನ್ನೂ ಮಾಡಿದ್ದಾರೆ.

ನಮ್ಮಲ್ಲಿ ವ್ಯಾಕರಣ ಓದಿಸುವ ಮತ್ತು ಬರೆಯುವ ಜನ ಹೆಚ್ಚು ಪದರಚನೆಯ ಮೇಲೆ ಕೆಲಸ ಮಾಡಿ ವಾಕ್ಯರಚನಾ ನಿಯಮಗಳ ಬಗ್ಗೆ ಅವಜ್ಞೆಯಿಂದ ಇರುವುದನ್ನು ಹೇಳುತ್ತಾ ವಾಕ್ಯ ನಿಯಮಗಳ ಬಗೆಗೂ ಅಲ್ಲಲ್ಲಿ ಕೂಲಂಕಷವಾಗಿ ಚರ್ಚಿಸಿದ್ದಾರೆ. ಬಹಳ ಹಿಂದೆಯೇ ಇವರು ಬರೆದ 'ಕನ್ನಡ ವಾಕ್ಯಗಳು' ಪುಸ್ತಕವನ್ನು ನಮ್ಮ ವಿದ್ವಾಂಸಲೋಕ ಇನ್ನೂ ಅಧ್ಯಯನ ಮಾಡಿಲ್ಲ ಎಂಬ ವಿಚಾರ ಈ ಪುಸ್ತಕದ ಓದಿನಿಂದ ಹೊಳೆಯುತ್ತದೆ.

ಇಂದು ಕನ್ನಡ ಬಳಕೆಯ ನಿಯಮ ಮತ್ತು ಕಲಿಕಾ ನಿಯಮಗಳ ನಡುವೆ ವ್ಯತ್ಯಾಸ ಇರುವುದರಿಂದ ಅನ್ಯ ಭಾಷಿಕರಿಗೆ ಕನ್ನಡ ಕಲಿಯಲು ಕಷ್ಟವಾಗುತ್ತಿದೆ. ಕನ್ನಡ ವ್ಯಾಕರಣವನ್ನು ಸಂಸ್ಕೃತ ವ್ಯಾಕರಣಕ್ಕೆ ಒಗ್ಗಿಸಿ ಕನ್ನಡದ್ದಲ್ಲದ ವ್ಯಾಕರಣವನ್ನು ಕನ್ನಡ ವ್ಯಾಕರಣವೆಂದು ಕಲಿಸಲಾಗುತ್ತಿದೆ. ಕನ್ನಡ ಸಾಫ್ಟ್‌ವೇರ್ ನಿರ್ಮಾಣದಲ್ಲೂ ನಮಗಿರುವ ಮುಖ್ಯ ತೊಂದರೆ ಇದೇ ಆಗಿದೆ. ಸಂಸ್ಕೃತದಿಂದ ಹೊರತಾದ ಕನ್ನಡದ್ದೇ ವ್ಯಾಕರಣವನ್ನು ಕಟ್ಟಿಕೊಳ್ಳುವ ಮೂಲಕ ಈ ಸಮಸ್ಯೆಯನ್ನು ನಿವಾರಿಸಬಹುದಾಗಿದೆ. ವ್ಯಾಕರಣದ ಮೂಲಕ ಭಾಷೆಯನ್ನು ಕಲಿಯುವವರಿಗೆ ಹಾಗೂ ಕಲಿತು ಬಳಸುವವರಿಗೆ ಆಗ ಕನ್ನಡ ಕಲಿಕೆಯು ಸುಲಭ ಎನ್ನಿಸಬಹುದು. ನಮ್ಮ ವಿದ್ಯಾರ್ಥಿಗಳಿಗೂ ಆಗ ವ್ಯಾಕರಣ ಕಬ್ಬಿಣದ ಕಡಲೆ ಅಲ್ಲ ಎಂಬ ಅಭಿಪ್ರಾಯ ಮೂಡಬಹುದು. ಈ ಬಗೆಗೆ ಹಲವು ಒಳಸುಳಿವುಗಳು ಈ ಪುಸ್ತಕದಲ್ಲಿ ದೊರೆಯುತ್ತವೆ.

ಈ ಸಮಸ್ಯೆ ಕೇವಲ ಕನ್ನಡ ವ್ಯಾಕರಣದ್ದಲ್ಲ. ಛಂದಸ್ಸು, ಕಾವ್ಯಮೀಮಾಂಸೆ, ಪಠ್ಯವಿಮರ್ಶೆ (ಗ್ರಂಥ ಸಂಪಾದನೆ), ಸಾಹಿತ್ಯ ಚರಿತ್ರೆಯ ನಿರ್ವಚನ, ಹೀಗೆ ಹಲವು ಶಾಖೆಗಳಲ್ಲಿ ಈ ಸಮಸ್ಯೆ ವ್ಯಾಪಿಸಿದೆ. ಕನ್ನಡದ್ದೇ ಆದ ಛಂದಸ್ಸು, ಕನ್ನಡದ್ದೇ ಆದ ಕಾವ್ಯ ಮೀಮಾಂಸೆ

(೬೨ನೇ ಪುಟಕ್ಕೆ)

# ನವವಸಾಹತುಶಾಹಿಯ ಸವಾಲುಗಳು

೧೯೪೭ರಲ್ಲಿ ಪ್ರಾರಂಭವಾದ ಗ್ಯಾಟ್ ಒಪ್ಪಂದ ವಿಶ್ವದ ವ್ಯವಹಾರ-ವ್ಯಾಪಾರ ಬೆಳೆದಂತೆ ಅನೇಕಬಾರಿ ಚರ್ಚೆಗೊಳಪಟ್ಟು ೧೯೯೪ರಲ್ಲಿ ಹೊಸರೂಪ ಪಡೆಯಿತು. ''ಗ್ಯಾಟ್-೧೯೯೪'' ಅತ್ಯಂತ ಆಧುನಿಕವಾದ ಇತ್ತೀಚಿನ ಹೊಸರೂಪ. ೧೯೯೪ ರ ಏಪ್ರಿಲ್ ೧೫ ರಂದು ಅಂತಿಮ ರೂಪ ಪಡೆದ ಈ ಗ್ಯಾಟ್ ಒಪ್ಪಂದ ವಿಶ್ವದ ಆರ್ಥಿಕ ಹಾಗೂ ರಾಜಕೀಯ ವ್ಯವಹಾರದ ಮೇಲೆ ತೀವ್ರವಾದ ಪರಿಣಾಮವನ್ನುಂಟುಮಾಡಿದೆ. ಗ್ಯಾಟ್ ಒಪ್ಪಂದದ ಹಿಂದೆ ಮುಂದುವರಿದ ಪಶ್ಚಿಮ ರಾಷ್ಟ್ರಗಳ ಕುಮ್ಮಕ್ಕು ಇದೆ. ಪ್ರಬಲವಾಗಿರುವ ಈ ರಾಷ್ಟ್ರಗಳು ಗ್ಯಾಟ್ ಹೆಸರಿನಲ್ಲಿ ಸಣ್ಣ-ಸಣ್ಣ ಬಡರಾಷ್ಟ್ರಗಳನ್ನು ತಿಂದು ಹಾಕತೊಡಗಿವೆ. ಮುಕ್ತ ವ್ಯಾಪಾರದ ಮೂಲಕ ವಿಶ್ವಸಂಸ್ಥೆಯ ಮೇಲೆ ಪಶ್ಚಿಮ ರಾಷ್ಟ್ರಗಳ ಹಿಡಿತವನ್ನು ಹೆಚ್ಚಿಸುವುದು ಗ್ಯಾಟ್ ಒಪ್ಪಂದದ ರಾಜಕೀಯ ಉದ್ದೇಶವಾಗಿದೆ. ಬಹುರಾಷ್ಟ್ರೀಯ ಕಂಪನಿಗಳಿಗೆ ಹೆಚ್ಚಿನ ಅನುಕೂಲತೆ ಮಾಡಿಕೊಡುವ ಈ ಗ್ಯಾಟ್ ಒಪ್ಪಂದ ಗುಡಿಕೈಗಾರಿಕೆಗಳನ್ನು ವಿನಾಶದ ಅಂಚಿಗೆ ತಳ್ಳಿದೆ.

ಗ್ಯಾಟ್ ಒಪ್ಪಂದಕ್ಕೆ ಜಗತ್ತಿನ ೧೧೭ ರಾಷ್ಟ್ರಗಳು ಸಹಿ ಹಾಕಿವೆ. ಇದರ ಗಾತ್ರ ಬಹುದೊಡ್ಡದು ಮತ್ತು ಸಂಕೀರ್ಣವಾದುದು. ಹೀಗಾಗಿ ಇದರ ಅನೇಕ ಒಳಮುಖಗಳನ್ನು ಬೇಗನೆ ಗುರುತಿಸುವುದು ಕಷ್ಟವಾಗುತ್ತದೆ. ಗ್ಯಾಟ್ ಒಪ್ಪಂದ ಬಿಸಿ ತುಪ್ಪದಂತೆ ನುಂಗಲೂ ಬರುವಂತಿಲ್ಲ, ಉಗುಳಲೂ ಬರುವಂತಿಲ್ಲ. ಗ್ಯಾಟ್ ಒಂದು ರಾಜತಾಂತ್ರಿಕ ಚಾಣಾಕ್ಷತನದ ಸಂಧಾನದ ಕೂಸು. ಇದರಲ್ಲಿ ರಾಜಕೀಯ ಸಂಧಾನಗಳು ನಿರಂತರವಾಗಿರುತ್ತವೆ. ಇದರೊಳಗಿನ ಸಮಸ್ಯೆಗಳನ್ನು ಸೂಕ್ಷ್ಮವಾಗಿ ಗ್ರಹಿಸಿ ನಮ್ಮ ಸರಕಾರಗಳು ಇದನ್ನರಗಿಸಿಕೊಂಡು ಬೆಳೆದರೆ ಗ್ಯಾಟ್‌ದಿಂದ ಅನೇಕ ರೀತಿಯ ಅನುಕೂಲತೆಗಳನ್ನು ಪಡೆದುಕೊಳ್ಳಬಹುದು ಎನ್ನುವ ಪ್ರತೀತಿ ಇದೆ. ಜೈವಿಕ ತಂತ್ರಜ್ಞಾನ, ತಳಿ ವಿಜ್ಞಾನ, ಜೀನ್‌ಗಳಿಗೆ ಸಂಬಂಧಿಸಿದ ಇಂಜಿನಿಯರಿಂಗ್, ಬೀಜ ಸಂಸ್ಕರಣ ಪ್ರಕ್ರಿಯೆ, ಜೀವರಾಶಿಗಳಿಗೆ ಸಂಬಂಧಿಸಿದ ತಾಂತ್ರಿಕ ತಜ್ಞತೆ-ಹೀಗೆ ಹತ್ತು ಹಲವು ವಿಷಯಗಳನ್ನು ಗ್ಯಾಟ್ ಒಳಗೊಂಡಿದೆ.

ಮುಕ್ತ ವ್ಯಾಪಾರದಿಂದ ಸಮಾನವಾದ ಅನುಕೂಲತೆಗಳು ಸಿಗಬೇಕಾದರೆ ಎಲ್ಲ ದೇಶಗಳಲ್ಲಿಯೂ ಸಮಾನ ಅವಕಾಶಗಳಿರಬೇಕು. ಆದರೆ ಸಮಾನತೆಯೆಂಬುದು ಇಂದು ಕನಸಿನ ಮಾತಾಗಿದೆ. ಗ್ಯಾಟ್ ಒಂದು ಶ್ರೀಮಂತರ ಕೂಟವಾಗಿದ್ದು ಇದರಲ್ಲಿ ಮೂರನೇ ಜಗತ್ತಿನ ಹಿಂದುಳಿದ ರಾಷ್ಟ್ರಗಳ ಹಿತವನ್ನು ಕಡೆಗಣಿಸಲಾಗಿದೆ. ಗ್ಯಾಟ್-ಡಂಕೆಲ್-ಡಬ್ಲ್ಯುಟಿಒ ಪ್ರಸ್ತಾವಗಳ ಕಾರಣದಿಂದ ಇಂದು ಎಲ್ಲ ಕ್ಷೇತ್ರಗಳಲ್ಲೂ ಖಾಸಗೀಕರಣಕ್ರಿಯೆ ಭರದಿಂದ ನಡೆದಿದೆ. ಈ ಖಾಸಗೀಕರಣ ಹೆಚ್ಚಾದಂತೆಲ್ಲ ಬಡವ-ಶ್ರೀಮಂತರ ನಡುವಿನ ಅಂತರವೂ ಹೆಚ್ಚುತ್ತಲೇ ಹೋಗುತ್ತದೆ. ಗ್ಯಾಟ್ ಪೇಟೆಂಟ್ ಕಾಯಿದೆ ಇಂದು ಭಯ ಹುಟ್ಟಿಸತೊಡಗಿದೆ.

ಈಗ ಭಾರತಕ್ಕಾಗಲಿ ಅಥವಾ ಮೂರನೇ ಜಗತ್ತಿನ ದೇಶಗಳಿಗಾಗಲಿ ಗ್ಯಾಟ್ ಒಪ್ಪಂದದಿಂದ, ಡಂಕೆಲ್ ಪ್ರಸ್ತಾವಗಳಿಂದ ಹೊರಗುಳಿಯುವುದು ಸಾಧ್ಯವಾಗದಂತಹ ಪರಿಸ್ಥಿತಿ ಬಂದಿದೆ. ನವವಸಾಹತುಶಾಹಿಯನ್ನು ಅರಗಿಸಿಕೊಂಡು ಕರಗಿಸಿಕೊಂಡು ಬೆಳೆಯುವುದೇ ನಮ್ಮ ಮುಂದಿರುವ ದಾರಿಯೆಂಬ ಪ್ರತಿಪಾದನೆ ಬಲವಾಗುತ್ತಿದೆ. ಬಹುರಾಷ್ಟ್ರೀಯ ಕಂಪನಿಗಳಿಂದ ಹಾಗೂ ಖಾಸಗೀಕರಣದ ಕ್ರಿಯೆಯಿಂದ ಈಗ ಸ್ಪರ್ಧೆಯಂತೂ ಪ್ರಾರಂಭವಾಗಿದೆ. ಈ ಸ್ಪರ್ಧೆ ಆರೋಗ್ಯಕರವಾಗಿದ್ದು ನಮ್ಮಲ್ಲಿಯ ಉದ್ಯೋಗಿಗಳ – ನೌಕರದಾರರ ಆಲಸ್ಯ, ಹಿಂಜರಿಕೆ, ನಿರ್ಲಕ್ಷ್ಯ, ಸೋಮಾರಿತನಗಳನ್ನು ಹೊಡೆದುಹಾಕುವುದಾದರೆ ಇದರಿಂದ ದೇಶದ ಅಭಿವೃದ್ಧಿಯಾಗಬಹುದೆಂದು ಕೆಲವರು ಅಭಿಪ್ರಾಯಪಡುತ್ತಾರೆ. ಇಂದು ಬಹುತೇಕ ಸರಕಾರಿ ಕಚೇರಿಗಳಲ್ಲಿ ಕಂಡುಬರುವ ಲಂಚಗುಳಿತನ, ಕಾರ್ಯದಕ್ಷತೆಯ ಕೊರತೆ, ಪರಿಣತಿಯ ಅಭಾವ ಹೊಂದಿರುವ ಈ ವ್ಯವಸ್ಥೆಗೆ, ಖಾಸಗೀಕರಣದ ಪ್ರಕ್ರಿಯೆ ಪರ್ಯಾಯವಾಗಬಲ್ಲುದೆಂಬುದು ಕೆಲವರ ನಂಬಿಕೆಯಾಗಿದೆ. ಈ ಬಗೆಗೆ ಮುಕ್ತ ಚರ್ಚೆ ನಡೆಯಬೇಕಾಗಿದೆ. ಅನುಭವದಿಂದ ತೀರ್ಮಾನವಾಗಬೇಕಾದ್ದು ಇದು.

ಬಹುರಾಷ್ಟ್ರೀಯ ಕಂಪನಿಗಳಲ್ಲಿ ಎದ್ದುಕಾಣುವ ಮತ್ತೊಂದು ಸಂಗತಿಯೆಂದರೆ ಜಾಹೀರಾತುಗಳ ದಾಳಿ. ತಮ್ಮ ಕಂಪನಿಗಳು ಸಿದ್ಧಪಡಿಸಿದ ಸಲಕರಣೆಗಳನ್ನು ಮಾರಾಟ ಮಾಡಲು ಅತಿ ಹೆಚ್ಚಿನ ಹಣ ಸುರಿದು ಅವು ಜಾಹೀರಾತು ನೀಡುತ್ತವೆ. ತಮ್ಮ ಅರ್ಧದಷ್ಟು ಹಣವನ್ನು ಜಾಹೀರಾತಿಗೇ ಖರ್ಚು ಮಾಡುತ್ತವೆ. ಹೀಗಾಗಿ ಪ್ರಚಾರವಿಲ್ಲದ ಗುಡಿ ಕೈಗಾರಿಕೆಗಳು, ಸಣ್ಣ ಉದ್ದಿಮೆಗಳು ಸ್ಪರ್ಧೆಯ ಮಾರುಕಟ್ಟೆಯಲ್ಲಿ ಹಿಂದೆ ಬಿದ್ದು ನಶಿಸಿ ಹೋಗುತ್ತಲಿವೆ. ಇಂದು ಸಮೂಹ ಮಾಧ್ಯಮಗಳಾದ ಪತ್ರಿಕೆ, ರೇಡಿಯೋ, ಟಿ.ವಿ, ಸಿನೇಮಾ ಇವೆಲ್ಲಾ ಜಾಹೀರಾತುಗಳ ಮೂಲಕವೇ ನಡೆಯುತ್ತವೆ. ಹೀಗಾಗಿ ಇವೆಲ್ಲಾ ಉದ್ದಿಮೆಗಳಾಗತೊಡಗಿವೆ. ಯಾವ ಚಾನಲ್ ಹಾಕಿದರೂ ಮುಂಜಾನೆಯಿಂದ ಸಂಜೆಯವರೆಗೆ ತಿಕ್ಕುವ - ತಿಕ್ಕಿಸಿಕೊಳ್ಳುವ ಕಾರ್ಯಕ್ರಮದ ಜಾಹೀರಾತುಗಳೇ ತುಂಬಿರುತ್ತವೆ. ಈ ಜಾಹೀರಾತುಗಳು ಮಹಿಳೆಯರ ಚೆಲುವಿಕೆಯನ್ನು, ಮಕ್ಕಳ ಮುಗ್ಧತೆಯನ್ನು ತಮ್ಮ ಅಸ್ತ್ರಗಳನ್ನಾಗಿ ಮಾಡಿಕೊಂಡಿವೆ. ಇಂತಿಂತಹ ಶಾಂಪೂಗಳಿಂದ ತಲೆತಿಕ್ಕಿಕೊಳ್ಳಿರಿ, ಇಂತಿಂತಹ ಸಾಬೂನುಗಳಿಂದ ಮೈತಿಕ್ಕಿಕೊಳ್ಳಿರಿ, ಇಂತಿಂತಹ ಪೇಸ್ಟುಗಳಿಂದ ಹಲ್ಲು ತಿಕ್ಕಿಕೊಳ್ಳಿರಿ ಎಂದು ಅಬ್ಬರದ ಪ್ರಚಾರ ಮಾಡುತ್ತವೆ. ತಲೆ-ಹಲ್ಲು-ಮೈ ತಿಕ್ಕಿಕೊಂಡು ಸ್ವಚ್ಛವಾಗಿರುವುದರಲ್ಲಿ ತಪ್ಪೇನಿಲ್ಲ; ಆದರೆ ಮನಸ್ಸನ್ನು ತಿಕ್ಕುವವರು ಯಾರು? ಮನಸ್ಸು ಶುದ್ಧಿಯಾಗಬೇಡವೆ? ಬಹಿರಂಗ ಶುದ್ಧಿಗಿಂತ ಅಂತರಂಗ ಶುದ್ಧಿ ಮುಖ್ಯವಲ್ಲವೆ? ಈ ಅಂತರಂಗದ ಅರಿವನ್ನು ಜಾಗೃತಗೊಳಿಸುವವರಾರು? ಹೃದಯವಂತಿಕೆಯನ್ನು ಬೆಳೆಸುವವರಾರು? ಈ ಎಲ್ಲ ಹೊಸ ಸವಾಲುಗಳಿಗೆ ನಮ್ಮ ಅರಿವೇ ನಮಗೆ ಗುರುವಾಗಬೇಕಾಗಿದೆ. ನಮ್ಮೊಳಗಿನಿಂದಲೇ ಹೊಸಬೆಳಕು ಮೂಡಿಬರಬೇಕಾಗಿದೆ.

ಜಾಗತೀಕರಣದ ಫಲವಾಗಿ ಸ್ಯಾಟಲೈಟ್ ಟಿ.ವಿ. ಚಾನಲ್‌ಗಳು ಇಂದು ದೇಶದಾದ್ಯಂತ ಪಸರಿಸಿವೆ. ಜಗತ್ತಿನ ಅನೇಕ ಘಟನೆಗಳು ಈಗ ಅರೆಗಳಿಗೆಯಲ್ಲಿ ಟಿ.ವಿ. ಮಾಧ್ಯಮದ ಮೂಲಕ ಪ್ರಸಾರವಾಗುತ್ತಲಿವೆ. ಈ ಖಾಸಗಿ ಚಾನಲ್‌ಗಳು ನಮ್ಮ ಯುವಕ-ಯುವತಿಯರನ್ನು ಆಕರ್ಷಿಸಿಬಿಟ್ಟಿವೆ. ಬದಲಾಗುತ್ತಿರುವ ಸಮಾಜ ವ್ಯವಸ್ಥೆಯಲ್ಲಿ ಆಧುನಿಕತೆ ಅನಿವಾರ್ಯವಾದರೂ, ಇಂತಹ ಚಾನಲ್‌ಗಳಿಂದ ಲಾಭಕ್ಕಿಂತ ಹಾನಿಯೇ ಹೆಚ್ಚಾಗಿದೆಯೆಂಬ ಸತ್ಯ ಸ್ಪಷ್ಟವಾಗತೊಡಗಿದೆ.

ಇಂದು ಎಲ್ಲೆಡೆ ಸ್ಟಾರ್ ಸಂಸ್ಕೃತಿ ವಿಜೃಂಭಿಸತೊಡಗಿದೆ. ಈ ಸ್ಟಾರ್ ಸಂಸ್ಕೃತಿ ಕಣ್ಣಿಗೆ ಮನೋಹರವಾಗಿ ಕಂಡರೂ ಮನಸ್ಸಿಗೆ ಮೋಸ ಮಾಡುವಂತಹದ್ದಾಗಿದೆ. ''ಸ್ಟಾರ್'' ಯೆಂಬುದನ್ನು ನಿಜವಾಗಿ ಆಲೋಚಿಸಿದಾಗ ಅದು ಇಂದು ''ವಾರ್'' ಆಗಿ ಕಾಡತೊಡಗಿದೆ. ಈ ಸ್ಟಾರ್‌ವಾರ್ ಬಗೆಗೆ ಇಂದು ಎಲ್ಲರೂ ಚಿಂತಿಸಬೇಕಾಗಿದೆ.

ಭಾರತಕ್ಕೆ ಸ್ಯಾಟಲೈಟ್ ಬಂದಾಗ ಅನೇಕ ವಿಚಾರವಂತರು, ನ್ಯಾಯಾಧೀಶರು ಇದನ್ನು ದಾಳಿಯೆಂದೇ ಕರೆದರು. ಇದು ಸತ್ಯವಾದ ಮಾತಾಗಿದೆ. ಇಂದು ಭಾರತದ ಮೇಲೆ ಸ್ಯಾಟಲೈಟ್ ಟಿ.ವಿ.ಗಳಿಂದ ಆಕಾಶ ಮಾರ್ಗವಾಗಿ ದಾಳಿ ಪ್ರಾರಂಭವಾಗಿದೆ. ಬಂದೂಕು-ಬಾಂಬುಗಳ ಮೂಲಕ ನಡೆಯುವ ನೇರವಾದ ಯುದ್ಧಕ್ಕಿಂತ ಮಾಧ್ಯಮಗಳ ಮೂಲಕ ಕಲರ್‌ಗಳಲ್ಲಿ ಕಾಣಿಸಿಕೊಳ್ಳುವ ಈ ಸ್ಟಾರ್‌ವಾರ್ ಹೆಚ್ಚು ಅಪಾಯಕಾರಿಯಾಗಿದೆ. ನೇರವಾಗಿ ನಡೆಯುವ ಯುದ್ಧಗಳಲ್ಲಿ ಆಸ್ತಿ-ಪಾಸ್ತಿಗಳು ನಾಶವಾದರೆ, ಮಾಧ್ಯಮಗಳ ಮೂಲಕ ನಡೆಯುವ ಈ ಯುದ್ಧಗಳಲ್ಲಿ ಮನುಷ್ಯರ ಮನಸ್ಸುಗಳೇ ನಾಶವಾಗುತ್ತವೆ, ಅಂತಃಕರಣ ಬತ್ತಿಹೋಗುತ್ತದೆ, ಮಾನವೀಯತೆ ಮಾಯವಾಗುತ್ತದೆ, ಮನುಷ್ಯ ಕೇವಲ ಯಂತ್ರವಾಗುತ್ತಾನೆ.

**ಡಾ|| ಬಸವರಾಜ ಸಬರದ**

ಸುದ್ದಿಯೆಂಬುದು ಇಂದು ಕೇವಲ ಸುದ್ದಿಯಾಗಿಯೇ ಉಳಿದಿಲ್ಲ; ಅದೇರೀತಿ ಮನರಂಜನೆಯೆಂಬುದು ಕೇವಲ ಮನರಂಜನೆಯಾಗಿ ಉಳಿದಿಲ್ಲ. ಬಾಂಬ್‌ಗಳಂತೆ,

ಸ್ಫೋಟಕಗಳಂತೆ ಸ್ಟಾರ್‌ವಾರ್ ಕೂಡಾ ಬಹುಮಹತ್ವದ ರಾಜಕೀಯ ಪಿತೂರಿಯಾಗಿದೆ. ಈ ಸುದ್ದಿ ಸಂಸ್ಥೆಗಳನ್ನು ಅಮೆರಿಕಾದ ಗುಪ್ತಚಾರ ಸಂಸ್ಥೆಗಳೇ ನಡೆಸುತ್ತವೆ. ಸಿ.ಐ.ಎ. ಇಂದು ಪ್ರಪಂಚದಾದ್ಯಂತ ನೂರಾರು ಪತ್ರಕರ್ತರನ್ನು ಹೊಂದಿದೆ. ತಾನು ಹೇಳಿದಂತೆ ಇಡೀ ಜಗತ್ತು ಕೇಳಬೇಕೆಂಬುದು ಅಮೆರಿಕದ ನಿಲುವಾಗಿದೆ. ಹೊಸದಾಗಿ ವಿದೇಶಾಂಗ ಸಚಿವನಾಗಿ ನೇಮಕಗೊಂಡಿರುವ ಜನರಲ್ ಪವೆಲ್ ಉದ್ಘೋಷಿಸಿರುವುದು ಅದೇ ನಿಲುವನ್ನು. ಪ್ರಪಂಚವೆಲ್ಲಾ ಆತನ ಆಣತಿಯಿಂದ, ಆತನ ಲೆಕ್ಕಾಚಾರದಂತೆ, ನಡೆಯಬೇಕೆಂಬುದು ಆತನ ಧೋರಣೆಯಾಗಿದೆ. ಹೀಗಾಗಿ ಮೂರನೇ ಜಗತ್ತಿನ ಬಡರಾಷ್ಟ್ರಗಳು ಇಂದು ಅಮೆರಿಕಾದಂತಹ ಶ್ರೀಮಂತ ದೇಶಗಳು ಬೀಸಿದ ಬಲೆಗೆ ಅನಿವಾರ್ಯವಾಗಿ ಬೀಳತೊಡಗಿವೆ. ಇಂದಿನ ಸ್ಯಾಟಲೈಟ್ ಚಾನಲ್‌ಗಳು ನಮ್ಮ ಯುವಕರಲ್ಲಿ ವಿಕೃತ ಮನಸ್ಸನ್ನು, ವಿಕ್ಷಿಪ್ತ ಬಯಕೆಗಳನ್ನು ಹುಟ್ಟುಹಾಕಿವೆ.

ಸ್ಯಾಟಲೈಟ್ ಚಾನಲ್‌ಗಳು ಶ್ರೀಮಂತ ರಾಷ್ಟ್ರಗಳ ಪ್ರತಿನಿಧಿಗಳಾಗಿವೆ. ಹೀಗಾಗಿ ಬಡರಾಷ್ಟ್ರಗಳ ಬಗೆಗೆ ಇವುಗಳಿಗೆ ಕಾಳಜಿಯಿಲ್ಲ. ಚಾರ್ಲ್ಸ್ ಮತ್ತು ಗತಿಸಿದ ಡಯಾನಳ ಮದುವೆ ಜಗಳಗಳೇ ಮುಖ್ಯ ಸುದ್ದಿಯಾಗುವ ಇಂತಹ ಮಾಧ್ಯಮಗಳಲ್ಲಿ, ನಮ್ಮ ದೇಶದಲ್ಲಿ ನಿಮಿಷಕ್ಕೆ ಇಬ್ಬರು ಮಕ್ಕಳು ಸಾಯುತ್ತಿರುವ ಯುನಿಸೆಫ್‌ನ ವರದಿ ಮುಖ್ಯವಾಗುವುದಿಲ್ಲ. ಶ್ರೀಮಂತರ ಖಯಾಲಿಗಳಿಗೇ ಪ್ರಾಮುಖ್ಯತೆ ನೀಡುವ ಈ ಚಾನಲ್‌ಗಳು ನಮ್ಮಲ್ಲಿ ನಿರುದ್ಯೋಗದಿಂದ ತತ್ತರಿಸಿಹೋಗಿರುವ ಯುವ ಜನಾಂಗದ ಕಡೆ ಕಣ್ಣೆತ್ತಿ ನೋಡುವುದಿಲ್ಲ. ಉಳ್ಳವರ ಭೋಗ ಜೀವನದ ಸಂಭ್ರಮಗಳನ್ನೇ ವೈಭವೀಕರಿಸುವ ಇವುಗಳಿಗೆ, ಮತಾಂಧರಿಂದ ಮಾರಣಹೋಮಕ್ಕೆ ಬಲಿಯಾಗುತ್ತಿರುವ ಅಮಾಯಕರ ಸಾವು-ನೋವು ಮುಖ್ಯವಾಗುವುದಿಲ್ಲ.

ಈ ಸ್ಯಾಟಲೈಟ್ ಟಿ.ವಿ. ಕಾರ್ಯಕ್ರಮಗಳನ್ನು ತಪ್ಪದೇ ವೀಕ್ಷಿಸುವ ಜನತೆ ಹಾಗೂ ವೀಕ್ಷಿಸದೇ ಇರುವ ಜನತೆ ಇವೆರಡೂ ಸಮೂಹಗಳ ನಡುವೆ ವ್ಯತ್ಯಾಸವೇನೆಂದು ತಿಳಿಯಲು ಕೆನಡಾ ದೇಶದಲ್ಲಿ ಸಮೀಕ್ಷೆ ನಡೆಸಲಾಯಿತು. ಕ್ರಿಯಾಶೀಲರಾಗಿದ್ದ ಪ್ರತಿಭಾವಂತ ಜನರು ಈ ಸ್ಯಾಟಲೈಟ್ ಕಾರ್ಯಕ್ರಮಗಳನ್ನು ನೋಡಿದ ಎರಡು ವರ್ಷಗಳ ನಂತರ ಇವರಲ್ಲಿ ಸಿಡುಕುತನ, ಸಿನಿಕತನ ಎದ್ದು ಕಾಣತೊಡಗಿದವು ಮತ್ತು ಇವರ ಸೃಜನಶೀಲತೆ ಮಂಕಾಗಿತ್ತೆಂದು ಸಮೀಕ್ಷಾ ವರದಿಯಿಂದ ತಿಳಿದುಬರುತ್ತದೆ.

ಹಿಂಸೆ ಹಾಗೂ ಲೈಂಗಿಕತೆಗಳನ್ನೇ ವೈಭವೀಕರಿಸುವ ಈ ಚಾನಲ್‌ಗಳು ನೋಡುವ ಕಣ್ಣುಗಳ ಸಂಖ್ಯೆಯನ್ನು ಹೆಚ್ಚಿಸುತ್ತಲೇ ವಿಚಾರ ಮಾಡುವ ಮೆದುಳುಗಳನ್ನು ನಾಶಮಾಡುತ್ತವೆ, ಮುಗ್ಧ ಮನಸ್ಸುಗಳನ್ನು ವಿಕೃತಗೊಳಿಸುತ್ತವೆ. ರೆಸಲಿಂಗ್ ಪಂದ್ಯಗಳ ಹೆಸರಿನಲ್ಲಿ ವರ್ಲ್ಡ್ ರೆಸಲಿಂಗ್ ಫೆಡರೇಷನ್ ಸಂಸ್ಥೆಯು ಹಿಂಸೆಯನ್ನು ಪ್ರಚೋದಿಸಿದರೆ, ಎಂ.ಟಿ.ವಿ.ಗಳು ಲೈಂಗಿಕತೆಯನ್ನು ಲೀಲಾಜಾಲವಾಗಿ ಪ್ರಸಾರ ಮಾಡಿ ಯುವಜನಾಂಗವನ್ನೇ ದಾರಿ ತಪ್ಪಿಸತೊಡಗಿವೆ. (ಹಾಗೆ ನೋಡಿದರೆ ಈ ರೆಸಲಿಂಗ್‌ನಲ್ಲಿ ಏಟುಗಳು ಬೀಳುವುದೇ ಇಲ್ಲ. ಅವು ಅತ್ಯಂತ ರೋಚಕವಾದ ಸ್ಟಂಟ್‌ಗಳೆಂದೇ ಪ್ರಸಿದ್ಧಿ ಹೊಂದಿವೆ. ನೋಡುವ ಯುವಕರಿಗೆ ಮಾತ್ರ ಹಿಂಸೆಯ ವೈಭವ ಕಾಣುತ್ತದೆ). ಪಾಪ್ ರಾಕ್ ಸಂಗೀತ ಇಂದು ಲೈಂಗಿಕ ತೃಷೆಯನ್ನು ತಣಿಸುವ ಸಾಧನವಾಗಿದೆ. ಪ್ರಾದೇಶಿಕ ಭಾಷೆ-ಸಂಸ್ಕೃತಿ ನಾಶವಾಗತೊಡಗಿವೆ, ಅನ್ಯಭಾಷೆ-ಸಂಸ್ಕೃತಿ ವಿಜೃಂಭಿಸತೊಡಗಿವೆ.

ಈ ಚಾನಲ್‌ಗಳ ಹಾವಳಿಯಿಂದ ನಮ್ಮ ಗ್ರಾಮೀಣ ಜನತೆಯ ಆದರ್ಶ ಬದುಕು ಕೂಡ ದಾರಿ ತಪ್ಪತೊಡಗಿದೆ. ದೇಸೀಯತೆ ಕ್ರಮೇಣ ಮಾಯವಾಗತೊಡಗಿದೆ. ಸಾಹಿತ್ಯದ ಬಗೆಗೆ ಆಸಕ್ತಿ ಇಲ್ಲದಂತಾಗಿದೆ. ಪಾಶ್ಚಾತ್ಯರ ಮುಕ್ತ ಲೈಂಗಿಕತೆ ಈ ಚಾನೆಲ್‌ಗಳ ಮೂಲಕ ಹರಿದುಬಂದು ಇಲ್ಲಿ ಏಡ್ಸ್‌ದಂತಹ ಕಾಯಿಲೆಗಳು ತೀವ್ರವಾಗತೊಡಗಿವೆ. ಈ ಚಾನಲ್‌ಗಳಲ್ಲಿ ಕೆಲವು ಒಳ್ಳೆಯ ಕಾರ್ಯಕ್ರಮಗಳೂ ಬರುತ್ತವೆ. ವಿಜ್ಞಾನ-ತಂತ್ರಜ್ಞಾನಕ್ಕೆ ಸಂಬಂಧಿಸಿದ ಉಪಯುಕ್ತ ಕಾರ್ಯಕ್ರಮಗಳೂ ಇವೆ. ಆದರೆ ಹೆಚ್ಚಿನ ಸಂಖ್ಯೆಯ ಕಾರ್ಯಕ್ರಮಗಳೆಲ್ಲಾ ನಮ್ಮ ಯುವಜನಾಂಗವನ್ನು ದಾರಿ ತಪ್ಪಿಸುವಲ್ಲಿ ಯಶಸ್ವಿಯಾಗಿವೆ. ನಮ್ಮ ಜನಪದ ಕಲೆಗಳು ಕಣ್ಮರೆಯಾಗುತ್ತಲಿವೆ. ಮನುಷ್ಯರ ದೇಹಗಳು ಯಂತ್ರಗಳಾಗತೊಡಗಿವೆ, ಮನಸ್ಸುಗಳು ಕೊಳೆಯಲು ಪ್ರಾರಂಭಿಸವೆ, ಆತ್ಮೀಯ ಸಂಬಂಧಗಳು ಅರ್ಥ ಕಳೆದುಕೊಳ್ಳತೊಡಗಿವೆ. ಈ ಚಾನಲ್‌ಗಳು ನಮಗೆ ಅನಿವಾರ್ಯವೆ? ನಮ್ಮ ಮಾತೃ ಸಂಸ್ಕೃತಿ ನಮಗೆ ಬೇಡವೆ? ಈ ಹೊಸ ಸವಾಲುಗಳನ್ನು ಇಂದು ಎದುರಿಸಬೇಕಾಗಿದೆ.

**ಡಾ|| ಬಸವರಾಜ ಸಬರದ**
ಪ್ರವಾಚಕರು, ಕನ್ನಡ ಅಧ್ಯಯನ ಸಂಸ್ಥೆ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ - ೫೮೫ ೧೦೬

*(೪೦ನೇ ಪುಟದಿಂದ)*

ಇತ್ಯಾದಿಗಳನ್ನು ನಾವಿಂದು ಶೋಧಿಸಿಕೊಳ್ಳಬೇಕಾಗಿದೆ. ಎಲ್ಲ ಶಿಸ್ತುಗಳಲ್ಲಿಯೂ ನಮ್ಮತನವನ್ನು ನಾವು ಕಟ್ಟಿಕೊಳ್ಳಬೇಕಾದ ಜರೂರು ಇದೆಯೆಂಬ ಧ್ವನಿಯನ್ನು ಈ ಪುಸ್ತಕವು ಹೊಂದಿದೆ.

ವ್ಯಾಕರಣ ತತ್ವಗಳಿಂದ ವಾಕ್ಯ ಪ್ರಯೋಗಗಳೆಡೆಗೆ ಶಾಸ್ತ್ರೀಯವಾಗಿ ಪ್ರಯಾಣ ಬೆಳೆಸುವ ಭಟ್ಟರ ಪರಿಯು ವಾಕ್ಯ ಪ್ರಯೋಗಗಳ ಕಡೆಯಿಂದ ವ್ಯಾಕರಣ ತತ್ವಗಳ ಕಡೆಗೆ ಹೊರಟಾಗ ಢಿಕ್ಕಿಗೊಳ್ಳುತ್ತದೆ. ಕೆಲವೊಮ್ಮೆ ಅರ್ಥ ರಚನೆಯ ಮೂಲಕ ವ್ಯಾಕರಣ ನಿಯಮಗಳನ್ನು ಚರ್ಚಿಸುವಾಗ (೯.೨.೧, ೯.೨.೨) ಬಳಕೆಗೂ ಮತ್ತು ಪ್ರಯೋಗಕ್ಕೂ ಅಸಾದೃಶ್ಯವಿದೆ ಅನ್ನಿಸುತ್ತದೆ. ತಮ್ಮ ವಿಚಾರ ಮತ್ತು ವ್ಯಾಕರಣ ತತ್ವಗಳನ್ನು ಮಂಡಿಸಲು ಮತ್ತು ಸಮರ್ಥಿಸಲು ಶಂಕರ ಭಟ್ಟರು ಕೆಲವೆಡೆ ಡಿಡಕ್ಟಿವ್ ಮೆಥೆಡ್ಡನ್ನೂ ಬಳಸಿದ್ದಾರೆ. ವ್ಯಾಕರಣ ಮತ್ತು ಭಾಷಾ ನಿಯಮಗಳ ಕುರಿತಂತೆ ಜಗತ್ತಿನ ಹಲವೆಡೆ ಆಗುತ್ತಿರುವ ಅಧ್ಯಯನದ ಒಳನೋಟಗಳ ಮೂಲಕ ಕನ್ನಡದ ಬಗೆಗೆ ಮಾತನಾಡುವ ಭಟ್ಟರು ಕೆಲವೊಮ್ಮೆ ತೌಲನಿಕ ಸಮರ್ಥನೆಗಳನ್ನು ನೀಡುತ್ತಾರೆ.

ಕನ್ನಡ ಬೋಧಕರೂ ಸೇರಿದಂತೆ ಕನ್ನಡ ನಾಡು-ನುಡಿಯ ಬಗೆಗೆ ಚಿಂತಿಸುವವರೆಲ್ಲ ಶಂಕರ ಭಟ್ಟರ ಈ ಪುಸ್ತಕವನ್ನು ಅಗತ್ಯವಾಗಿ ಓದಬೇಕಾಗಿದೆ. ಇಂದು ಶಾಲೆಗಳಲ್ಲಿ ತಪ್ಪು ವ್ಯಾಕರಣ ಬೋಧಿಸುತ್ತಿದ್ದೇವೆ, ಅನಗತ್ಯವಾದದ್ದನ್ನ ಬೋಧಿಸುತ್ತಿದ್ದೇವೆ, ಬಳಕೆ ಮತ್ತು ಕಲಿಕೆಯ ನಿಯಮಗಳ ನಡುವೆ ಅಪಾರ ಅಂತರವಿದೆ, ಕನ್ನಡಕ್ಕೆ ಕನ್ನಡದ್ದೇ ವ್ಯಾಕರಣ ಇಂದು ಬೇಕಾಗಿದೆ, ಎಂಬ ಇವರ ಮಾತುಗಳನ್ನು ಪರಾಮರ್ಶಿಸಲಾದರೂ ಇವರ ಪಠ್ಯವನ್ನು ನಾವೆಲ್ಲ ಓದಬೇಕಾಗಿದೆ. ಕನ್ನಡದ ಶ್ರೇಷ್ಠ ವಾಕ್ಯವಿಜ್ಞಾನಿ, ಭಾಷಾವಿಜ್ಞಾನಿ ಶಂಕರ ಭಟ್ಟರು ಕನ್ನಡಕ್ಕೆ ಒಂದು ಸ್ಟೇಟಸ್ಸನ್ನ ಕಟ್ಟಿಕೊಡುತ್ತಿರುವಾಗ ನಾವೆಲ್ಲ ಕೈಜೋಡಿಸದೆ ಹೋದರೆ ಕನ್ನಡವು ಇನ್ನೆರಡು ದಿನಗಳಲ್ಲಿ 'ಕನ್ನಡ್' ಆಗುವುದಕ್ಕೆ ನಾವೂ ಕಾರಣರಾದೇವು.

**ರಾಮಲಿಂಗಪ್ಪ ಟಿ. ಬೇಗೂರು**
ಕನ್ನಡ ಉಪನ್ಯಾಸಕ, ಸರ್ಕಾರಿ ಬಾಲಕರ ಕಾಲೇಜು
ಕೋಲಾರ - ೫೬೩. ೧೦೧.

*(೩೯ನೇ ಪುಟದಿಂದ)*

೫. ಈ ಗಿರಿಶ್ರೇಣಿಯ ಶಿಖರಕ್ಕೆ ತಲುಪುವ ಹಾದಿಯಲ್ಲಿ ಮುಳ್ಳೋಡಿ, ನಸೆಹಳ್ಳ, ತೊಳಲಿ ಎಂಬ ಪುಟ್ಟ ಗ್ರಾಮಗಳಿವೆ. ಆಧುನಿಕ ಸೌಲಭ್ಯಗಳಿಲ್ಲದಿದ್ದರೂ ಇಲ್ಲಿನ ಗಿರಿಜನರು ಬದುಕಲು ಹೋರಾಡುತ್ತಿದ್ದಾರೆ.

೬. ಮುಂಬಯಿ ಉದ್ಯಮಪತಿಯೊಬ್ಬರು 'ತೊಳಲಿ' ಎಂಬ ಪುಟ್ಟ ಗ್ರಾಮವನ್ನು ಖರೀದಿಸಿದ್ದಾರೆ. ೨೦೦ ಕೋಟಿ ರೂ.ಗಳ ಬೃಹತ್ ಯೋಜನೆಯ ಅಡಿಯಲ್ಲಿ ಈಗ ಬಾಳಗಲ್‌ನಿಂದ ಆರಂಭಿಸಿ ಮಳ್ಳೋಡಿವರೆಗೆ ಜೀಪುರಸ್ತೆ ನಿರ್ಮಾಣವಾಗಿದೆ. ವಿದ್ಯುತ್ ಕಂಬ ನೆಡುತ್ತಿದ್ದಾರೆ.

ಮೇಲಿನ ಸಂಗತಿಗಳನ್ನು ಗಮನಿಸಿದರೆ (ಏಪ್ರಿಲ್ ೨೦೦೦ದ ಮಾಹಿತಿಯಿದು) ನಿಸರ್ಗ ಸಂರಕ್ಷಣೆಯ ವಿಷಯದಲ್ಲಿ ಬದಲಾಗಲೇಬೇಕಾದ ಜನತೆಯ ಮನೋಧರ್ಮ ಮತ್ತು ಸರ್ಕಾರದ ಕಾರ್ಯನೀತಿಗಳೇನೆಂಬುದು ಮನದಟ್ಟಾಗುತ್ತದೆ. ಮೇಲಾಗಿ, ಸ್ವಯಂ ಶಿಕ್ಷಣ, ಸ್ವಯಂ ಉದ್ಯೋಗ, ಸ್ವಯಂ ಆಡಳಿತದ ಮಾದರಿಯಲ್ಲಿ 'ಸ್ವಯಂ ಸಂವಿಧಾನ'ವೊಂದರ ಪ್ರತಿಪಾದನೆಯೂ ಬೇಕಾಗಿದೆ. ಆಗ ಮಾತ್ರ ಎಚ್ಚೆತ್ತ ಪೌರ, ಭಾರತೀಯ ಪ್ರಜೆ ಮೂಡಿಬರುತ್ತಾನೆ.

**(ಕಳೆದ ಜೂನ್ ತಿಂಗಳಲ್ಲಿ ಶಿವಮೊಗ್ಗೆಯಲ್ಲಿ ನಡೆದ ಒಂದು ವಿಚಾರ ಸಂಕಿರಣದಲ್ಲಿ ಮಂಡಿಸಲಾದ ಪ್ರಬಂಧ ಇದು)**

**ಎ. ಚಂದ್ರಶೇಖರ ನಂಗಲಿ**
೩೨೮, ಪಿ.ಸಿ. ಬಡಾವಣೆ, ಕೋಲಾರ - ೫೬೩೧೦೧

# ಪಂಡಿತ ಚಾತುರ್ಯಕಾ ಮತ್ತು ಮೊಸಳೆ

**ಶಾಂತಾರಾಮ ಸೋಮಯಾಜಿ**

ಬಹಳ ವರ್ಷಗಳ ಹಿಂದೆ ಉಜ್ಜಯಿನಿ ನಗರದಲ್ಲಿ ಗೌರವದಿಂದ ಜೀವನ ಮಾಡಿಕೊಂಡಿದ್ದ ಪಂಡಿತ ಚಾತುರ್ಯಕಾ ಎಂಬ ಮಾಂತ್ರಿಕರು ದೇಶದ ಒಳಗೂ ಹೊರಗೂ ತಂಬಾ ಹೆಸರು ಮಾಡಿದ್ದರು. ಚತುರ್ವೇದಗಳನ್ನು ಘನಪಾಠ ಮಾಡಿಕೊಂಡ ಪಂಡಿತರಿಗೆ ತಿಳಿಯದ ಸಂಗತಿಗಳಾಗಲೀ, ಗೊತ್ತಿರದ ವಿದ್ಯೆಗಳಾಗಲೀ, ಅರ್ಥವಾಗದ ಘಟನೆಗಳಾಗಲೀ ಏನೂ ಇಲ್ಲ ಎಂಬುದು ಸಾರ್ವತ್ರಿಕ ಅಭಿಪ್ರಾಯ. ಧರ್ಮಗ್ರಂಥಗಳನ್ನೆಲ್ಲಾ ಅಧ್ಯಯನ ಮಾಡಿ, ಅವುಗಳ ತಿರುಳನ್ನೆಲ್ಲಾ ಅನ್ನದಂತೆ ಅರಗಿಸಿಕೊಂಡು, ದೈವಿಕ ಶಕ್ತಿಯನ್ನು ತಮ್ಮ ಕೈ ಮುಷ್ಟಿಯೊಳಗೆ ಬಚ್ಚಿಟ್ಟುಕೊಂಡ ಪಂಡಿತರು ಚಿಕ್ಕವರಿದ್ದಾಗ, ತುಂಬು ಯೌವನದಲ್ಲಿ, ಒಮ್ಮೆ ನದಿ ನೀರಿನ ಪ್ರವಾಹದಲ್ಲಿ ಆಕಸ್ಮಿಕವಾಗಿ ಮುಳುಗಿ ಸಾಯುವುದರಲ್ಲಿದ್ದರು.

ಆಗ ಬೆಸ್ತ ಕುಟುಂಬದ ಒಂಟಿಕಣ್ಣಿನ ಕರಿ ಹೆಣ್ಣು ನಾಯಿಯೊಂದು ಯುವಕ ಪಂಡಿತರ ಲಂಗೋಟಿಯ ಮೇಲೆ ಸೊಂಟಕ್ಕೆ ಅಡ್ಡ ಕಟ್ಟಿದ ಶಾಲಿನ ತುದಿಯನ್ನು ಕಚ್ಚಿ ಹಿಡಿದು, ನೀರಿಂದೆಳೆದುಕೊಂಡು, ದಡದ ಕೆಸರು ಮಣ್ಣಿನ ಜಾಗಕ್ಕೆ ತಂದುಬಿಟ್ಟಿತು. ಮೈಯೊಳಗೆ ಹೆಂಡದಂತೆ ನೀರು ತುಂಬಿಸಿಕೊಂಡು ಸತ್ತಂತೆ ಕಾಣುತ್ತಿದ್ದ ದೇಹದ ಸುತ್ತ ಜನ ಮುತ್ತಿಗೆ ಹಾಕಿದರು.

ಸ್ವಲ್ಪ ಸಮಯದ ನಂತರ ಮೈಗೆ ಬಿಸಿಲು ಬಡಿದು, ಬಾಯಿಯಿಂದ ನೀರು ಕಾರಿದ ಯುವ ಪಂಡಿತರು, ಕೆಂಪಗೆ ಉರಿಯುತ್ತಿದ್ದ ಕಣ್ಣು ತೆರೆದು ವಿಚಿತ್ರವಾಗಿ ಸುತ್ತಲೂ ನೋಡಿದರು.

ಬೆನ್ನಿನ ಚರ್ಮಕ್ಕೆ ಒತ್ತಿಕೊಂಡಿದ್ದ ಕೆಸರಿನಿಂದ ಮತ್ತು ಮುಖ, ಮೈಗೆ ಅಂಟಿಕೊಂಡ ಕಪ್ಪು ನೀರಿನಿಂದ ಅಸಹ್ಯಪಟ್ಟುಕೊಳ್ಳುತ್ತಾ ಅವರು ಕೆಸರ ಪರದೆಯೊಳಗಿಂದ ಆಚೀಚೆ ದೃಷ್ಟಿ ಹರಿಸಿದಾಗ ಖಾಲಿ ಎದೆಯನ್ನು ಮೇಲೆ ಮಾಡಿ ನಿಂತುಕೊಂಡು ತನ್ನನ್ನೇ ನೋಡುತ್ತಿದ್ದ ಐದಾರು ಬೆಸ್ತರ ಹೆಂಗಸರನ್ನು ನೋಡಿದವರೇ ನಾಚಿಕೆ, ಭಯ ಪಡುತ್ತಾ ಎದ್ದು ಕುಳಿತರು.

ಏನಾಯಿತು ನನಗೆ, ಎಲ್ಲಿದ್ದೇನೆ ನಾನು, ಎಂದು ತನ್ನಲ್ಲೇ ಪ್ರಶ್ನೆ ಹಾಕಿದರು. ಕಾಲಿನಡಿಯ ನೆಲದಿಂದೆದ್ದ ಮುಳ್ಳಿನ ಪೊದೆಗಳಾಚೆ ನೆರೆ ನೀರಿನ ನದಿ, ಗುಂಪಾಗಿ ದಾಳಿಯಿಡುವ ನೊಣ, ಹಾತೆಗಳು, ಕೆಟ್ಟ ವಾಸನೆ, ಹರಿವ ನೀರಿನ ಉಸಿರು, ನಾಯಿಗಳ ಬೊಗಳು, ಮೈಗೆ ಬರೆ ಹಾಕುವ ಬಿಸಿಲು, ಭೀತಿಯಿಂದ ನೋಡುವ ಕಣ್ಣುಗಳು... ಎಲ್ಲಿದ್ದೇನೆ ನಾನೀಗ ?

ಕೆಲ ನಿಮಿಷಗಳ ಹಿಂದೆ ನಡೆದ ಘಟನೆ ಕೂಡಲೇ ಪಂಡಿತರ ಅರಿವಿಗೆ ಬಂತು. ತಾವರೆ ಬಳ್ಳಿಗಳೊಳಗೆ ತನ್ನ ಕಾಲು ಸಿಕ್ಕಿಹಾಕಿಕೊಂಡದ್ದು, ನೀರಿನೊಳಗೆ ಬೆನ್ನು ಹೂತುಹೋದದ್ದು, ಗಂಟಲೊಳಗಿನ ನೀರು ಬಾಯಿ ಮುಚ್ಚಿಸಿದ್ದು, ಮುಳುಗಿ ಮುಳುಗಿ ಹೋಗುತ್ತಿದ್ದವನನ್ನು ಕೊಳಕು ನಾಯಿಯೊಂದು ಎಳೆದುಕೊಂಡು ಈಚೆಗೆ ತಂದುಹಾಕಿದ್ದು, ನಾನೀಗ ಸತ್ತುಹೋಗುತ್ತಿದ್ದೇನೆಂಬ ಅರಿವು ಬಂದದ್ದು.., ಎಲ್ಲಾ, ಹೊಟ್ಟೆಯೊಳಗಿನ ನೀರಿನೊಂದಿಗೆ ಹೊರಗೆ ಬಂತು.

ಸತ್ತುಹೋಗುತ್ತಿದ್ದ ನಾನು ಬದುಕಿ ಬಂದಿದ್ದೇನೆಂಬ ಅರಿವು ಮೂಡಿತು. ಕಣ್ಣು ಒದ್ದೆಯಾಗುತ್ತಿತ್ತು.

ಆದರೆ ಆ ಕೂಡಲೇ ಅವರ ಮನಸ್ಸು, ಸಾವನ್ನು ನಿರೀಕ್ಷೆ ಮಾಡುವವರಂತೆ ಮುದುಡಿಹೋಯ್ತು. ನಾಯಿಯ - ಎಂದರೆ ಒಂದು ಕೀಳು ಪ್ರಾಣಿಯ ಎಂಜಲಿಂದ - ನನ್ನ ದೇಹ ಸಂಪೂರ್ಣ ಮಲಿನವಾಯಿತಲ್ಲಾ ಎಂದು ದುಃಖ ಉಕ್ಕಿ ಬಂತು. ಕೊಳಕಾಗಿ ಅಸಹ್ಯವೆನಿಸುವ ತನ್ನ ದೇಹದ ಮೇಲೆ ತಿರಸ್ಕಾರ ಬಂತು.

ಮರುನಿಮಿಷ ಕೆಸರು ಮಣ್ಣನ್ನು ಹಿಂಡಿ ಸೆಳೆದ ಮಂತ್ರದ ನೀರನ್ನು ತಮ್ಮ ಬೆರಳ ತುದಿಯಿಂದ ಹರಿಯಲು ಬಿಟ್ಟು, ತಮ್ಮ ಅಂತರಂಗವನ್ನು ಬರಿದುಮಾಡಿ ನೋಡಿದಾಗ, ಮಹಾದೇವ ನಾರಾಯಣನೇ ಈ ನಾಯಿಯ ರೂಪದಲ್ಲಿ ಬಂದು ತನ್ನನ್ನು ಬದುಕಿಸಿದ್ದೆಂದು ಪಂಡಿತರಿಗೆ ಗೊತ್ತಾಯಿತು. ಆಗ ಬೆಸ್ತರ ಹೆಂಗಸೊಬ್ಬಳು ಹೇಳಿದಳು - ''ಒಂದು ನಾಯಿಯಿಂದಾಗಿ ನೀವೀಗ ಬದುಕಿ ಉಳಿದಿರಿ.''

ಆ ಮಾತು ತೀರಾ ಕೆಟ್ಟದಾಗಿ ಪಂಡಿತರಿಗೆ ಕೇಳಿಸಿತು. ಅವಮಾನ ತಿನ್ನಬೇಕಾಗಿ ಬಂದವರಂತೆ ತಮ್ಮ ಕಂಠವನ್ನು ದೊಡ್ಡದು ಮಾಡಿ ಅವರು ಹೇಳಿದರು -

''ನಾಯಿ ಅಂತ ಹೇಳ್ಬೇಡ. ನಾಯಿಯಲ್ಲ ಅದು. ನನ್ನನ್ನು ಬದುಕಿಸಿದ್ದು ನಾರಾಯಣನೇ.''

ತನ್ನ ಕೈ, ಮುಖ, ಮೈಯಿಂದೆಲ್ಲಾ ಬೆವರು ಸುರಿಸಿಕೊಂಡು, ಕೆಟ್ಟ ಶ್ವಾಸ ಬಿಡುತ್ತಾ ನಿಂತಿದ್ದ ಆ ಹೆಂಗಸು, ನಿಂತಲ್ಲಿಂದ ಒಂದು ಹೆಜ್ಜೆ ಹಿಂದೆ ಸರಿದು, ನೀವು ಹೇಳಿದ್ದು ನಾನು ನಂಬುವವಳಲ್ಲ ಎಂಬಂತೆ ಮುಖ ಮಾಡುತ್ತಾ ಹೇಳಿದಳು - ''ಅಲ್ಲ ಅಯ್ಯಾ ಅಲ್ಲ, ಗಂಗಾವತಿದ್ದೇ ನಾಯಿ ಅದು.''



''ಯಾರು ಗಂಗಾವತಿ ?'' ಎಂದು ಕೇಳಿದ ಯುವಕ ಪಂಡಿತರು ಸುತ್ತಲೂ ಕಣ್ಣು ಹಾಯಿಸಿದಾಗ, ಇನ್ನೂ ಎರಡು ವಾರ ತುಂಬದ ಗಂಡು ಮಗುವನ್ನು ಎದೆಗೆ ಒತ್ತಿ ಹಿಡಿದ ಯುವತಿಯೊಬ್ಬಳು ಗುಂಪಿನಿಂದ ಈಚೆ ಬಂದು, 'ನಾನೇ ಗಂಗಾವತಿ' ಎಂಬಂತೆ ಎದೆಯೆತ್ತಿ ಹಿಡಿದು ಅವರ ಮುಂದೆ ನಿಂತಳು.

ನೆಲದ ಮೈಬಣ್ಣದ, ಬೋಳುತಲೆಯ ಮಗುವನ್ನು,

ಕಿರೀಟದಂತೆ ಕೊಬ್ಬಿನಿಂತ ತಲೆಕೂದಲಿನ ತಾಯಿಯನ್ನು, ಹರಿತ ಕಣ್ಣುಗಳಿಂದಳೆದ ಪಂಡಿತರು –

''ನಿಂದಾ ಅದು ನಾಯಿ'', ಎಂದು ಗಂಭೀರವಾಗಿ ವಿಚಾರಿಸಿದರು.

ಪಂಡಿತರು ತನ್ನ ನಾಯಿಯ ಬಗ್ಗೆ ವಿಚಾರಿಸಿದ್ದಕ್ಕೆ ಹೆಮ್ಮೆ ಪಡುತ್ತಾ ಗಂಗಾವತಿ ಬಾಯಿ ತೆರೆದು ನಕ್ಕಳು. ಮತ್ತು 'ಹೌದು' ಎಂಬಂತೆ ತಲೆಯಾಡಿಸಿದಳು. ಆಗ ಮಗುವಿನ ನಿದ್ರಾಭಂಗವಾಗಿ ಅದು ಸಣ್ಣ ದನಿಯಲ್ಲಿ ಅಳತೊಡಗಿತು.

ಮಗುವಿನ ತುಟಿಗಳನ್ನು ತನ್ನೆದೆಗೆ ಇನ್ನಷ್ಟು ಒತ್ತಿ ಹಿಡಿದಳು, ಗಂಗಾವತಿ.

''ಅದಕ್ಕೆ ಒಂಟಿ ಕಣ್ಣಲ್ವಾ ? ದನ ತಿವಿದದ್ದಲ್ವಾ ?'' ಎಂದು ಪಂಡಿತರು ಆ ನಾಯಿಯ ಬಗ್ಗೆ ಪ್ರಶ್ನೆ ಹಾಕಿದಾಗ, ಇವರಿಗದು ಹೇಗೆ ಗೊತ್ತಾಯಿತೆಂಬಂತೆ ಅಚ್ಚರಿಪಡುತ್ತಾ ಬೆಸ್ತ ಹೆಂಗಸರು ಪಂಡಿತರನ್ನೇ ದಿಟ್ಟಿಸಿ ನೋಡಿದರು.

ಪಂಡಿತರು ಮುಂದುವರಿಸಿದರು - ''ನೀವೇ ಹೋಗಿ ನೋಡಿ, ಏನಾಗಿದೆ ಅದಕ್ಕೆ ಅಂತ.''

ಅಷ್ಟು ಹೇಳಿ ಎದ್ದುನಿಂತ ಪಂಡಿತರು, ಗುಂಪನ್ನೇ ನೋಡುತ್ತಾ ಮಂದಹಾಸ ಬೀರುತ್ತಾ ಮುಂದುವರಿಸಿದರು -''ಮತ್ತೆ ಬಂದು ಹೇಳಿ ನನಗೆ, ಅದು ನಾಯಿಯಾ ಅಥವಾ ನಾರಾಯಣನಾ ಅಂತ.''

ಮೆದು ನಡಿಗೆಯ ಗಂಗಾವತಿಯನ್ನು ಹಿಂದೆ ಹಾಕಿ, ಬಯಲಾಟ ನೋಡ ಹೊರಟವರಂತೆ ಸಂಭ್ರಮಪಡುತ್ತಾ ಆ ಗುಂಪು, ಗಂಗಾವತಿಯ ಗುಡಿಸಲಿನೆದುರಿನ ಅಂಗಳಕ್ಕೆ ಕಾಲಿಡುತ್ತಿರುವಂತೆ, ಅಲ್ಲೇ, ಬಾಯಿಂದ ಜೊಲ್ಲು ಸುರಿಸಿಕೊಂಡು, ಮುಚ್ಚಿಹೋದ ಒಂದು ಕಣ್ಣಿನಿಂದ ನೀರಿಳಿಸಿಕೊಂಡು, ಮುಂದಿನ ಒಂದು ಕಾಲನ್ನು ಕಟ್ಟಿಗೆಯಂತೆ ಮೇಲೆ ಮಾಡಿಕೊಂಡು, ಬಾಲವನ್ನು ಹಿಂದಿನ ಕಾಲುಗಳೆಡೆ ಸಿಕ್ಕಿಸಿಕೊಂಡು, ಗಂಗಾವತಿಯ ಪ್ರೀತಿಯ ನಾಯಿ ಸತ್ತುಬಿದ್ದಿತ್ತು.

★ ★ ★

ಹೀಗೆ ಪಂಡಿತ ಚಾತುರ್ಯಕಾರ ಮಾಂತ್ರಿಕ ಶಕ್ತಿಯ ಪ್ರದರ್ಶನವಾದದ್ದೇ ತಡ, ಅವರ ಹೆಸರು, ರಾತ್ರೆ ಹಗಲಾಗುವುದರೊಳಗಾಗಿ ನಾಡಿನ ತುಂಬಾ ಹರಡಿತು.

ಅನಂತರ ಪಂಡಿತರು ನಡೆಸದ ಪವಾಡವೇ ಇರಲಿಲ್ಲ.

ಸಮಾಜಕ್ಕೆ ಕೆಡಕು ಮಾಡುತ್ತಾ ದೊಡ್ಡಸ್ತಿಕೆಯಿಂದ ಬಾಳಿಕೊಂಡು ಬಂದವರನ್ನು ರಕ್ತ ಕಾರಿ ಸಾಯುವಂತೆ ಮಾಡಿದ್ದು ಅಥವಾ ಅವರ ದೇಹದ ಒಳಭಾಗವನ್ನೆಲ್ಲಾ ಸಂಪೂರ್ಣ ಹಿಂಡಿ ಹಿಂಡಿ ನಿರ್ಜೀವವಾಗಿಸಿದ್ದು, ಹಾವು ಕಡಿದು ಆಗಷ್ಟೇ ಸತ್ತುಹೋದ ಆಕಳೊಂದನ್ನು ಬದುಕಿಸಿದ್ದು, ಊಟಕ್ಕೆ ಕೂತ ಅನ್ಯಧರ್ಮದ ಹಿರಿಯ ಗುರುಗಳೊಬ್ಬರ ಎಲೆಯಲ್ಲಿ ಸೆಗಣಿ ಮುದ್ದೆ ಬೀಳಿಸಿದ್ದು, ಸಮಾಜಕ್ಕೇ ಕೆಟ್ಟ ಪ್ರಶ್ನೆ ಹಾಕಿದವಳಂತೆ ಜೀವನ ದೂಡುತ್ತಿದ್ದ ಚಂದದ ವಿಧವೆಯೊಬ್ಬಳ ಮನೆಯೊಳಗೆ ಭೂತವೊಂದನ್ನು ಸೇರಿಸಿದ್ದು, ಸಂಗೀತ ಶಿರೋಮಣಿಗಳೊಬ್ಬರ ಮನೆಯೊಳಗೆ ಸೇರಿಕೊಂಡು ಉಪದ್ರವ ಕೊಡುತ್ತಿದ್ದ ಪ್ರೇತವನ್ನು ಊರಿಂದಲೇ ಹೊರಗೆ ಓಡಿಸಿದ್ದು, ಸತ್ತ ಕುದುರೆಯೊಂದರ ದೇಹದೊಳಗೆ ಸೇರಿಕೊಂಡು ಊರನ್ನು ಮುತ್ತಿಗೆ ಹಾಕಿದ ಶತ್ರು ಗುಂಪಿನಿಂದ ಪಾರಾದದ್ದು, ಸುಮಾರಷ್ಟು ಬಂಜೆ ಹೆಂಗಸರಿಗೆ ಚಂದದ ಮಕ್ಕಳನ್ನು ಕರುಣಿಸಿದ್ದು, ರಾತ್ರೆ ಹುಲಿಯಾಕಾರದಲ್ಲಿ ಬಂದು ದಂಗೆಕೋರರ ಯಜಮಾನನನ್ನು ಸೀಳಿ ಸೀಳಿ ಹಾಕಿದ್ದು, ಸುಮಾರು ಹದಿನಾರು ವರ್ಷಕ್ಕೇನೇ ಸತ್ತ ಬೆಸ್ತ ಕನ್ಯೆಯೊಬ್ಬಳನ್ನು ಯಕ್ಷಿಣಿಯಾಗಿ ಮಾಡಿ ತನ್ನ ವಶಮಾಡಿಕೊಂಡದ್ದು, ತನ್ನ ಮೂರು ಮಂದಿ ಹೆಂಡತಿಯರ ಮನೆಯಲ್ಲಿ ಒಮ್ಮೆಗೇ ಪ್ರತ್ಯಕ್ಷವಾದದ್ದು...!

ಇಂತಹ ಸಾವಿರಾರು ಮಾಂತ್ರಿಕ ಅದ್ಭುತಗಳಲ್ಲಿ ಅವರಿಗೆ ಸರಿಸಮನಾದವರು ಇಡೀ ದೇಶದಲ್ಲಿ ಯಾರೂ ಇರಲಿಲ್ಲ.

★ ★ ★

ನಾಡಿನ ಒಂದೊಂದು ದಿಕ್ಕಿನಲ್ಲೂ ಒಂದೊಂದು ಸಂಸಾರವನ್ನು ಸಂಪಾದಿಸಿದ್ದ ಪಂಡಿತ ಚಾತುರ್ಯಕಾರಿಗೆ ಪ್ರಾಯ ಸರಿದಂತೆ, ಇಳಿವಯಸ್ಸಲ್ಲಿ ತಮ್ಮ ಬಾಳಿನ ಮೇಲೇನೇ ವೈರಾಗ್ಯ ಬರಹತ್ತಿತು. ತಾವು ಏರಿನಿಂತ ಸಮಾಜದ ಮೆಟ್ಟಿಲುಗಳು ತಮ್ಮ ಕಣ್ಣ ಮುಂದೆಯೇ ಇವತ್ತೋ ನಾಳೆಯೋ ಕುಸಿದು ಬೀಳುವಂತೆನಿಸಿತು. ತಮ್ಮ



ಜೀವಮಾನದುದ್ದಕ್ಕೂ ಸ್ಫುಟಗೊಂಡ ಪವಾಡಸದೃಶ ಘಟನೆಗಳನ್ನೆಲ್ಲಾ ತಾತ್ವಿಕ ವಿಮರ್ಶೆ ಮಾಡುತ್ತಾ ಅವರು ದೀನರಾಗಿ ಹಲುಬತೊಡಗಿದರು. ಪರರ ದೃಷ್ಟಿಗೆ ತಾನು ಸಾಧಿಸಿದ್ದು, ಸಾಧಿಸಿ ತೋರಿಸಿದ್ದು ಅನನ್ಯವಾಗಿ ಕಂಡುಬಂದರೂ, ತನ್ನ ಹೆಸರು ನಾಡಿನಲ್ಲೂ, ಹೊರನಾಡಿನಲ್ಲೂ ಎಲ್ಲಾ ಕಡೆ ಪ್ರಸಿದ್ಧಗೊಂಡಿದ್ದರೂ, ತನ್ನಲ್ಲಿ ಎಂದೂ ಅಳಿಸಿಹೋಗಲಾಗದ ಏನೋ ಒಂದು ಮಹತ್ವದ ಕುಂದಿದೆ ಎಂದವರಿಗೆ ಅನಿಸತೊಡಗಿತು. ಹೊಲಸು ಮುಟ್ಟಿ ಬಂದವನು ತನ್ನ ಕೈಗಳೆರಡನ್ನೂ ಪದೇ ಪದೇ ತೊಳೆದುಕೊಂಡೇ ಇರುವಂತೆ, ತೊಳೆದಷ್ಟು ತೊಳೆದಷ್ಟು ಆ ಹೊಲಸು ಕಾಣದ ಮೂಲೆಗಳಲ್ಲೆಲ್ಲೋ ಇನ್ನೂ ಉಳಿದಿರಬಹುದು ಎಂದು ಸಂಶಯಪಟ್ಟುಕೊಳ್ಳುವಂತೆ, ಪಂಡಿತ ಚಾತುರ್ಯಕಾರು ತಮ್ಮ ಮನಃಶಾಂತಿ ಕಳೆದುಕೊಂಡು ಕೊರಗತೊಡಗಿದರು.

ತಾನು ಸಣ್ಣವನಿದ್ದಾಗ ನೀರಲ್ಲಿ ಬಿದ್ದು ಮುಳುಗಿಹೋಗುವುದರಲ್ಲಿದ್ದ ಆ ಪ್ರಸಂಗದ ನೆನಪು ಕಾಡಹತ್ತಿತು. ಆಗ ಆ ಹೊಲಸು ಹೆಣ್ಣು ನಾಯಿ ತನ್ನನ್ನು ಬದುಕಿಸಿದ್ದೇಕೆ ? ಅದೂ ಬೆಸ್ತರ ಮನೆಯ ಹಿಂದಿನ ಮಲ, ಹೊಲಸನ್ನು ನೆಕ್ಕಿ ತಿಂದು, ಯಾರ್‍ಯಾರ ಕೈಯಲ್ಲಿ ಕಲ್ಲಿನೇಟು ತಿಂದುಕೊಂಡು ಹೀನವಾಗಿ ಬದುಕಿಕೊಂಡಿದ್ದ ನಾಯಿ ? ಯಾಕೆ ? ಏನು ಅದರರ್ಥ?

ಈಗಲೂ ಹಗಲೂ ರಾತ್ರೆ ನನ್ನ ಹಿಂದೆ ಬಾಲದಂತೆ ಅಂಟಿಕೊಂಡು ಬರುವ ಯಕ್ಷಿಣಿ ಬೆಸ್ತರ ಕನ್ಯೆಯಾಗಬೇಕಿತ್ತೇಕೆ ? ಕುಡುಕ ತಂದೆ ಮತ್ತು ವೇಶ್ಯೆ ತಾಯಿಯ ಮಗಳು ನನ್ನ ದಾಸಿಯಾಗಬೇಕಿತ್ತೇಕೆ ? ಹದಿನೆಂಟರಿಂದ ಐವತ್ನಾಲ್ಕು ವರ್ಷದವರೆಗಿನ ಬೇರೆ ಬೇರೆ ಪ್ರಾಯದ ಹಲ ಹೆಂಡತಿಯರಲ್ಲಿ ಯಾರೂ ನನಗೊಂದು ಸುಪುತ್ರನನ್ನು ಕೊಡಲಾರದೆ ಹೋದದ್ದಲ್ಲದೆ, ವಿರೂಪನಗರದ ಮಾರ್ಗವಾಗಿ ಒಂದು ರಾತ್ರೆ, ನಾನು ನಡೆದುಕೊಂಡು ಬರುತ್ತಿದ್ದಾಗ, ಆ ರಾತ್ರೆ ಉಳಕೊಳ್ಳಬೇಕಾಗಿ ಬಂದ ವೈಶ್ಯನೊಬ್ಬನ ಮನೆಯ ಒಡತಿ - ''ನನಗೆ ನಿಮ್ಮ ಮಗು ಬೇಕು'' ಎಂದು ಬೇಡಿಕೊಳ್ಳುತ್ತಾ ನನ್ನನ್ನು ಕೂಡಿಕೊಂಡದ್ದಕ್ಕೆ, ಆಗ ಹುಟ್ಟಿದ ಮಗು ನನ್ನದಾಗದೆ ಹೋದುದಕ್ಕೇನರ್ಥ ? ನಾನು ಈವರೆಗೆ ಮೆರೆದ ಬಾಳು ಒಂದು ಬೀದಿ ಕಸಕ್ಕಿಂತಲೂ ಕೀಳಾಗಿದೆ ಎಂಬುದಲ್ಲದೆ ಬೇರೇನು ಅರ್ಥ ಬರಲು ಸಾಧ್ಯ ? ದೇವನ ಕಣ್ಣಲ್ಲಿ ನಾನೊಂದು ಕ್ಷುಲ್ಲಕ ವಸ್ತುವಿಗಿಂತಲೂ ಕ್ಷುಲ್ಲಕನಾದೆನಾ ? ಬೆಳಕಿನ ಬಣ್ಣದ ತಾವರೆಯ ಬುಡದ ಸುತ್ತ ಕೆಸರು, ಕೊಳಕು ಮಣ್ಣಿದೆ ಎಂದೇಕೆ ನನಗೆ ಗೋಚರಿಸಲಿಲ್ಲ ? ಚಿಗುರೊಡೆದ ಮಾವಿನ ಮರದ ಬುಡದ ತುಂಬಾ ಕೊಳೆತ ಎಲೆ, ಹಣ್ಣುಗಳಿವೆ ಎಂಬುದು ನನ್ನ ದೃಷ್ಟಿಗೆ ಯಾಕೆ ಬೀಳಲಿಲ್ಲ ?

ತನ್ನ ಬಾಳಿನ ಮೇಲೆ, ತನ್ನ ಮೇಲೆ, ಅನಂತ ಜಿಗುಪ್ಸೆ ಪಟ್ಟುಕೊಂಡ ಮಾಂತ್ರಿಕ ಪಂಡಿತರು ವೈರಾಗ್ಯಕ್ಕಂಟಿಕೊಂಡು ಉಜ್ಜಯಿನಿಯ ತಮ್ಮ ಮನೆ ತೊರೆದರು. ಅರೆ ಹುಚ್ಚ ಭಿಕಾರಿಯಂತೆ ಬೀದಿ ಬೀದಿ ಅಲೆಯಲು ಶುರುಮಾಡಿದರು.

★ ★ ★



ಪಂಡಿತ ಚಾತುರ್ಯಕಾರು ಹೀಗೆ ಒಮ್ಮೆ ಗೋಪಾಲಕನೊಬ್ಬನ ಮನೆಯ ಸಮೀಪದಲ್ಲಿದ್ದ ಹುಳಿ ಮರದ ಕಲ್ಲಿನ ಕಟ್ಟೆಯ ಮೇಲೆ ಕುಳಿತಿದ್ದಾಗ ಮರದ ಮೇಲೆ ಹಾರಿ ಬಂದು ಕುಳಿತ ಕಾಗೆಯೊಂದು ತನ್ನ ಕೊಕ್ಕಿನ ತುದಿಯಲ್ಲಿ ನೇತಾಡುತ್ತಿದ್ದ ಕಾಡು ಹಂದಿಯ ಮಾಂಸದ ತುಂಡನ್ನು ಅವರ ಹೆಗಲಿನ ಮೇಲೆ ಬೀಳಿಸಿತು. ಅದನ್ನು ಕಂಡವರೇ ಇನ್ನಷ್ಟು ಅಸಹ್ಯ ಪಡುತ್ತಾ ಅಲ್ಲಿಂದೆದ್ದು ಪಶ್ಚಿಮದಿಕ್ಕಿನೆಡೆ ತೆವಳುವ ಕಾಲುಹಾದಿಯಲ್ಲಿ ಹೆಜ್ಜೆ ಹಾಕ ತೊಡಗಿದರು.

ಅವರನ್ನು ನೋಡಿದವನೇ ನಡುಪ್ರಾಯದ ಗೋಪಾಲಕನು ಅವರ ಹಿಂದಿನಿಂದ ವೇಗವಾಗಿ ಬಂದು ಕಾಲು ಹಾದಿಯಾಚೆ ಬೆನ್ನು ಬಾಗಿಸಿ ನಿಂತುಕೊಂಡು ತಲೆಯ ಮುಂಡಾಸು ಕಿತ್ತು ತನ್ನೆರಡು ಕೈಗಳಲ್ಲಿ ಅದನ್ನು ಒತ್ತಿ ಹಿಡಿದು ದೀನನಂತೆ ಹೇಳಿದ - ''ಅಯ್ಯ ಅವರೇ, ಆ ಕಡೆಗೆ ಹೋಗ್ಬೇಡಿ.''

''ಯಾಕೆ, ಏನಾಗ್ತದೆ ಹೋದ್ರೆ, ನೀನ್ಯಾರು ಹೇಳುವವ,'' ಎಂದೆಲ್ಲಾ ಪ್ರಶ್ನೆ ಹಾಕುವಂತೆ ಪಂಡಿತರು ಅವನನ್ನೇ ನೋಡಿದರು. ಅದನ್ನು ಅರ್ಥಮಾಡಿಕೊಂಡವನಂತೆ ಗೋಪಾಲಕ ಇನ್ನಷ್ಟು ಮುದುಡಿಕೊಂಡು ಹೇಳಿದ -

''ಅಲ್ಲಿ ಮೂರು ನಾಲ್ಕು ನಾಯಿಗಳು, ಕಾಡು ಹಂದಿಯೊಂದನ್ನು ಕಚ್ಚಿ ಕಚ್ಚಿ ತಿನ್ತಾ ಇವೆ.''

ಅಯ್ಯೋ, ನಾನು ಹೋದಲ್ಲೆಲ್ಲಾ ದೇಹ - ಮನಸ್ಸು ಪೂರ್ತಿ ಅಸಹ್ಯಪಡುವಂಥದ್ದೇ ನಡೆಯುತ್ತಾ ಇದೆಯಲ್ಲ ಎಂದು ಬೇಸರ ತುಂಬಿಕೊಂಡ ಪಂಡಿತರು ತಮ್ಮ ಕಣ್ಣಲ್ಲಿ ನೀರು ತುಂಬಿಕೊಂಡು ಅಳತೊಡಗಿದರು.

ಪಂಡಿತರ ಅಳುಮೋರೆ ನೋಡಿದ ಗೋಪಾಲಕ ನಾನೇನಾದರೂ ತಪ್ಪು ಹೇಳಿಬಿಟ್ಟೆನೋ ಎಂದು ಬೇಜಾರು ಮಾಡಿಕೊಳ್ಳುತ್ತಾ ಮುಂದೇನು ಮಾಡಬೇಕೆಂದರಿಯದೆ ಆಚೀಚೆ ನೋಡುತ್ತಿರುವಂತೆ, ಪಂಡಿತರು ತಮ್ಮಲ್ಲೇ ಎಂಬಂತೆ ಹೇಳಿದರು - ''ಓ ನನ್ನ ಜೀವನವೇ, ಎಷ್ಟು ಕೊಳಕು ತುಂಬಿಕೊಂಡಿದೆ ನನ್ನ ಸುತ್ತಲೂ.''

ಪಂಡಿತರ ಮಾತು, ಹೃದಯವನ್ನು ಅರ್ಥಮಾಡಿಕೊಂಡವನಂತೆ ಗೋಪಾಲಕ ತಲೆಯಲ್ಲಾಡಿಸಿದ. ಅಲ್ಲಾಡಿಸಿಕೊಂಡು ಅವರನ್ನೇ ಸಮಾಧಾನಪಡಿಸುವವನಂತೆ ಹೇಳಿದ - ''ಅಯ್ಯಾ, ಮನುಷ್ಯನ ದೇಹದ ಅಸಹ್ಯಭಾಗದಿಂದ ಅದರ ಉಚ್ಚೆ ಕೊಳಕನ್ನೆಲ್ಲಾ ಮೈಗೇ ಅಂಟಿಸಿಕೊಂಡು ಹುಟ್ಟಿ ಬರಬೇಕಾದ್ರೆ, ಮುಂದೆ ಆ ಮಗುವಿನ ಜೀವನ ಪೂರ್ತಿ ಅದೇ ತರ ಆಗದೆ ಬೇರೇನಾಗಲು ಸಾಧ್ಯ, ಹೇಳಿ ?''

ಹೇಳಿ, ಬಾಯಿಂದ ಚೂರೇ ನಗುತ್ತಾ ಪಂಡಿತರನ್ನು ನೋಡತೊಡಗಿದ. ಅವನ ಮಾತು ಕೇಳಿಸಿದ್ದೇ ತಡ ಪಂಡಿತರಿಗೆ ಜ್ಞಾನೋದಯವಾದಂತೆನಿಸಿತು.

ಮನುಷ್ಯ ಜೀವನ ಪೂರ್ತಿ ಬರೀ ಕೊಳಕು, ಕೆಟ್ಟದ್ದು, ಅಸಹ್ಯ ಎಂಬ ಅರಿವಾಯ್ತು. ಬುಗಬುಗನೆ ಹರಿದುಕೊಂಡು ಬಂದು ಹಳ್ಳವನ್ನು ತುಂಬಿಕೊಳ್ಳುವ ಕೊಳಚೆ ನೀರಿನ ಮೇಲೆ ಆಗೊಮ್ಮೆ ಈಗೊಮ್ಮೆ ಚಿನ್ನದ ಬಣ್ಣದ ಬಿಸಿಲು ಹೊಳೆಯುವಂತೆ ಮನುಷ್ಯನ ಜೀವನದಲ್ಲೂ ಆವಾಗವಾಗ ಸುಖ, ಸಂತೋಷ, ನೆಮ್ಮದಿ ಕಂಡುಬಂದೀತು. ಆದರೆ ಬಿಸಿಲ ಪ್ರಭೆಗೆ ಹೊಳೆಯುವ ಆ ನೀರಿನಡಿಯಲ್ಲೆಲ್ಲಾ ಬರೀ ಕೊಳಕೇ. ಕಲ್ಮಶವೇ.

ಜೀವನದ ರಹಸ್ಯ ತಿಳಿದುಕೊಂಡವರಂತೆ ಖುಷಿಪಡುತ್ತಾ ಪಂಡಿತ ಚಾತುರ್ಯಕಾರು ಅಲ್ಲಿಂದ ಹೊರಟು ಎರಡು ಹೆಜ್ಜೆಯಿಟ್ಟದ್ದಷ್ಟೇ, ನಾಲ್ಕು ಬೇಟೆನಾಯಿಗಳು ಅವರ ಕ್ಷೀಣ ಶರೀರದ ಮೇಲೆ ಮಿಂಚಿನಂತೆ ಧಾಳಿ ಮಾಡಿದವು. ಗೋಪಾಲಕನ ಕೋಲಿನ ಪೆಟ್ಟಿನ ಭಯಕ್ಕೆ ನಾಯಿಗಳು ಅಲ್ಲಿಂದ ಓಡಿಹೋಗುವುದರ ಮೊದಲೇ ಪಂಡಿತ ಚಾತುರ್ಯಕಾರ ಮಾಂಸ, ರಕ್ತವನ್ನೆಲ್ಲಾ ಕೊಳಕು ನಾರುವ ಹುಣ್ಣುಗಳಂತೆ, ಹಸಿ ಗಾಯಗಳಂತೆ ಹೊರಚೆಲ್ಲಿ ಅವರ ಅಂತರಂಗದ ನೋವೆಲ್ಲಾ ಆ ಕ್ಷಣದಲ್ಲೇ ಕರಗಿ ಅವರ ದೇಹವು ಒಂದು ಮಣ್ಣಿನ ಮುದ್ದೆಯಂತೆ ಮುಳ್ಳಿನ ಪೊದೆಯ ಮೇಲೆ ದೊಪ್ಪನೆ ಬಿದ್ದುಬಿಟ್ಟಿತು.

★ ★ ★

ಮಾನವ ಬಾಳಿನ ಒಳಾರ್ಥ ಕಂಡುಕೊಂಡ ಪಂಡಿತ ಚಾತುರ್ಯಕಾರ ಆತ್ಮ ಬಹಳ ವರ್ಷಗಳ ನಂತರ ಒಂದು ಆನೆಯ ರೂಪದಲ್ಲಿ ಮರುಹುಟ್ಟಿತು. ಮರಿಯಿದ್ದಾಗಲೇ ಅದನ್ನು ಹಿಂಡಿನಿಂದ ಬೇರ್ಪಡಿಸಿ ಸೆರೆ ಹಿಡಿದ ಕೆಲ ಬೇಟೆಗಾರರು ಅದನ್ನು ಕೇರಳದ ತಿರುವಾಂಕೂರು ದೇವಸ್ಥಾನಕ್ಕೆ ಕಾಣಿಕೆ ಕೊಟ್ಟರು. ಒಂದು ಬಾಯಿಬಾರದ ಮಗುವಿಗೂ ತೊಂದರೆ ಮಾಡದ, ಅತ್ಯಂತ ಸಹನೆಯ ಆ ಆನೆ, ಕ್ರಮೇಣ ದೇವಸ್ಥಾನದಲ್ಲಿ ದೇವರ ಆನೆಯಾಗಿ ಬಹಳ ಹೆಸರು, ಗೌರವ ಪಡೆಯಿತು. ಯಾರಾದರೂ ಪ್ರೀತಿಯಿಂದ ತಂದುಕೊಡುತ್ತಿದ್ದ ಬಾಳೆಹಣ್ಣು, ನೆಲಗಡಲೆ, ಮಾವಿನ ಚಿಗುರು ಇಂಥಾದ್ದೇ ತಿಂದುಕೊಂಡೇ ಬೆಳೆದ ಈ ಆನೆಗೆ ಬರಬರುತ್ತಾ ಒಂಟಿತನ ಕಾಡತೊಡಗಿತು, ಕೆಟ್ಟ ಕನಸಿನಂತೆ.

ಜೀವನ ಎಂದರೆ ಇದೇನಾ, ಎಂದು ತನ್ನಲ್ಲೇ ಪ್ರಶ್ನೆ ಹಾಕತೊಡಗಿತು, ಪಂಡಿತರ ಆತ್ಮ ಹೊತ್ತ ಆನೆ. ಕಾಲಿಗೆ ಚೈನು ಕಟ್ಟಿಸಿಕೊಂಡು ಬಾಗಿಲ ಬದಿ ನಿಂತುಕೊಂಡಿರುವುದು ? ಯಾರ್‍ಯಾರೋ ಕೊಟ್ಟದ್ದು, ಎಸೆದದ್ದನ್ನು ತಿಂದುಕೊಂಡು, ಇನ್ನ್ಯಾರು ತಂದುಹಾಕ್ತಾರೆ ಎಂದು ಕಾದುಕೊಂಡಿರುವುದು ? ದೇವರ ಮೂರ್ತಿಯ ಮುಂದೆ ಪ್ರಣಾಮ ಮಾಡಿ ಮಹಾ ಸಂಭಾವಿತನಂತೆ ನಟಿಸುವುದು ? ಬಿಸಿಲು ಬಡಿಯುವ ಬೆನ್ನ ಮೇಲೆ ದೇವರ ಮಂಟಪವನ್ನು ಏರಿಸಿಕೊಂಡು, ಮಹಾಗದ್ದಲದ ನಡುವೆ ಊರೂರು ಅಲೆಯುವುದು ? ಇದೇ ಜೀವನದ ಅರ್ಥವಾ ?

ಪ್ರಶ್ನೆಗಳು, ಪ್ರಶ್ನೆಗಳು. ಪ್ರಶ್ನೆಗಳಿವೆ ನನ್ನಲ್ಲಿ ಎಂದಿತು ಪಂಡಿತರ ಆತ್ಮ. ಆದರೆ ಉತ್ತರ.? ಉತ್ತರ ಎಲ್ಲಿಂದ ಬರಬೇಕು ? ಈ ಪ್ರಶ್ನೆ ಯಾರಲ್ಲಿ ಕೇಳಬೇಕು ?

ಪಂಡಿತ ಚಾತುರ್ಯಕಾರ ಆತ್ಮವನ್ನು ಹೊತ್ತುಕೊಂಡ ಆನೆ ತನ್ನ ಮುದಿ ಪ್ರಾಯದಲ್ಲಿ ತುಂಬಾ ಹಲುಬತೊಡಗಿತು. ಹೀಗೆ ಒಂಟಿಯಾಗಿದ್ದುಕೊಂಡೇ ಸಾಯಹೊರಟ ನಾನು ಸಾಧಿಸಿದ್ದೇನು ? ಲದ್ದಿಯ ಮೇಲೇ ಕಾಲು ಚಾಚಿ ಮಲಗುವ ನಾನೆಂಥವನು ? ಮೈಸ್ನಾನದಿಂದ ಹಿಡಿದು ಕುಡಿಯುವ ನೀರಿನವರೆಗೆ ಯಾವುದಕ್ಕೂ ಸ್ವಾತಂತ್ರ್ಯ ನೀಡದ ಈ ಅರೆನಗ್ನ ಮೈಯ ಜನರಿಗಾಗಿ ನಾನೇಕೆ ಇಲ್ಲಿರಬೇಕು ?

ತನ್ನ ಒಂಟಿತನದಿಂದ ಬಹಳಷ್ಟು ಬೇಸರ ಪಡತೊಡಗಿದ ದೇವರ ಆನೆ ಅಲ್ಲಿಂದ ಹೇಗಾದರೂ ತಪ್ಪಿಸಿಕೊಂಡು ಎಲ್ಲಿಗಾದರೂ ಓಡಿಹೋಗಲು ಚಡಪಡಿಸತೊಡಗಿತು. ಜಾತ್ರೆಯ ಒಂದು ದಿನ ಅಸಾಧ್ಯ ಗದ್ದಲದ ನಡುವೆ ತನ್ನ ಬೆನ್ನ ಮೇಲೆ ಕುಳಿತಿದ್ದ ದೇವರನ್ನು ಮಣ್ಣಿಗೆ ತಳ್ಳಿ ಆ ಆನೆ ಅಲ್ಲಿಂದ ಓಡತೊಡಗಿತು. ಅರೇ, ಆನೆಗೇನಾಗಿದೆ ? ದೇವರು ಬಿದ್ದೇಬಿಟ್ರಲ್ವಾ ! ಹಿಡೀರಿ ಆನೆ, ಕೊಲ್ರಿ ಅದನ್ನು. ದೇವ್ರನ್ನು ಮಲಿನ ಮಾಡಿ ಹೋಯ್ತಲ್ವಾ ಅದು !

ಹುಚ್ಚು ಹಿಡಿದವರಂತೆ ಓಡತೊಡಗಿದ ಆನೆ ಕೆಲವೇ ಕ್ಷಣದಲ್ಲಿ ಬೇಟೆಗಾರನೊಬ್ಬನ ವಿಷಯುಕ್ತ ಬಾಣಕ್ಕೆ ಬಲಿಯಾಗಿ ಬಿದ್ದಲ್ಲೇ ಸತ್ತುಹೋಯಿತು. ಸಾಯುವ ಮೊದಲು

ಕಣ್ಣೀರು ಹಾಕಿಕೊಂಡು ಪಂಡಿತರ ಆತ್ಮ ಹೊತ್ತುಕೊಂಡ ಆನೆ ಬೇಡಿತು- ''ಎಷ್ಟೇ ಅಸಹ್ಯ ಇದ್ರೂ ಪರವಾಯಿಲ್ಲ, ಆದ್ರೆ ಒಂಟಿ ಜೀವನ ಮಾತ್ರ ಕೊಢಬೇಡ, ದೇವಾ.''

★ ★ ★

ಇನ್ನಷ್ಟು ವರ್ಷಗಳ ನಂತರ ಪಂಡಿತ ಚಾತುರ್ಯಕಾರ ಆತ್ಮ ಈಗಿನ ಉತ್ತರ ಪ್ರದೇಶದ ಕಾನ್‌ಪುರದ ಹೊರವಲಯದ ಒಂದು ಬಯಲು ಭೂಮಿಯಲ್ಲಿ ಆಲದ ಮರವಾಗಿ ಹುಟ್ಟಿಬಂತು.

ಸುಮಾರು ಆರ್ನೂರು ವರ್ಷಗಳಷ್ಟು ಕಾಲ ತನ್ನ ಪಾದದ ಬದಿ ಬಂದವರಿಗೆಲ್ಲಾ ನೆರಳಿನಾಶ್ರಯ ಕೊಡುತ್ತಿತ್ತು ವಿಶಾಲ ಮರ. ಸುಮಾರು ಎರಡು ಎಕರೆ ಪ್ರದೇಶದಷ್ಟು ವ್ಯಾಪಿಸಿದ್ದ ಅದರ ರೆಂಬೆ, ಬಳ್ಳಿಗಳಲ್ಲಿ ಹಲವಾರು ತರದ ಜೀವನಗಳು, ಜೀವಗಳು. ಅಳಿಲು, ಕಾಗೆ, ಗುಬ್ಬಿ, ಹಣ್ಣುಗಳನ್ನು ದೋಚಿಕೊಂಡು ತಿನ್ನುವ ಮಂಗ,.... ಹೀಗೇ ಹಲವಾರು ಜೀವ ಜಂತುಗಳು ಬಾಳಿಕೊಂಡಿದ್ದುವು.

ತನ್ನ ಬಗ್ಗೇ ಸಂಭ್ರಮಪಡತೊಡಗಿದ ಆ ಮರ ಕೊನೆಗೆ ಇಂಗ್ಲಿಷರ ದಬ್ಬಾಳಿಕೆಯ ಆಡಳಿತದ ಕಾಲದಲ್ಲಿ ದುಃಖ ಅನುಭವಿಸತೊಡಗಿತು. ಲಾರ್ಡ್ ಹೇಸ್ಟಿಂಗ್ಸ್‌ನ ಆಡಳಿತದ ಅವಧಿಯಲ್ಲಿ ರೈಲು ಮಾರ್ಗದ ರಚನೆಗಾಗಿ ಅದು ತುಂಡು ತುಂಡಾಗಿ ಹೋಯಿತು. ಮರ ಒಣ ಕಟ್ಟಿಗೆಯಾಯಿತು.

ಆರ್ನೂರು ವರ್ಷ ಯಾರಿಗೂ ಕೆಡುಕು ಮಾಡದೆ ಬಾಳಿಕೊಂಡಿದ್ದ ನನಗೇಕೆ ಈ ಶಿಕ್ಷೆ, ಎಂದು ತನ್ನಲ್ಲೇ ಪ್ರಶ್ನೆ ಹಾಕಿತು ಚಾತುರ್ಯಕಾರ ಆತ್ಮ. ಒಂದು ಚೂರು ಬೇರು ಕೂಡಾ ಕಾಣಸಿಗದಂತೆ ನನ್ನನ್ನು ಧ್ವಂಸೆ ಮಾಡಿದ್ದೇಕೆ ? ಹಾಗಾದರೆ ಬಾಳಿಗೇನರ್ಥ ? ಒಂದು ಚಿಕ್ಕ ಜಂತುವಿಗೂ ನೋವು ಮಾಡದ ನನಗೇ ಈ ತರದ ಶಿಕ್ಷೆಯಾದರೆ ಉಳಿದವರಿಗೆ ?

ಅಥವಾ, ಸರಿ, ತಪ್ಪು, ಒಳ್ಳೆಯದು, ಕೆಟ್ಟದು, ನ್ಯಾಯ, ಅನ್ಯಾಯ, ಇವೆಲ್ಲಾ ನಮ್ಮ ಪರಿಗಣನೆಗೆ ಮೀರಿದುದಾ ಎಂದು ಪಂಡಿತರ ಆತ್ಮ ತನ್ನಲ್ಲೇ ಪ್ರಶ್ನೆ ಹಾಕಿತು. ಹೌದು ಎಂದಾದರೆ ಬಾಳಿಗೊಂದು ಅರ್ಥ ಕಲ್ಪಿಸುವುದು ಅಸಾಧ್ಯವೇ ಸರಿ ಎನ್ನಬಹುದಾ ? ಅರ್ಥ ಇಲ್ಲ ಎಂದಾದರೆ ನೋವು ಇಲ್ಲ ನಲಿವೂ ಇಲ್ಲ , ಮೇಲೂ ಇಲ್ಲ ಕೀಳೂ ಇಲ್ಲ , ಸರಿಯೂ ಇಲ್ಲ ತಪ್ಪೂ ಇಲ್ಲ , ಏನೂ ಇಲ್ಲ ಎಂದಾಯಿತಲ್ವಾ ? ಪ್ರತೀದಿನ ಸೂರ್ಯ ಎದ್ದು ಬಂದು ಭೂಮಿ ಕಾಯಿಸಿ ಮತ್ತೆ ಗುರುತೇ ಇರದಂತೆ ಮರೆಯಾಗುವಂತೆ ಮಾನವನ ಬದುಕು ಕೂಡಾ ಒಂದು ಯಾಂತ್ರಿಕ ಪಾಠವಾ ?

ಅಯ್ಯೋ, ಪ್ರಶ್ನೆಗಳು, ಪ್ರಶ್ನೆಗಳು ಎಂದು ಕಣ್ಣೀರು ಹಾಕಿತು ಪಂಡಿತ ಚಾತುರ್ಯಕಾರ ಆತ್ಮ. ನನ್ನಲ್ಲಿರುವ ಪ್ರಶ್ನೆಗಳಿಗೆಲ್ಲಾ ಯಾಕೆ ಉತ್ತರ ಸಿಗುತ್ತಿಲ್ಲ ? ಉತ್ತರ ಸಿಕ್ಕರೂ ಮರು ಸಂದರ್ಭದಲ್ಲಿ ಆ ಉತ್ತರ ತಪ್ಪಾಗಿ ಕಂಡುಬಂದು ನಾನು ಗೊಂದಲಕ್ಕೀಡಾಗುತ್ತಿದ್ದೇನಲ್ಲಾ ? ಏನಿದರ ಅರ್ಥ ? ಭೂಲೋಕದಲ್ಲಿ ಹುಟ್ಟಿ ಬಂದ ಯಾವುದೇ ಜೀವದ ಬಾಳಿಗೊಂದು ಅರ್ಥ ಕಲ್ಪಿಸುವದು ಕೂಡ ಅನರ್ಥ ಎಂದರ್ಥ ಮಾಡಿಕೊಳ್ಳಬೇಕಾ ? ಅಥವಾ ಈ ರೀತಿಯ ಪರಿಕಲ್ಪನೆಯೇ ಮೂಢತನದ್ದೆಂದು ಒಪ್ಪಿಕೊಳ್ಳಬೇಕಾ ?

ಅಯ್ಯೋ ಪ್ರಶ್ನೆಗಳು, ಪ್ರಶ್ನೆಗಳು.

ಹೀಗೆಲ್ಲಾ ತನ್ನಲ್ಲೇ ಗೊಂದಲ ಸೃಷ್ಟಿಮಾಡಿಕೊಂಡ ಪಂಡಿತರ ಆತ್ಮ ತುಂಬಾ ನೊಂದುಕೊಂಡು ಈ ಭೂಮಿ ಮೇಲಿನ ಜೀವನ ಇಲ್ಲಿಗೇ, ಇಷ್ಟಕ್ಕೇ ಸಾಕು, ಸಾಕೋ ಸಾಕು, ಎಂದು ತೀರ್ಮಾನ ಮಾಡಿಕೊಂಡು ಹಾಗೇ ದೇವನಲ್ಲಿ ಮೊರೆಯಿಟ್ಟಿತು - ''ಓ ಸೃಷ್ಟಿಕರ್ತ ದೇವನೇ, ನನ್ನನ್ನು ಈ ಭೂಮಿಯಿಂದ ಬಿಡುಗಡೆ ಮಾಡು.''

★ ★ ★

ದೇವನಿಗೆ ಏನು ಕಂಡಿತೋ ಏನೋ. ಪಂಡಿತ ಚಾತುರ್ಯಕಾರ ಆತ್ಮದ ಮೊರೆಗೆ ಒಪ್ಪಿಕೊಂಡಂತೆ ಮಾಡಿದ. ಆದರೆ ಮುಂದೆ ಕೆಲವೇ ವರ್ಷದಲ್ಲಿ ಪಂಡಿತರ ಆತ್ಮವನ್ನು ಒಂದು ಮೊಸಳೆಯ ರೂಪದಲ್ಲಿ ಕಳುಹಿಸಿಕೊಟ್ಟ ಮರಳಿ ಭೂಮಿಗೆ. ಪ್ರಶ್ನೆಗಳು ಹುಟ್ಟಿಕೊಂಡಲ್ಲಿಗೆ.

ತಮಿಳ್ನಾಡಿನ ಕುಂಭಕೋಣಂನಿಂದ ಸುಮಾರು ಇಪ್ಪತ್ತೈದು ಕಿಲೋಮೀಟರ್ ಉತ್ತರಕ್ಕೆ ವಿಚಿತ್ರಾಕಾರದ ಕೊಳವೊಂದರಲ್ಲಿ ಹುಟ್ಟಿಬಂದ ಮೊಸಳೆ ಅಲ್ಲೇ ಕೆಲ ವರ್ಷ ನೆಮ್ಮದಿಯಿಂದ ಕಳೆಯಿತು.

ಆಮೇಲೆ ಕಾವೇರಿ ನದಿಗೆ ಕೆಲ ಅಣೆಕಟ್ಟುಗಳು ಬಂದಂತೆ ಕುಂಭಕೋಣಂ ಸುತ್ತಮುತ್ತ ನೀರಿಗೆ ಪರದಾಟ ಆರಂಭವಾಗುತ್ತಲೇ ಚಾತುರ್ಯಕಾರ ಆತ್ಮ ಹೊತ್ತುಕೊಂಡ ಮೊಸಳೆಯ ಮನೆಯಾಗಿದ್ದ ಆ ಕೆರೆ ನೀರಿರದೆ ಒಣಗಿಹೋಯ್ತು. ಹಲವಾರು ಮೊಸಳೆಗಳು ಬಡಕಲಾಗಿ ಸತ್ತುಹೋದವು. ಇನ್ನು ಕೆಲವು ನೀರನ್ನು ಅರಸಿಕೊಂಡು ಎಲ್ಲೆಲ್ಲಿಗೋ ಹೊರಟುಹೋದವು.

ಪಂಡಿತರ ಆತ್ಮವನ್ನು ಹೊತ್ತುಕೊಂಡ ಮೊಸಳೆ ಒಂದು ರಾತ್ರಿ ಹೊಯ್ಗೆ ಮಣ್ಣಿನಿಂದ ತುಂಬಿಹೋದ ಆ ಕೆರೆಯ ದಂಡೆ ದಾಟಿ ಈಚೆ ಬಂತು. ತೆವಳಿಕೊಂಡು ತೆವಳಿಕೊಂಡು ಪಶ್ಚಿಮ ದಿಕ್ಕಿನ ದುರ್ಬಲ ಬೆಳಕನ್ನೇ ಹಿಂಬಾಲಿಸಿಕೊಂಡು ಹೊರಟಿತು.

ಸುಮಾರು ಎರಡು ದಿನ ಅಲ್ಲಿ ಇಲ್ಲಿ ಸುತ್ತಾಡಿಕೊಂಡಿದ್ದು ಒಂದು ಹಳ್ಳಿಯ ಅಂಚಿಗೆ ಬಂತು. ಇಲಿಗಳನ್ನು ಹಿಡಿದು ಸುಟ್ಟು ತಿಂದೇ ಜೀವನ ಮಾಡುವ ಆರೂಲು ಜಾತಿಯ ಜನರ ಬಡ ಹಳ್ಳಿ ಅದು. ಹಗಲೂ ರಾತ್ರಿ ಭೂಮಿ ಗಾಳಿಯೆಲ್ಲಾ ಬಿಸಿ. ಕುರುಚಲು ಗಿಡಗಳ ನೆರಳಿನಡಿಯೂ ಬಿಸಿ ಬಿಸಿ. ಕಾಗೆಗಳ ಕೂಗೇ ಸಂಗೀತ. ಅರ್ಧ ಬತ್ತಲು ಮೈಯೇ ಉಡುಗೆ. ಸ್ನಾನ ಮಾಡದ ಜನರ ಮೈವಾಸನೆಯೆ ಬಿಸಿಗಾಳಿಯ ಸುವಾಸನೆ.

ತಮಗೆ ಬೇಕಾದಷ್ಟನ್ನು ಸುಟ್ಟು ತಿಂದು, ಮತ್ತೆ ಮಿಕ್ಕುಳಿದ ಹಸಿ ಇಲಿ, ಹೆಗ್ಗಣಗಳನ್ನು ಆ ಹಳ್ಳಿಯ ಆರೂಲು ಜನರು ಊರಿನಾಚಿನ ಕೊಳಕು ಹಳ್ಳವೊಂದರಲ್ಲಿ ಹಲವರ್ಷಗಳಿಂದ ಆಶ್ರಯ ಪಡೆದ ಮೊಸಳೆಗಳಿಗೆ ಚೆಲ್ಲುತ್ತಿದ್ದರು. ಮಾಂಸದ ವಾಸನೆಯ ಬೆನ್ನು ಹಿಡಿದು ಬಂದ ಚಾತುರ್ಯಕಾರ ಆತ್ಮವಿದ್ದ ಮೊಸಳೆ ಕೆರೆಯ ಆರಿಂಚು ನೀರಿಗೆ ಧುಮುಕಿ ಹೊಟ್ಟೆ ಬಿರಿಯುವಷ್ಟು ಇಲಿಗಳನ್ನು ತಿಂದು ಕಣ್ಣುಮುಚ್ಚಿಕೊಂಡು ಮಲಗಿತು. ಬಿಸಿಲಿನ ಶಾಖ ಅದರ ಮೈ ತಂಪು ಮಾಡಿತು. ಹೆಣ್ಣು ಮೊಸಳೆಗಳ ಉಸಿರಿನ ಸುವಾಸನೆ ಹಿತವೆನಿಸಿತು.

ಪ್ರತೀ ದಿನ ಇಲಿ ಬೇಟೆ ನಡೆಸುತ್ತಿದ್ದ ಆರೂಲು ಜನ ಸಂಜೆಯಾಗುತ್ತಿದ್ದಂತೆ ಒಣ ಹೊಲಗಳಲ್ಲಿ ಹುಡುಕಾಡಿ ಹಿಡಿದು ತಂದ ಗೋಣಿ ಗೋಣಿ ಇಲಿಗಳನ್ನು ಆ ಕೆರೆಗೆ ತಂದು ತಂದು ಎಸೆಯುತ್ತಿದ್ದರು. ಅಗತ್ಯಕ್ಕೆ ಬೇಕಾದಷ್ಟು ನೀರಿರುತ್ತಿತ್ತು ಆ ಕೆರೆಯಲ್ಲಿ. ವಿಹಾರಕ್ಕೆ ಒಪ್ಪುವಂತಹ ಹೆಣ್ಣು ಮೊಸಳೆಗಳೂ ಸಾಕಷ್ಟಿದ್ದುವು. ಬಿಸಿಲು ಕೂಡಾ ಧಾರಾಳ. ಗಟ್ಟಿ ಹೊಯ್ಗೆ ಮಣ್ಣು ಶಾಶ್ವತ.

ಒಂದು ರಾತ್ರೆ ಗಮ್ಮತ್ತಿನಲ್ಲಿ ತಿಂದು ಮಲಗಿದ ಮೊಸಳೆಯೊಳಗಿನ ಪಂಡಿತರ ಆತ್ಮಕ್ಕೆ ಎಚ್ಚರವಾಯ್ತು. ಏನೋ ತಪ್ಪು ಮಾಡುತ್ತಿರುವಂತೆ ಅನಿಸಿ ತನ್ನಲ್ಲೇ ಕೇಳಿತು - 'ಜಗತ್ತಿನಲ್ಲಿ ಹಿಂದೆಂದೂ ನಡೆಯದ ಮುಂದೂ ನಡೆಯಲಾರದ ಪವಾಡಗಳನ್ನು ಮಾಡಿದ ನಾನಿಲ್ಲಿ ಮಾಡುತ್ತಿರುವುದಾದ್ರೂ ಏನು ?' ಮರು ನಿಮಿಷವೇ ಮಂದವಾಗಿ ಬೀಸುತ್ತಿದ್ದ ಬಿಸಿಗಾಳಿಗೆ ಜೋರು ನಿದ್ದೆ ಬಂದು ಮೊಸಳೆ ಹೇಳಿತು - ''ಈಗಂತೂ ನಾನು ನೆಮ್ಮದಿಯಿಂದಿದ್ದೇನೆ. ಮತ್ತಿನ್ನೇನು ಬೇಕು ನನಗೆ ?''

**ಶಾಂತಾರಾಮ ಸೋಮಯಾಜಿ**
೧೨೭, ಸೆರೊ ರೊನಾಲ್ಡೊ, ಸ್ಯಾನ್ ಲೂಯಿಸ್ ಒಬಿಸ್ಪೊ, ಸಿ. ಎ. ೯೩೪೦೫, ಯು.ಎಸ್.ಎ.

## ಜೂಜು

ಆಸೆಯ ಅಲೆಗಳ
ಮೇಲೆ ತೇಲಿ
ವಾಸ್ತವಿಕತೆಯ
ಸಾಗರದಲ್ಲಿ ಗುರಿ
ತಲುಪುವ ಮುನ್ನ
ಮುಳುಗಿ ಕಣ್ಮರೆಯಾಗುವ
ನಿರಾಸೆಯ ಜಹಜು ಜೂಜು



ಎಸ್. ಶ್ರೀನಿವಾಸ್
ಗ್ರಾಮೀಣ ಅಭಿವೃದ್ಧಿ ಕೇಂದ್ರ
ವಿ.ಸಿ. ಫಾರಂ, ಮಂಡ್ಯ-೫೭೧ ೪೦೫

# ಅಂತರರಾಷ್ಟ್ರೀಯ ಬಂಡವಾಳ ಹೂಡಿಕೆ ಒಪ್ಪಂದ

*ಬೃಹತ್ ಉದ್ದಿಮೆಗಳೂ ಸರ್ಕಾರವೂ ಪರಸ್ಪರ ಕೈ ಕುಲಕುತ್ತಾ ಮುಕ್ತವ್ಯಾಪಾರ ಮತ್ತು ವಾಣಿಜ್ಯ ಹಾಗೂ ಆರ್ಥಿಕ ಉದಾರೀಕರಣವನ್ನು ಸಾಧಿಸಿಕೊಳ್ಳುತ್ತಿರುವುದನ್ನು ದಿನದಿನವೂ ನೋಡುತ್ತಿದ್ದೇವೆ. ಹಿಂದೆ ಪ್ರಧಾನಿಗಳು ಅಥವಾ ಅಧ್ಯಕ್ಷರು ಪರದೇಶದ ಪ್ರವಾಸಕ್ಕೆ ಹೊರಟಾಗ ನಮ್ಮ ಸಾಂಸ್ಕೃತಿಕ ರಾಯಭಾರಿಗಳನ್ನು, ಕಲಾವಿದರು, ಬರಹಗಾರರನ್ನು ಕರೆದುಕೊಂಡು ಹೋಗುತ್ತಿದ್ದರು. ಈಗ ಪ್ರಧಾನಿಗಳೂ, ಉದ್ಯಮಿಗಳೂ ಒಟ್ಟೊಟ್ಟಿಗೇ ಪ್ರಯಾಣ ಮಾಡುತ್ತಾರೆ. ಪ್ರಧಾನಿಗಳು ತಮ್ಮ ಉದ್ಯಮಿಗಳಿಗೆ ವ್ಯಾಪಾರ ಒಪ್ಪಂದ ಕುದುರಿಸಿಕೊಡುತ್ತಾರೆ.*

'ಓಇಸಿಡಿ' ಎಂಬುದು ಯೂರೋಪಿನ ಎಲ್ಲ ಬಲಿಷ್ಠ ಶ್ರೀಮಂತ ರಾಷ್ಟ್ರಗಳ ಒಕ್ಕೂಟ. ಅದರಲ್ಲಿ ಇಂಗ್ಲೆಂಡ್, ಆಸ್ಟ್ರೇಲಿಯ, ನ್ಯೂಜಿಲ್ಯಾಂಡ್, ಅಮೆರಿಕ, ಜಪಾನ್, ಟರ್ಕಿ, ಕೆನಡಾ, ಮತ್ತು ಮೆಕ್ಸಿಕೊ ಸಹ ಸೇರಿವೆ; ಇತ್ತೀಚೆಗೆ ಜೆಕೊಸ್ಲೊವಾಕಿಯಾ ಸಹ. ''ಆರ್ಥಿಕ ಸಹಕಾರ ಮತ್ತು ಅಭಿವೃದ್ಧಿಯ ಒಕ್ಕೂಟ'' ವೆಂದು ಅದರ ಪೂರ್ತಿ ಹೆಸರು. ಇದರ ಮಿಲಿಟರಿ ಮುಖ ''ನ್ಯಾಟೋ'' ಒಕ್ಕೂಟ.

'ಓಇಸಿಡಿ' ತನ್ನ ಸದಸ್ಯ ವರ್ಗದಲ್ಲಿ ಪರಸ್ಪರ ಸಹಕರಿಸಿ ತೃಪ್ತವಾಗದೆ ಈಗ ವಿಶ್ವದ ಎಲ್ಲ ರಾಷ್ಟ್ರಗಳ ಜೊತೆಗೆ ಮತ್ತಷ್ಟು ''ಸಹಕರಿಸುವ'' ವಾದವಿಟ್ಟು ಅವನ್ನು ತನ್ನತ್ತ ಸೆಳೆದುಕೊಳ್ಳುವ ಪ್ರಯತ್ನದಲ್ಲಿ ತೊಡಗಿದೆ. ವಿಶ್ವ ವ್ಯಾಪಾರ ಸಂಸ್ಥೆಯ ಬಹುಮುಖ್ಯವಾದ ಅಂಶ 'ಬಂಡವಾಳ ಹೂಡಿಕೆಯ ಒಪ್ಪಂದ'ವಾಗಿದ್ದು, ಅದರ ಕರಡನ್ನು ತಯಾರಿಸುವುದರಲ್ಲಿ 'ಓಇಸಿಡಿ'ಯದೇ ಮುಖ್ಯ ಭೂಮಿಕೆ.

ಯಾವುದೇ ಬಂಡವಾಳ ಹೂಡಿಕೆಯ ಒಪ್ಪಂದವು ಇನ್ನೆಲ್ಲ ಆರ್ಥಿಕ, ವಾಣಿಜ್ಯ, ಮಿಲಿಟರಿ ಒಪ್ಪಂದಗಳಂತೆ ಸರ್ವೇಸಾಮಾನ್ಯ ವಿಷಯ. ಆದರೆ ಈಗ ನಡೆಯುತ್ತಿರುವ ಪ್ರಯತ್ನ ಎಲ್ಲ ರಾಷ್ಟ್ರಗಳಿಗೂ ಸಮಾನವಾಗಿ ಅನ್ವಯವಾಗುವಂಥ ಒಪ್ಪಂದದ ಮಾದರಿಗಾಗಿ. ಒಪ್ಪಂದಕ್ಕೆ ಸಹಿ ಹಾಕದವರು ಬಂಡವಾಳ ಹೂಡಿಕೆ ಸಿಗದೆ, ಅಂತರ ರಾಷ್ಟ್ರೀಯ ಮಾರುಕಟ್ಟೆಗೆ ಪ್ರವೇಶ ಸಿಗದಂಥ ಬಹಿಷ್ಕಾರಕ್ಕೆ ಒಳಗಾದಾರು. ಈ ಭೀತಿಗೆ ಸಿಕ್ಕಿ ಎಲ್ಲರೂ ಸಹಿ ಹಾಕಿಯಾರು.

ಚಾರಿತ್ರಿಕ ಕಾರಣಗಳಿಂದಾಗಿ ಎಲ್ಲ ರಾಷ್ಟ್ರಗಳೂ ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ ಒಂದೇ ಹಂತದಲ್ಲಿರುವುದಿಲ್ಲ. ಆದುದರಿಂದಲೇ ಪರಸ್ಪರ ವ್ಯವಹರಿಸುವ ರಾಷ್ಟ್ರಗಳು ತಮ್ಮ ತಮ್ಮ ಬೆಳವಣಿಗೆಯ ಹಂತವನ್ನೂ ಗಮನದಲ್ಲಿಟ್ಟುಕೊಂಡು ಒಪ್ಪಂದದ ಷರತ್ತುಗಳನ್ನೂ ಪ್ರತಿ ಸಂದರ್ಭದಲ್ಲೂ ಬೇರೆ ಬೇರೆಯಾಗಿಯೇ ಮಾಡಿಕೊಳ್ಳಬೇಕಾಗುತ್ತದೆ. ಇದರಲ್ಲಿ ಸಂಬಂಧಪಟ್ಟ ರಾಷ್ಟ್ರಗಳ ಬಲಾಬಲ, ತಾತ್ವಿಕ ಒಲವು, ಮೈತ್ರಿ ಇವೆಲ್ಲವುಗಳ ಪ್ರಭಾವ ಪ್ರತಿಫಲಿಸುತ್ತದೆ. ಹಾಗಿರುವಾಗ, ಎಲ್ಲರಿಗೂ ಅನ್ವಯಿಸುವ ಏಕಸೂತ್ರ ಒಪ್ಪಂದ ವ್ಯಾವಹಾರಿಕವಾಗಿ ಹೇಗೆ ಸಾಧ್ಯ? ಅಸಮಾನರ ನಡುವೆ ಸಮಾನ ಒಪ್ಪಂದವು ಮಣ್ಣಿನ ಮಡಕೆಯು ಕಂಚಿನ ಕೊಡಕ್ಕೆ ಮುತ್ತಿಟ್ಟಂತಾಗುವುದಿಲ್ಲವೆ?

ಆರ್ಥಿಕ ವ್ಯವಹಾರವನ್ನು ಲಾಭೈಕ ದೃಷ್ಟಿಕೋನದಿಂದ ಹೊರಗಿಟ್ಟು, ಎಲ್ಲರಿಗೂ ಅನುಕೂಲವಾಗುವ, ದುರ್ಬಲರಿಗೂ ಅವಕಾಶ ನೀಡುವ ಒಪ್ಪಂದ ಈಗಿನ ಗುರಿಯೇ? ಹಾಗಿದ್ದರೆ ಅಂಥ ಸೂತ್ರಗಳನ್ನು ಮಾತ್ರ ಪ್ರಕಟಿಸಿ ಅದನ್ನಾಧರಿಸಿ ಆಯಾ ರಾಷ್ಟ್ರಗಳು ಪರಸ್ಪರ ಒಪ್ಪಂದ ಮಾಡಿಕೊಳ್ಳಬಹುದೆಂದು ಕರೆ ನೀಡಬಹುದಿತ್ತು. ವಿಶ್ವಸಂಸ್ಥೆಯ ಆರಂಭದ ದಿನಗಳಿಂದ ಹಿಡಿದು, ಇತ್ತೀಚೆಗೆ ಉರುಗ್ವೆಯಲ್ಲಿ ಸೇರಿದ್ದ ಅಂತರರಾಷ್ಟ್ರೀಯ ವಾಣಿಜ್ಯ ಸಮಾವೇಶದವರೆಗೂ ಈ ಕೆಲಸವೇ ನಡೆದಿದ್ದು. ಅದರಂತೆ ರಾಷ್ಟ್ರ ರಾಷ್ಟ್ರಗಳ ನಡುವೆ ಹಿಂದಿಗಿಂತಲೂ ಉತ್ತಮವಾದ ಸುಮಾರು ಸಾವಿರದ ಆರುನೂರು ಒಪ್ಪಂದಗಳು ಈಗಾಗಲೇ ಆಗಿವೆ. ಅವುಗಳಲ್ಲಿ ಅಸಮರ್ಪಕತೆ ಏನಿದ್ದರೂ ಮುಂದುವರಿದ ರಾಷ್ಟ್ರಗಳು ತಮ್ಮ ಪಾಲಿನ ಒಪ್ಪಂದದ ಷರತ್ತುಗಳನ್ನು ಕಾರ್ಯಗತಗೊಳಿಸದಿರುವುದು, ಪರಿಪಾಲಿಸದೆ ಇರುವುದು. ಉದಾಹರಣೆಗೆ, ಅವರ ರಾಷ್ಟ್ರೀಯ ಉತ್ಪಾಟನೆಯ ಶೇ. ಒಂದರಷ್ಟನ್ನಾದರೂ ಹಿಂದುಳಿದ ರಾಷ್ಟ್ರಗಳ ಅಭಿವೃದ್ಧಿಗೆ ಒದಗಿಸುವ ಇಂಗಿತ. ಒಂದು ಕಡೆ ಬಿರುಸಿನ ಚರ್ಚೆಗಳು ನಡೆಯುತ್ತಿದ್ದರೂ, ಈ ಅಭಿವೃದ್ಧಿಯ ನೆರವು ಕ್ರಮೇಣ ಕಡಿಮೆಯಾಗುತ್ತಿದ್ದು ಈಗ ಶೇ. ೦.೧ ರಷ್ಟಿದ್ದರೆ ಹೆಚ್ಚು. ವಿಶ್ವಸಂಸ್ಥೆಯನ್ನು ಹುಟ್ಟಿ ಹಾಕುವಾಗ ಘೋಷಿಸಲಾಗಿದ್ದ ಉದ್ದೇಶ ಇನ್ನು ಮುಂದೆ ಯುದ್ಧ ಆಗದಂತಿರಲು ಹಿಂದುಳಿದ ರಾಷ್ಟ್ರಗಳ ಪ್ರಗತಿಗೆ ಶ್ರಮಿಸುವುದು. ಆದರೆ ಈ ಕೆಲಸವನ್ನು ಪಶ್ಚಿಮ ಯೂರೋಪ್ ಮತ್ತು ಜಪಾನಿಗೆ ಮಾತ್ರ ಸೀಮಿತಗೊಳಿಸಿಕೊಂಡರು. ಈಗ ಮೂಲ ಉದ್ದೇಶವನ್ನೇ ಮರೆತಿದ್ದಾರೆ. ಈ ಉದ್ದೇಶಕ್ಕೆಂದು ಸ್ಥಾಪಿತವಾದ ವಿಶ್ವ ಹಣಕಾಸು ಸಂಸ್ಥೆ ಹಾಗೂ ವಿಶ್ವ ಬ್ಯಾಂಕು ಹಿಂದುಳಿದ ರಾಷ್ಟ್ರಗಳ ಅರ್ಥವ್ಯವಸ್ಥೆಯನ್ನು ಹಲವು ರೀತಿಯಲ್ಲಿ ನಿರ್ಬಂಧಿಸುವ ಸಾಧನವಾಗಿರುವುದು ಇಂದಿನ ವಾಸ್ತವ. ಇವುಗಳ ಕುಮ್ಮಕ್ಕಿನಲ್ಲಿ ವಿಶ್ವ ವ್ಯಾಪಾರ ಸಂಸ್ಥೆ ತನ್ನ ಸೂತ್ರಗಳನ್ನು ರೂಪಿಸುತ್ತಿದೆ. ಇದರ ಬಹುಮುಖ್ಯ ಪ್ರಕ್ರಿಯೆಯಾಗಿ ಬರಲಿದೆ ''ಬಂಡವಾಳ ಹೂಡಿಕೆಯ ಒಪ್ಪಂದ''. ಇದರ ಅಧ್ವರ್ಯು 'ಓಇಸಿಡಿ'.

ಆದರೆ 'ಓಇಸಿಡಿ' ಏಕೆ ಈ ಪಾತ್ರ ವಹಿಸಬೇಕು? ವಿಶ್ವದ ಅತಿ ಶ್ರೀಮಂತ ಕಂಪೆನಿಗಳ ಒಂದು ಪಟ್ಟಿಗೆ 'ಅದೃಷ್ಟ-೫೦೦' ಎಂಬ ಹೆಸರಿದೆ. ಇವುಗಳ ಪೈಕಿ ೪೮೭ ಕಂಪೆನಿಗಳು 'ಓಇಸಿಡಿ' ಅಂತರ್ಗತ. ವಿಶ್ವದ ಬಂಡವಾಳ ಹೂಡಿಕೆಯ ಶೇ. ೯೨ ಭಾಗ ಈ ಕಂಪೆನಿಗಳದ್ದು. ಇವು ಬಹುರಾಷ್ಟ್ರೀಯಗಳೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಹಿಂದುಳಿದ ರಾಷ್ಟ್ರಗಳಿಗೆ ತಮ್ಮ ಬಂಡವಾಳದ ಅಗತ್ಯ ಮನಗಂಡಿರುವ ಈ ಕಂಪೆನಿಗಳು, ತಮ್ಮ ಸ್ವಂತ ರಾಷ್ಟ್ರಕ್ಕೇ ಅಲ್ಲದೆ, ವಿಶ್ವದ ಅನೇಕ ಸರ್ಕಾರಗಳನ್ನೂ, ಅವುಗಳ ಪ್ರತಿನಿಧಿಗಳನ್ನೂ ತಮ್ಮ ಹತೋಟಿಯಲ್ಲಿಟ್ಟುಕೊಂಡಿವೆ. ತಮ್ಮ ಬಂಡವಾಳದ ಶಕ್ತಿ, ಸರ್ಕಾರಗಳ ಶಕ್ತಿಗಿಂತ ಹಿರಿದೆಂಬ ಪ್ರಜ್ಞೆ ಅವಕ್ಕಿವೆ. ತಾವು ವಿವಿಧ ರಾಷ್ಟ್ರಗಳಲ್ಲಿ ಬಂಡವಾಳ ಹೂಡುವಾಗ, ಅಲ್ಲಿಯ ಸರ್ಕಾರಗಳು ತಮಗೆ ಷರತ್ತು-ಕರಾರುಗಳನ್ನು ವಿಧಿಸುವುದು ಅವರಿಗೆ ಒಪ್ಪಿಗೆಯಿಲ್ಲ. ''ನಿಮಗೆ ನಮ್ಮ ಬಂಡವಾಳ ಬೇಕಿದ್ದರೆ, ಬೇಷರತ್ತಾಗಿ ಬಂಡವಾಳ ಹೂಡಲು, ವ್ಯಾಪಾರ ಮಾಡಲು ತೆರೆದ ಬಾಗಿಲಿಡಿ. ಇಲ್ಲವೆ ನಿಮ್ಮ ಆರ್ಥಿಕ ಬೆಳವಣಿಗೆಯನ್ನು ಮರೆತುಬಿಡಿ'' ಎನ್ನುತ್ತಾರೆ. ಸೈನಿಕ ಶಕ್ತಿಗೆ, ಬಾಂಬಿಗೆ, ರಾಕೆಟ್‌ಗೆ ಮಣಿಯದ ಸರ್ಕಾರಗಳು ಈ ಬಹುರಾಷ್ಟ್ರೀಯಗಳ ಮುಂದೆ ತಲೆಬಾಗುತ್ತಿವೆ. ಈ ಕಂಪೆನಿಗಳು ವಿಶ್ವ ಸಾಮ್ರಾಜ್ಯ ಕಟ್ಟುವ ಕನಸು ಕಾಣುತ್ತಿವೆ. ವಿಶ್ವವನ್ನೆಲ್ಲಾ ಪ್ರತಿನಿಧಿಸುವ ಏಕೈಕ ಸರ್ಕಾರ ಮತ್ತು ಅದಕ್ಕೊಂದು ರಾಜ್ಯಾಂಗ, ಯುಗ ಯುಗದ ಕನಸು ! ಅನೇಕ ತತ್ತ್ವಶಾಸ್ತ್ರಜ್ಞರು ಮತ್ತು ಸಾಹಿತಿಗಳು ಇದನ್ನು ಪ್ರಕಟಿಸಿದ್ದಾರೆ. ಬಹುರಾಷ್ಟ್ರೀಯಗಳು ಈ ಕೆಲಸ ಮಾಡಹೊರಟಿವೆಯೇ ? ಲಾಭೈಕ ದೃಷ್ಟಿಯ ವರ್ತಕ ಮಂಡಳಿ ವಿಶ್ವದ ಜನತೆಯ ದಾರಿದ್ರ್ಯವನ್ನು ತೊಡೆಯುವ ಆರ್ಥಿಕ ಬೆಳವಣಿಗೆಯನ್ನು ತಂದೀತೆ ? ಆರ್ಥಿಕ ಅಸಮಾನತೆಯೇ ತಮ್ಮ ಬೆಳವಣಿಗೆಯ ಆಧಾರವಾಗಿರುವಾಗ ಇದನ್ನು ತೊಡೆದುಹಾಕುವಂಥ ಕೆಲಸ ಮಾಡಿಯಾರೆ ? ಚಿರತೆ ತನ್ನ ಪಟ್ಟೆಯನ್ನು ಬದಲಿಸೀತೆ !

> *''ಒಂದು ಮಾರುಕಟ್ಟೆಯನ್ನು ವಶಪಡಿಸಿಕೊಳ್ಳಬೇಕಾದರೆ ಅಲ್ಲೇ ಹೋಗಿ ಉತ್ಪಾದಕನಾಗಿ ನೆಲಸಬೇಕು''*
>
> - ಯೂರೋಪಿಯನ್ ಯೂನಿಯನ್

**ಪಾರ್ಥಸಾರಥಿ**

'ಓಇಸಿಡಿ' ಆಡಳಿತ ಕೇಂದ್ರ ಪ್ಯಾರಿಸ್‌ನಲ್ಲಿದೆ. ಅದರ ಎರಡನೆ ನಂಬರಿನ ಕೊಠಡಿಯಲ್ಲಿ ಬಂಡವಾಳ ಹೂಡಿಕೆಯ ಒಪ್ಪಂದದ ಸೂತ್ರ ರಚನೆಯ ಬಗೆಗೆ ಸುಮಾರು ಹತ್ತು ವರ್ಷ ರಹಸ್ಯಮಯ ಚರ್ಚೆ ನಡೆದಿತ್ತೆಂದು ಇತ್ತೀಚೆಗೆ ಬಹಿರಂಗವಾಯ್ತು. ಇದರಲ್ಲಿ ಅನೇಕ ರಾಷ್ಟ್ರಗಳ ವಾಣಿಜ್ಯ ಲೋಕದ ಪ್ರತಿನಿಧಿಗಳು ಭಾಗಿಯಾಗಿದ್ದಾರೆ. ವಿಶ್ವಸಂಸ್ಥೆ, ವಿಶ್ವ ಹಣಕಾಸು ಸಂಸ್ಥೆ ಮತ್ತು ವಿಶ್ವ ಬ್ಯಾಂಕಿನ ಉಪ್ಪು ತಿಂದೇ ಬೆಳೆದ -ಅರ್ಥಶಾಸ್ತ್ರಜ್ಞರು, ರಾಜಕೀಯ ವ್ಯಕ್ತಿಗಳು, ಪ್ರಧಾನಿಗಳೂ, ಮಂತ್ರಿಗಳೂ ಇದರಲ್ಲಿ ಸೇರಿದ್ದಾರೆ. ತಮ್ಮ ರಾಷ್ಟ್ರದ ಯಾವ ಪ್ರಜಾಪ್ರತಿನಿಧಿ ಸಭೆಗೂ ತಿಳಿಸದೆಯೇ ಈ ಕೆಲಸ ನಡೆಸಿದ್ದಾರೆ. ನಮ್ಮ ಪ್ರಣವ ಮುಖರ್ಜಿ ಮತ್ತು ಅವರ ನಂತರ ಬಂದ ಕೆಲವು ಮಂತ್ರಿಗಳು ಲೋಕಸಭೆಗೆ ತಿಳಿಸದೆಯೇ, ಅದರ ಸಭೆ ಜರುಗುತ್ತಿದ್ದಾಗಲೇ, ಜಿನೀವಾಕ್ಕೆ ಹೋಗಿ ವಿಶ್ವ ವಾಣಿಜ್ಯ ಸಂಸ್ಥೆಯ ಒಪ್ಪಂದಗಳಿಗೆ ಸಹಿ

*ವಿಶ್ವದ ಅತಿ ದೊಡ್ಡ ಶ್ರೀಮಂತ ಕಂಪೆನಿಗಳು-೫೦೦. ಅವುಗಳಲ್ಲಿ ಅತ್ಯಂತ ದೊಡ್ಡವು ೧೦೦. ಇವುಗಳಲ್ಲಿ ೫೧ ಕಂಪೆನಿಗಳು-ಏಕೈಕ ವ್ಯಕ್ತಿಯ ಸ್ವಂತದ್ದು. ಮಿತ್ಸುಬಿಷಿ ಜಪಾನಿನ ಕಂಪೆನಿ. ಇದರ ಶ್ರೀಮಂತಿಕೆ ವಿಶ್ವದ ಜನಸಂಖ್ಯೆಯಲ್ಲಿ ನಾಲ್ಕನೆ ಹಂತದಲ್ಲಿರುವ ಇಂಡೋನೇಷಿಯ ದೇಶಕ್ಕಿಂತ ಹೆಚ್ಚಾದುದು. ಜನರಲ್ ಮೋಟಾರ್ಸ್ ಎಂಬುದು ಡೆನ್‌ಮಾರ್ಕ್ ದೇಶಕ್ಕಿಂತ, ಫೋರ್ಡ್ ಮೋಟಾರ್ ದಕ್ಷಿಣ ಆಫ್ರಿಕಕ್ಕಿಂತ, ಟಯೋಟ ಕಂಪೆನಿ ನಾರ್ವೆ ದೇಶಕ್ಕಿಂತ, ಫಿಲಿಪ್ ಮೋರಿಸ್ ನ್ಯೂಜಿಲ್ಯಾಂಡ್‌ಗಿಂತ ಹೆಚ್ಚು ಶ್ರೀಮಂತವಾದವು. ವಾಲ್‌ಮಾರ್ಟ್ ಕಂಪೆನಿಯ ಶ್ರೀಮಂತಿಕೆ ಪೋಲೆಂಡ್, ಇಸ್ರೇಲ್, ಗ್ರೀಸ್ ದೇಶವೂ ಸೇರಿದಂತೆ ಒಟ್ಟು ೧೬೧ ದೇಶಗಳ ಒಟ್ಟು ಶ್ರೀಮಂತಿಕೆಗಿಂತ ಹೆಚ್ಚು! ಅತಿ ಶ್ರೀಮಂತ ೨೦೦ ಬಹುರಾಷ್ಟ್ರೀಯ ಕಂಪೆನಿಗಳ ಅರ್ಥ-ವಾಣಿಜ್ಯ ವಹಿವಾಟು ೧೮೨ ರಾಷ್ಟ್ರಗಳ ಒಟ್ಟಾರೆ ವಹಿವಾಟಗಿಂತ ಹೆಚ್ಚು. ಈ ಹೋಲಿಕೆಗೆ ಹೊರತಾಗಿ ಉಳಿಯುವ ರಾಷ್ಟ್ರಗಳು ಅಮೆರಿಕ ಸೇರಿ ಒಂಭತ್ತು ಮಾತ್ರ! ಈ ಒಂಭತ್ತರಲ್ಲೇ ವಿಶ್ವದ ಬಹುಪಾಲು ಬಹುರಾಷ್ಟ್ರೀಯಗಳು ನೆಲಸಿರುವುದು.*

ಹಾಕಿ ಬಂದದ್ದು ತಿಳಿದ ವಿಷಯ. ಆದರೆ ಅಮೆರಿಕದ ಕಾಂಗ್ರೆಸ್‌ಗೆ ತಿಳಿಸದೆಯೇ ಅಲ್ಲಿನ ಅಧ್ಯಕ್ಷರೂ ಇದೇ ಕೆಲಸ ಮಾಡಿದರೆಂದು ಈಗ ಸ್ಪಷ್ಟವಾಗಿದೆ. ಪ್ಯಾರಿಸ್ಸಿನಲ್ಲಿ ರಹಸ್ಯವಾಗಿ ತಯಾರಿಸುತ್ತಿದ್ದ ಕರಡು ಒಪ್ಪಂದವನ್ನೂ ಹೇಗೋ ಸಂಪಾದಿಸಿ, ಅದನ್ನು ಪ್ರಚಾರಕ್ಕೆ ಬಿಡುಗಡೆ ಮಾಡಲಾಗಿದೆ. ಈಗ ಇದರ ಸಂಪೂರ್ಣ ಪಾಠ ಇಂಟರ್‌ನೆಟ್‌ನಲ್ಲಿ ಸಿಗುತ್ತದೆ. ಕಾರ್ಯಶೀಲ ಜನ ರೊಚ್ಚಿಗೆದ್ದೂ ಇದರ ವಿರುದ್ಧ ಅಲ್ಲಲ್ಲೇ ಚಳುವಳಿಗಳನ್ನು ನಡೆಸಲು ಪ್ರಾರಂಭಿಸಿದರು. ಅದರ ಒಂದು ದೊಡ್ಡ ಸಾಧನೆ ಸಿಯಾಟಲ್‌ನ ವಿಶ್ವ ವಾಣಿಜ್ಯ ಸಂಸ್ಥೆಯ ಸಭೆಯ ಮುಂದೆ ಪ್ರಬಲ ಪ್ರತಿಭಟನೆ ನಡೆಸಿದ್ದು. ಇದರ ಆಘಾತದಿಂದ ಇನ್ನೂ ಈ ಸಂಸ್ಥೆ ಚೇತರಿಸಿಕೊಂಡಿಲ್ಲ. ''ನಮ್ಮ ಸಭಾಂಗಣದ ಹೊರಗೆ ಚಳುವಳಿ ನಡೆಸುತ್ತಿರುವವರ ವಾದಕ್ಕೂ ಅರ್ಥವಿದೆ. ಅವರನ್ನು ಸಭೆಯೊಳಕ್ಕೆ ಕರೆದು ತರದೆ ಚರ್ಚೆ ಪೂರ್ತಿಯಾಗುವುದಿಲ್ಲ'' ಎಂದು ಕ್ಲಿಂಟನ್ ಒಮ್ಮೆ ಹೇಳಿದ್ದುದನ್ನು ಇಲ್ಲಿ ಸ್ಮರಿಸಬಹುದು. ಅದೇ ಚಳುವಳಿಕಾರರನ್ನು ದಾಂಧಲೆ ಮಾಡುವ ಭಯೋತ್ಪಾದಕರೆಂದು ಅರಚಿದ ನಮ್ಮ ಅರ್ಥಮಂತ್ರಿಗೆ ಇಷ್ಟೆಲ್ಲಾ ಸೂಕ್ಷ್ಮಗಳನ್ನು ತಿಳಿಯುವ ಸ್ವತಂತ್ರ ಚಿಂತನೆಯ ಸಾಮರ್ಥ್ಯವೇ ಇಲ್ಲ. ವಿಶ್ವದ ಮುಂದುವರಿದ ಅಥವಾ ಹಿಂದುಳಿದ ರಾಷ್ಟ್ರಗಳ ಪ್ರತಿನಿಧಿಗಳು ಯಾರೂ ಅವರೊಡನೆ ದನಿಗೂಡಿಸದೇ ಇದ್ದದ್ದು ಅವರಿಗಾದ ಮಂಗಳಾರತಿ.

ಈ ಒಪ್ಪಂದದ ಕರಡು ಪ್ರತಿಯಲ್ಲಿ ಅಡಗಿರುವ ಷರತ್ತುಗಳನ್ನು ಅವಲೋಕಿಸಿದರೆ ರೊಚ್ಚಿಗೇಳಲು ಸಾಕಷ್ಟು ಕಾರಣವಿರುವುದು ತಿಳಿಯುತ್ತದೆ. ಅದರ ಸ್ಥೂಲ ಪರಿಚಯವನ್ನು ಈ ಮುಂದೆ ಕೊಡಲಾಗಿದೆ :

(ಅ) ಕಾನೂನುಗಳೆಲ್ಲ ವಿದೇಶಿ ಮತ್ತು ಸ್ವದೇಶಿ ಕಂಪೆನಿಗಳಿಗೆ ಸಮಾನವಾಗಿ ಅನ್ವಯವಾಗಬೇಕು ; (ಆ) ಸರ್ಕಾರಗಳು ಉದ್ಯಮಗಳಿಗೆ ಒದಗಿಸುವ ಆರ್ಥಿಕಾನುಕೂಲಗಳು ಮತ್ತು ಸವಲತ್ತುಗಳು ಭೇದ ಭಾವವಿಲ್ಲದೆ ವಿದೇಶಿ-ಸ್ವದೇಶಿ ಕಂಪೆನಿಗಳೆರಡಕ್ಕೂ ಸಮಾನವಾಗಿ ಅನ್ವಯವಾಗಬೇಕು; (ಇ) ವಿದೇಶಿ ಕಂಪೆನಿಗಳು ಬಂಡವಾಳ ಹೂಡುವ ದೇಶದಲ್ಲಿ ಸ್ವಂತ ಆಸ್ತಿ ಪಾಸ್ತಿ ಮಾಡಿಕೊಳ್ಳಲು ಸಂಪೂರ್ಣ ಹಕ್ಕಿರಬೇಕು; (ಈ) ವಿದೇಶಿ ಕಂಪೆನಿಗಳು ಸ್ವದೇಶಿಯರನ್ನು ಉದ್ಯೋಗಕ್ಕೆ ನಿಯಮಿಸಿಕೊಳ್ಳಬೇಕೆಂಬ ಯಾವ ನಿರ್ಬಂಧವೂ ಕೂಡದು; (ಉ) ವಿದೇಶಿ ಕಂಪೆನಿಗಳಿಗೆ ಸ್ವದೇಶಿಯರಿಗಿಂತ ಹೆಚ್ಚಿನ ಅನುಕೂಲ ಮಾಡಿಕೊಡಬಹುದು; (ಊ) ಹಾಲಿ ಇರುವ ಕಾನೂನುಗಳಲ್ಲಿ ಅಡಗಿರುವ ಭೇದ ಭಾವಗಳನ್ನು ಒಂದು ಗೊತ್ತಾದ ಸಮಯದೊಳಗೆ ತೊಡೆದುಹಾಕಿ ಸಮಾನತೆಯನ್ನು ಸಾಧಿಸಬೇಕು. ಇನ್ನು ಮುಂದೆ ಮಾಡುವ ಕಾನೂನುಗಳಲ್ಲಿ ಈ ಪಕ್ಷಪಾತ ತಲೆ ಹಾಕಕೂಡದು. ಆ ಕಾನೂನುಗಳು ಈ ಬಂಡವಾಳ ಹೂಡಿಕೆ ಒಪ್ಪಂದದ ಯಾವ ಷರತ್ತು-ಪ್ರಣಾಳಿಕೆಗಳೊಡನೆಯೂ ಘರ್ಷಣೆಗೆ ಒಳಗಾಗಬಾರದು; (ಋ) ಮಾನವ ಹಕ್ಕುಗಳಿಗೆ ಸಂಬಂಧಿಸಿದಂತೆ ಒಳ್ಳೆಯ ಹೆಸರು ಇಲ್ಲದ ದೇಶಗಳಲ್ಲಿ ಬಂಡವಾಳ ಹೂಡಿಕೆ ಮಾಡಬಾರದು (ಒಳ್ಳೆಯದು ಯಾವುದೆಂದು ತೀರ್ಮಾನಿಸುವವರೂ ಈ ಧಣಿಗಳೇ!); (ೠ) ಕಂಪೆನಿಗಳಿಗೆ ಷರತ್ತು ವಿಧಿಸಿ, ಅನುಕೂಲಗಳನ್ನು ಕಲ್ಪಿಸಿ ಕೊಡುವುದು ಪಕ್ಷಪಾತವಾಗುತ್ತದೆ. ಇದಕ್ಕೆ ಸರ್ಕಾರಗಳಿಗೆ ಅನಿರ್ಬಂಧಿತ ಹಕ್ಕು ಇಲ್ಲ; (ಎ) ದೇಶದಲ್ಲೇ ದೊರೆಯುವ ಕಚ್ಚಾ ವಸ್ತು ಉಪಯೋಗಿಸಿರಿ ಎಂತಲೋ, ಉತ್ಪಾದಿತ ವಸ್ತುವಿನ ಶೇಕಡಾ ಇಂತಿಷ್ಟಾದರೂ ಸ್ಥಳೀಯ ಮೌಲ್ಯ ಸಂಯೋಜನೆ ಇರಬೇಕೆಂತಲೋ, ಸ್ಥಳೀಯರಿಗೆ ಇಂತಿಷ್ಟಾದರೂ ಉದ್ಯೋಗ ಕೊಡಬೇಕೆಂದೋ, ಕಾಲಾನುಕಾಲದಲ್ಲಾದರೂ ತಂತ್ರಜ್ಞಾನದ ವರ್ಗಾವಣೆ ಅಗತ್ಯವೆಂತಲೋ, 'ಸಂಶೋಧನೆ- ಅಭಿವೃದ್ಧಿ'ಗೆ ಒಂದಿಷ್ಟು ಹಣ ಕಡ್ಡಾಯವಾಗಿ ಖರ್ಚುಮಾಡಿ ಎಂದೋ, ವಿದೇಶಿ ಕಂಪೆನಿ ಇಂತಿಷ್ಟು ರಫ್ತು ಸಾಧಿಸಬೇಕೆಂಬುದಿರಲಿ ಕೊನೆಯ ಪಕ್ಷ ಅದರ ಆಮದು-ರಫ್ತು ಪ್ರಮಾಣವನ್ನಾದರೂ ಸರಿತೂಗಿಸಬೇಕೆಂತಲೋ, ಆಮದು ಮಿತಿಯಲ್ಲಿರಬೇಕಂತಲೋ ಸರ್ಕಾರಗಳು ನಿರ್ಬಂಧಿಸುವಂತಿಲ್ಲ; (ಏ) ಈ ರಾಷ್ಟ್ರ ನಮಗೆ ಬಹುಮುಖ್ಯ ಮಿತ್ರರಾಷ್ಟ್ರ, ಆದ್ದರಿಂದ ಇದರೊಡನೆ ಸ್ವಲ್ಪ ಉದಾರ ನೀತಿ ತೋರುತ್ತೇನೆ ಎಂಬಂತಿಲ್ಲ; (ಐ) ಯಾವುದೇ ಸರ್ಕಾರ ಮಾಡಿದ್ದು ಸರಿಯೋ ತಪ್ಪೋ ಎಂಬ ವಿವಾದಗಳು ಏಳುವುದು ಸಹಜ. ಕಂಪೆನಿಗಳು ಇನ್ನು ಮುಂದೆ ಸರ್ಕಾರಗಳನ್ನು ಅದರ ಸಾರ್ವಭೌಮತೆಯ ಹಂಗಿಲ್ಲದೆ - ದೇಶ - ವಿದೇಶಗಳ ನ್ಯಾಯಾಲಯದ ಕಟಕಟೆಗೆ ಎಳೆಯಬಹುದು, ದಂಡ ವಿಧಿಸಬಹುದು, ಪರಿಹಾರ ಪಡೆಯಬಹುದು. (ಒ) ಹೂಡಿದ ಬಂಡವಾಳ ರಕ್ಷಿಸುವ ವಾಗ್ದಾನ ದೇಶೀಯ ಸರ್ಕಾರ ನೀಡಬೇಕು. ದೇಶೀಯ ಕಂಪೆನಿಗಳು ಪಾಲುದಾರರಾಗಿ ನಷ್ಟಕ್ಕೆ ಕಾರಣವಾದರೂ ಸರ್ಕಾರವೇ ಅದಕ್ಕೆ ಹೊಣೆಗಾರಿಕೆ ವಹಿಸಬೇಕು; ಮತ್ತು (ಓ) ಆರ್ಥಿಕ ಒಪ್ಪಂದದ ಕ್ಷೇತ್ರಕ್ಕೆ ಸೇವಾಕ್ಷೇತ್ರಗಳನ್ನು ಸೇರಿಸಲಾಗುತ್ತದೆ. ಇದರಂತೆ ಬ್ಯಾಂಕಿನ ವ್ಯವಹಾರ, ಸಂಪರ್ಕ ಮಾಧ್ಯಮಗಳು, ವಿಮೆ, ಮ್ಯುಚುಯಲ್ ಫಂಡುಗಳು, ಇವೆಲ್ಲ ವ್ಯಾಪಾರವೆಂದೇ ಪರಿಗಣಿಸಲ್ಪಡುತ್ತವೆ. ರಾಷ್ಟ್ರದ ಐಕ್ಯತೆಗೆ ಅಥವಾ ರಾಷ್ಟ್ರದ ಆರ್ಥಿಕ ಕ್ಷೇತ್ರದ ಅಸ್ತಿತ್ವಕ್ಕೆ ಧಕ್ಕೆ ಉಂಟಾದೀತೆಂಬ ಕಾರಣ ಒಂದನ್ನು ಬಿಟ್ಟು ಮೇಲೆ ವಿವರಿಸಿದ ಇನ್ನೆಲ್ಲ ಪ್ರಣಾಳಿಕೆಗಳೂ ಈ ಸೇವಾಕ್ಷೇತ್ರಗಳಿಗೆ ಅನ್ವಯವಾಗುತ್ತವೆ.

ಆರ್ಥಿಕ ಉದಾರೀಕರಣವೆಂಬ ಮಂತ್ರದ ನೆರಳಿನಲ್ಲಿ ಏನೆಲ್ಲಾ ಆಗುತ್ತಿದೆಯೋ ಅದು ಬರೀ ಹುಚ್ಚಲ್ಲ, ಅದರಲ್ಲಿ ಒಂದು ವಿಧಾನ ಅಡಗಿದೆಯೆಂದು ಇದರಿಂದ ಕಂಡುಬರುತ್ತದೆ. ಮೇಲ್ನೋಟಕ್ಕೆ ಸರಳವೆಂದು ಎನಿಸುವ ಈ ಸೂತ್ರಗಳು ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಿಗೆ ನಿಜಕ್ಕೂ ಉರುಳಾಗುವುದರಲ್ಲಿ ಸಂಶಯವಿಲ್ಲ. ಸರ್ಕಾರಗಳು ಸಾರ್ವಭೌಮತ್ವವನ್ನು ಕಳೆದುಕೊಂಡು ಲಾಭೈಕ ದೃಷ್ಟಿಯ ಬಹುರಾಷ್ಟ್ರೀಯ ಕಂಪೆನಿಗಳ ಅಡಿಯಾಳುಗುವ ಸಾಧ್ಯತೆ ಇದರಲ್ಲಿದೆ. ನಿರುದ್ಯೋಗ ವಿಪರೀತ ಹೆಚ್ಚಬಹುದು. ಇದಕ್ಕೆ ಇನ್ನೂ ಹಲವು ಆಯಾಮಗಳಿವೆ. ಆದ್ದರಿಂದ ಈ ಹಣಹೂಡುವ ಒಪ್ಪಂದವನ್ನು ಜನತೆ ವಿಶಾಲ ತಳಹದಿಯಲ್ಲಿ ಚರ್ಚಿಸಬೇಕು. ಕಾರಣ ಅವರ ರಾಜಕೀಯ ಧುರೀಣರನ್ನು, ಶ್ರೀಮಂತ ಉದ್ಯಮಿಗಳನ್ನು, ಅರ್ಥಶಾಸ್ತ್ರ ಕೋವಿದರನ್ನು ನಂಬಿ ಕೈಕಟ್ಟಿ ಕುಳಿತುಕೊಳ್ಳುವ ಕಾಲ ಅಲ್ಲ ಇದು. ಇದು ನಮ್ಮ ಸ್ವಾತಂತ್ರ್ಯವನ್ನು ರಚಿಸಿಕೊಳ್ಳಬೇಕಾದ ಕಾಲ. ಪ್ರಖ್ಯಾತ ಕೃಷಿ ವಿಜ್ಞಾನಿ ಎಂ.ಎಸ್. ಸ್ವಾಮಿನಾಥನ್ ಮೊದಲಾದವರು ವಿಶ್ವ ವ್ಯಾಪಾರ ಮಂಡಲಿಯ ಕೃಷಿ ಒಪ್ಪಂದದ ಷರತ್ತುಗಳ ಬಗೆಗೆ ಕಳವಳ ವ್ಯಕ್ತಪಡಿಸಿ, ಶ್ವೇತಪತ್ರಕ್ಕೆ ಒತ್ತಾಯಿಸಿರುವುದು ಗಮನಾರ್ಹ. ☐☐☐



# ಶಬ್ದಪ್ರಪಂಚ

ಪ್ರೊ॥ ಎಂ. ಆರ್. ಎಸ್. ಮೂರ್ತಿ

**ಮಾತು** ನಮ್ಮ ಸಂಸ್ಕೃತಿಯ ಬುನಾದಿ. ಬಾಲ್ಯದಲ್ಲಿ ನಾವು ಕಲಿತ ಭಾಷೆಯನ್ನು ಮಾತೃಭಾಷೆ ಎಂದು ಕರೆದು ಅದನ್ನು ತಾಯಿಯ ಸ್ಥಾನದಲ್ಲಿ ಕೂರಿಸುತ್ತೇವೆ. ನಮ್ಮ ಯೋಚನಾ ತರಂಗಗಳು ಹರಿಯುವುದು ಭಾಷೆಯ ಮಾಧ್ಯಮದಲ್ಲಿಯೇ. ಯೋಚನೆಗಳಿಗೆ ಮನಸ್ಸಿನಲ್ಲಿ ಧ್ವನಿ ಕೊಡುವುದನ್ನು ನಿಲ್ಲಿಸಿದರೆ ನಮ್ಮ ಆಲೋಚನೆಗಳೂ ತಟಕ್ಕನೆ ನಿಲ್ಲುತ್ತವೆ. ಮಾತನಾಡುವ ಶಕ್ತಿ ನಮಗೆ ವರವೂ ಹೌದು, ಶಾಪವೂ ಹೌದು. ಮಾತು ಬಳಸಿ ನಾವು ವರ್ತಮಾನ ಪ್ರಪಂಚವನ್ನು ಬಿಟ್ಟು, ಕಲ್ಪನಾ ಲೋಕದಲ್ಲಿ ವಿಹರಿಸಬಹುದು. ಕೆಲವರು ಈ ಕನಸಿನ ಲೋಕದಲ್ಲಿದ್ದಾಗ ತಮ್ಮ ಮನಸ್ಸಿನಲ್ಲಿ ಹರಿಯುತ್ತಿರುವ ಮಾತುಗಳನ್ನು ಇತರರಿಗೆ ಕೇಳಿಸುವಂತೆ ಗೊಣಗುವ ಅಭ್ಯಾಸ ರೂಢಿಸಿಕೊಂಡಿರುತ್ತಾರೆ. ಒಂದಲ್ಲ ಒಂದು ಸಲ ನಾವೂ ಇಂತಹ ವರ್ತನೆಯಲ್ಲಿಯೇ ತೊಡಗಿದ್ದಾಗ, ಸಾರ್ವಜನಿಕ ಸ್ಥಳದಲ್ಲಿದ್ದೇವೆಂಬ ಅರಿವು ತಟಕ್ಕನೆ ಮೂಡಿಬಂದು ನಾಚಿಕೆಪಟ್ಟುಕೊಳ್ಳುತ್ತೇವೆ. ಮಾತಿನ ಮೋಡಿಯಿಂದಲೇ ವ್ಯವಹಾರಗಳು ಕುದುರುತ್ತವೆ. ಅರ್ಜುನನನ್ನು ತೆಗಳಿ ಮಾತನಾಡಿದರೆ ಅವನಿಗೆ ತಡೆಯಲಾರದ ಕೋಪವೇರಿ, ಅವನ ಯುದ್ಧ ಚಾತುರ್ಯವೆಲ್ಲಾ ಉಕ್ಕಿ ಹರಿಯುತ್ತಿತ್ತೆಂದೂ, ದುರ್ಯೋಧನನನ್ನು ಹೊಗಳಿದರೆ, ಆತ ಉಬ್ಬಿ ತನ್ನ ಶೌರ್ಯವನ್ನೆಲ್ಲಾ ಪ್ರದರ್ಶಿಸುತ್ತಿದ್ದನೆಂದೂ ಮಹಾಭಾರತದ ಕಥೆ ತಿಳಿಸುತ್ತದೆ. ಕುಚೋದ್ಯಕ್ಕೆ ಹೆಸರಾದ ಕೃಷ್ಣ, ಅರ್ಜುನ ಹಾಗೂ ದುರ್ಯೋಧನರ ಮೇಲೆ ತೆಗಳಿಕೆಯ ಪ್ರವಾಹವೇ ಹರಿಯುವಂತೆ ನೋಡಿಕೊಳ್ಳುತ್ತಾನೆ. ಇದರಿಂದ ಅರ್ಜುನನ ಪರಾಕ್ರಮ ಉಕ್ಕಿ ಹರಿಯುತ್ತದೆ. ದುರ್ಯೋಧನ ನಿಸ್ತೇಜನಾಗುತ್ತಾನೆ, ಮಹಾಭಾರತದ ಕಥೆ ಕೃಷ್ಣನ ಇಚ್ಛೆಯಂತೆ ಅಂತ್ಯಗೊಳ್ಳುತ್ತದೆ. ಎರಡನೇ ಮಹಾಯುದ್ಧದಲ್ಲಿ ನಡೆದ ನರಮೇಧಕ್ಕೆ ಹಿಟ್ಲರನ ವಾಕ್ಚಾತುರ್ಯವೂ ಕಾರಣ ಎಂದು ಕೇಳಿದ್ದೇವೆ. ''ಬಿಟ್ಟ ಬಾಣ ಮತ್ತೆ ತೊಡಲಾರೆ'' ಎಂಬ ಕರ್ಣನ ಮಾತಿನಂತೆ ಒಮ್ಮೆ ಪ್ರಯೋಗಿಸಿದ ಬಯ್ಗುಳವನ್ನು ಪುನಃ ಬಳಸಡೆ ಗಂಟೆಗಟ್ಟಲೆ ಶುದ್ಧ ಕನ್ನಡದಲ್ಲಿ ಬಯ್ಯಬಹುದೆಂಬುದನ್ನು ಎಸ್. ಎಲ್. ಭೈರಪ್ಪನವರು ತಮ್ಮ ''ಗೃಹಭಂಗ'' ಕಾದಂಬರಿಯಲ್ಲಿ ಸಾಬೀತು ಮಾಡಿದ್ದಾರೆ. ಬಹುಶಃ ಎಲ್ಲ ಭಾಷೆಗಳೂ ಬಯ್ಗುಳಲ್ಲಿ ಕನ್ನಡದಷ್ಟೇ ಶ್ರೀಮಂತವಾಗಿವೆ. ಬಸವಣ್ಣನವರ ''ಅಯ್ಯಾ ಎಂದರೆ ಸ್ವರ್ಗ, ಎಲವೋ ಎಂದರೆ ನರಕ'' ಎಂಬ ವಚನ, ಮಾತಿಗೆ ನಾವು ಕೊಡುವ ಬೆಲೆಯ ಸಂಕೇತವಾಗಿದೆ. ಸವಿ ಮಾತು, ಇಂಪು ದನಿಗೆ ನಾವು ಎಂತಹ ಸ್ಥಾನ ಕೊಟ್ಟಿದ್ದೇವೆಂದರೆ ''ಸಂಗೀತ ಸವಿಯಲಾರದವ ಕೊಲೆ ಮಾಡಲೂ ಹೇಸಲಾರ'' ಎಂಬ ನುಡಿ ಕಟ್ಟಿದ್ದೇವೆ. ಬರವಣಿಗೆ ಬರುವುದಕ್ಕೂ ಮೊದಲು ಮಾತಿನ ಮೂಲಕವೇ ಸಮಾಜ ಕಲಿತ ಪಾಠವೆಲ್ಲಾ ಒಂದು ತಲೆಯಿಂದ ಇನ್ನೊಂದು ತಲೆಗೆ ಇಳಿದುಬರುತ್ತಿತ್ತು.




ಪ್ರಾಣಿಗಳು ಮೌನ ಜೀವಿಗಳು. ಇವುಗಳಿಗೆ ಅತಿ ಕರುಣೆ ತೋರಿಸಬೇಕೆನ್ನಿಸಿದಾಗ ನಾವು ಅವನ್ನು ''ಮೂಕಪ್ರಾಣಿಗಳು'' ಎಂದು ಸಂಬೋಧಿಸುತ್ತೇವೆ, ಮಾತಿನ ಬಗ್ಗೆ ನಮಗಿರುವ ಕಾಳಜಿಯನ್ನು ತೋರ್ಪಡಿಸಿಕೊಳ್ಳುತ್ತೇವೆ. ಮಾತು ಬಾರದ ಪ್ರಾಣಿಗಳ ಜೀವನವೆಲ್ಲಾ ವರ್ತಮಾನಕ್ಕೇ ಅಂಟಿಕೊಂಡಿರುವಂತೆ ತೋರುತ್ತದೆ. ಭೂತಕಾಲವನ್ನು ನೆನಪಿಸಿಕೊಡುವ ಶಬ್ದಗಳು ಅವುಗಳಿಗೆ ತಿಳಿಯದು. ಹಿಂದೆ ನಡೆದ ಘಟನೆಗಳನ್ನು ಪುನಃ ಪುನಃ ಜ್ಞಾಪಿಸಿಕೊಂಡು ಅವು ಮರುಗುವುದನ್ನು, ಮುಲಗುಟ್ಟುವುದನ್ನು ಕಾಣೆವು. ಹುಲಿ ಅಟ್ಟಿಸಿ ಬಂದಾಗ ಹೆದರಿ ಓಡುವ ಜಿಂಕೆಗಳು, ತಮ್ಮ ಸಂಗಾತಿಯೊಂದನ್ನು ಹುಲಿ ಎಳೆದೊಯ್ದ ಮರುಕ್ಷಣದಲ್ಲಿಯೇ ಹುಲ್ಲು ಮೇಯುವುದಕ್ಕೆ ತೊಡಗುತ್ತವೆ. ಹುಲಿಯ ಮೇಲೆ ಅವುಗಳಿಗೆ ಸ್ವಲ್ಪವೂ ಕೋಪವಿಲ್ಲ, ಇರುವುದೆಲ್ಲಾ ವಂಶಪಾರಂಪರ್ಯವಾಗಿ ಬಂದ ಹೆದರಿಕೆ ಮಾತ್ರ. ಹಾವಿನ ದ್ವೇಷ ಹನ್ನೆರಡು ವರ್ಷ ಎಂಬ ಮಾತಿನಲ್ಲಿ ಹುರುಳಿಲ್ಲ. ಹನ್ನೆರಡು ವರ್ಷಗಳಿರಲಿ, ಹಾವಿಗೆ ಹನ್ನೆರಡು ನಿಮಿಷಗಳೂ ದ್ವೇಷ ಸಾಧಿಸಲು ಬರುವುದಿಲ್ಲ. ಅದರ ಜೀವಕ್ಕೆ ಅಪಾಯವಾದಾಗ ಇಲ್ಲವೇ ಹಸಿವಾದಾಗ, ಆ ಕ್ಷಣದಲ್ಲಿ ತನ್ನೆದುರಿನ ಪ್ರಾಣಿಯನ್ನು ವಿಷದ ಹಲ್ಲುಗಳಿಂದ ಕಚ್ಚಬಹುದಷ್ಟೆ. ಜಿದ್ದು, ಮಾತು ಬರುವ ಮನುಷ್ಯರಿಗೆ ಮಾತ್ರ ಬರಬಹುದಾದ ಕಾಯಿಲೆ. ನಮ್ಮನ್ನು ಬಹಳ ಹೋಲುವ ಗೊರಿಲ್ಲಾಗಳಿಗೆ ಮಾತು ಕಲಿಸಲು ಅನೇಕರು ಪ್ರಯತ್ನಿಸಿದ್ದಾರೆ. ಈ ಪ್ರಯತ್ನಗಳಿಗೆ ದೊರೆತಿರುವ ಫಲ ಮಾತ್ರ ಅತ್ಯಲ್ಪ. ಹಲವು ಹತ್ತಾರು ಪದಗಳಿಗಿಂತ ಹೆಚ್ಚಿನ ಮಾತುಗಳನ್ನು ಇವುಗಳು ಕಲಿಯಲಾರವು. ಅವುಗಳು ಪ್ರದರ್ಶಿಸುವ ಅತ್ಯಂತ ಹೆಚ್ಚಿನ ಸಾಮರ್ಥ್ಯವೂ ಒಂದು ವರ್ಷದ ಮಗುವಿನ ಭಾಷಾ ಚಾತುರ್ಯಕ್ಕೆ ಸಮ ಎನಿಸದು. ನಮ್ಮ ಹಾಗೂ ಇತರರ ನಡುವಿನ ವ್ಯವಹಾರವೆಲ್ಲಾ ಮಾತಿನ ಮೂಲಕವೇ ನಡೆಯುತ್ತದೆ. ಕಾಡುಹರಟೆ ಹರಟದೆ ನಮ್ಮ ಜೀವಕ್ಕೆ ಹಿತ ಎನಿಸದು. ನಮ್ಮಲ್ಲಿರಬಹುದಾದ ದೃಷ್ಟಿದೋಷಕ್ಕೆ ಶಬ್ದಪ್ರಪಂಚ ಬಹುಮಟ್ಟಿಗೆ ಪರಿಹಾರ ದೊರಕಿಸಿಕೊಡುತ್ತದೆ. ಕಣ್ಣು ಕಾಣಿಸದ ಹಲವರು ನಡಿಗೆಯ ಶಬ್ದವನ್ನು ಆಲಿಸಿಯೇ ತಮ್ಮ ಪರಿಚಯದ ಅನೇಕ ಜನರನ್ನು ಯಶಸ್ವಿಯಾಗಿ ಗುರುತಿಸುತ್ತಾರೆ. ಕಿವಿ ಚೆನ್ನಾಗಿ ಕೇಳಿಸದಿದ್ದಾಗ ಸುತ್ತ ಮುತ್ತ ನಡೆಯುತ್ತಿರುವ ವಿಶ್ವ ವ್ಯಾಪಾರಗಳಲ್ಲಿ ಉತ್ಸಾಹ ಕಡಿಮೆಯಾಗುತ್ತದೆ. ಅನೇಕ ವಯೋವೃದ್ಧರಿಗೆ ಇದೇ ದೊಡ್ಡ ಸಮಸ್ಯೆ.

ನಮ್ಮ ಮದುವೆ ಮನೆಗಳ ಗಲಾಟೆ ನಿಜಕ್ಕೂ ವಿಶ್ವದ ಅತ್ಯಾಶ್ಚರ್ಯಗಳಲ್ಲಿ ಒಂದು. ಪುರೋಹಿತರು ಮಂತ್ರ ಗೊಣಗುತ್ತಿದ್ದಂತೇ ಎಲ್ಲರೂ ತಮ್ಮ ತಮ್ಮ ಮಾತುಕತೆಗಳಲ್ಲಿ ಪೂರ್ಣ ಮಗ್ನರಾಗಿ ಹೊರ ಪ್ರಪಂಚದ, ಅಲ್ಲಿಯ ಶಬ್ದಮಾಲಿನ್ಯದ ಅರಿವೇ ಇಲ್ಲದೆ ಆನಂದ ಸಾಗರದಲ್ಲಿ ತೇಲುತ್ತಿರುತ್ತಾರೆ. ಧಾರೆಯ ಸಮಯ ಸಮೀಪಿಸುತ್ತಿದ್ದಂತೆ ಕಿವಿಯ ತಮಟೆಗಳನ್ನು ಒಡೆಯಲು ಓಲಗದವರು ಶಕ್ತಿ ಮೀರಿ ಪ್ರಯತ್ನಿಸುತ್ತಾರೆ. ಜನಸಮೂಹ. ತಮ್ಮ ಆತ್ಮಮೂಲ್ಯ ಚರ್ಚೆಗಳಿಗೆ ಅಡ್ಡಿಬಾರದಂತೆ ತಮ್ಮ ಧ್ವನಿಯನ್ನೂ ತಾರಕಕ್ಕೆ ಏರಿಸುತ್ತಾರೆ. ಪರಸ್ಪರ ಕಿರುಚಿಕೊಳ್ಳುತ್ತಾರೆ. ಆಗ ಕಣ್ಣು ಮುಚ್ಚಿಕೊಂಡು, ಕಿವಿಗೊಟ್ಟು ಕೇಳಿ. ಎಷ್ಟು ನೂರು ಬಗೆಯ ಕಿರುಚಾಟಗಳು ! ಇದನ್ನೇ ಸಂತೋಷಕೂಟ ಎಂದುಕೊಳ್ಳುವ ನಮ್ಮ ಧೀಮಂತಿಕೆ ಮಿತಿಯಿಲ್ಲದ್ದು.

ಸೊಗಸಾದ ಸಂಗೀತ ಕಛೇರಿಯಲ್ಲಿ ನಮ್ಮ ಕಿವಿಯ ತಮಟೆಗೆ ಹೊಡೆಯುವ ಶಬ್ದದ ಪೆಟ್ಟು ಬಹುಶಃ ಮದುವೆ ಮನೆಗಿಂತ ಕಡಿಮೆಯಿರಲಾರದು. ಆದರೂ ಅದು ಏಕೆ ನಮಗೆ ಹಿತವೆನಿಸುವುದು ? ಸಂಗೀತಕ್ಕೂ ಬರಿಯ ಗದ್ದಲಕ್ಕೂ ವ್ಯತ್ಯಾಸವೇನು ? ಸಂಗೀತ ಲಯಬದ್ಧವಾಗಿ ಮಾಡುವ ಗದ್ದಲವೇ ಅಲ್ಲವೇ ? ಇದಕ್ಕೆ ನಿಖರವಾದ ವೈಜ್ಞಾನಿಕ ಉತ್ತರ ನಮಗೆ ಇನ್ನೂ ತಿಳಿದಿಲ್ಲ. ಪ್ರಪಂಚದ ಎಲ್ಲ ದೇಶಗಳ ಸಂಗೀತಕ್ಕೂ ನಿಯತಕಮದಲ್ಲಿ ಶಬ್ದ

ಮಾಡುವ ಪಕ್ಕವಾದ್ಯ ಇರಲೇಬೇಕು. ಇಂತಹ ಶಬ್ದ ಹೊರಡಿಸುವ ತಮಟೆಗಳು ಅತಿ ಶ್ರೇಷ್ಠ ಸಂಗೀತಕ್ಕಲ್ಲದೇ ''ಚೋಮನ'' ದುಗುಡ ಕಳೆಯಲೂ ಬೇಕು. ಹೀಗೆ ಹೊಮ್ಮುವ ಶಬ್ದದಿಂದ ನಮ್ಮ ಮನಸ್ಸಿನ ಮೇಲಾಗುವ ತೀವ್ರ ಪರಿಣಾಮವನ್ನು ಹಳ್ಳಿಯ ಜಾತ್ರೆಗಳಲ್ಲಿ ''ದೇವರು ಮೈಮೇಲೆ'' ಬರುವಾಗ ವೀಕ್ಷಿಸಬಹುದು. ನಿಯತಕ್ರಮದಲ್ಲಿ ಶಬ್ದ ಮಾಡುವುದು, ಮೈ ಕುಲುಕುವುದು ನಮ್ಮ ಸ್ವಭಾವ. ಏನೂ ತೋಚದಿದ್ದಾಗ ಶತಪಥ ತಿರುಗುತ್ತೇವೆ. ದೊಡ್ಡವ್ಯಕ್ತಿಗಳ ಭಾಷಣ, ಜನಪ್ರಿಯ ಹಾಡುಗಾರರ ಕಾರ್ಯಕ್ರಮ ಮುಗಿದ ನಂತರ ಪ್ರಾರಂಭವಾಗುವ ದೀರ್ಘ ಕರತಾಡನವನ್ನು ಗಮನಿಸಿ ಆಲಿಸಿ. ಮೊದಲಿಗೆ ಅಡ್ಡಾದಿಡ್ಡಿಯಾಗಿ ತಾಳ ಮೇಳಗಳಿಲ್ಲದೆ ಪ್ರಾರಂಭವಾಗುವ ಚಪ್ಪಾಳೆ ಅಲ್ಪ ಕಾಲದಲ್ಲೇ ಲಯಬದ್ಧವಾಗುತ್ತದೆ, ಎಲ್ಲರ ಕೈಗಳೂ ಜೊತೆಯಾಗಿ ತಟ್ಟಲು ಪ್ರಾರಂಭಿಸುತ್ತವೆ.

ಇದೇ ಬಗೆಯ ಶಬ್ದದ ಏಕತಾನತೆಯನ್ನು ಕೀಟ ಪ್ರಪಂಚದಲ್ಲಿಯೂ ಕಾಣಬಹುದು. ನಮ್ಮ ಪಶ್ಚಿಮ ಘಟ್ಟಗಳ ಕೆಲವು ಕಡೆಗಳಲ್ಲಿ, ಅದರಲ್ಲೂ ವಿಶೇಷವಾಗಿ ಬೇಸಿಗೆ ಶಿಬಿರ ಎನ್ನಿಸಿರುವ ಮಹಾರಾಷ್ಟ್ರದ ಮಹಾಬಲೇಶ್ವರದ ಸುತ್ತಮುತ್ತಲ ಕಾಡಿನಲ್ಲಿ, ಒಂದು ಜಾತಿಯ ಕೀಟಗಳು ಮನೆ ಮಾಡಿವೆ. ಇವು ರಾತ್ರಿಯಿಡೀ ಗದ್ದಲವಿಲ್ಲದೆ ಮಲಗುತ್ತವೆ. ಸೂರ್ಯೋದಯವಾದ ಒಂದೆರಡು ಗಂಟೆಗಳ ನಂತರ ಗಂಡು ಕೀಟಗಳು ಹೆಣ್ಣು ಕೀಟಗಳನ್ನು ಕರೆಯಲು ಪ್ರಾರಂಭಿಸುತ್ತವೆ. ಒಂದು ಕೀಟ ತನ್ನ ಸ್ವಾಗತ ಗೀತೆಯನ್ನು ಪ್ರಾರಂಭಿಸುತ್ತಿದ್ದಂತೆ ಉಳಿದೆಲ್ಲ ಕೀಟಗಳು ಅದನ್ನು ಸೇರಿಕೊಳ್ಳುತ್ತವೆ. ಹಲವಾರು ಸಲ ಕೂಗುವುದರೊಳಗೇ ಅವುಗಳೆಲ್ಲದರ ಕೊರಳು ಒಟ್ಟಾಗಿ ಕಿವಿಗಡಚಿಕ್ಕುವಂತೆ ಒಟ್ಟಾಗಿ ಹಾಡಲು ಪ್ರಾರಂಭಿಸುತ್ತವೆ. ಇಡೀ ಕಾಡೇ ಅವುಗಳ ಕಿರುಚಾಟವನ್ನು ಪ್ರತಿಧ್ವನಿಸುತ್ತದೆ. ಹಲವಾರು ನಿಮಿಷಗಳ ಈ ಸಂಗೀತವನ್ನು ಒಂದು ಕೀಟ ನಿಲ್ಲಿಸುತ್ತಿದ್ದಂತೆ ಎಲ್ಲ ಕೀಟಗಳೂ ನಿಲ್ಲಿಸಿ ಸುಮ್ಮನಾಗುತ್ತವೆ. ಇಡೀ ಕಾಡಿನಲ್ಲಿ ಒಮ್ಮೆಗೇ ಮೌನ ಆವರಿಸುತ್ತದೆ. ಈ ಕಿರುಚಾಟ, ಮೌನದ ಪುನರಾವರ್ತನೆ ಸೂರ್ಯಾಸ್ತಮಾನದವರೆಗೂ ನಿಲ್ಲದೆ ನಡೆಯುತ್ತದೆ.

ಶಬ್ದವು ಗಾಳಿಯಲ್ಲಿ ಹೊರಡುವ ತರಂಗ ಸಮೂಹ. ಆದ್ದರಿಂದ ಗಾಳಿಯಿಲ್ಲದೆ ಶಬ್ದವಿರಲಾರದು. ಗಾಳಿಯಲ್ಲಿ ಶಬ್ದ ಚಲಿಸುವ ವೇಗ, ಬೆಳಕಿನ ವೇಗಕ್ಕೆ ಹೋಲಿಸಿದರೆ, ಆಮೆಯ ನಡಿಗೆ. ಬೆಳಕು ಸೆಕೆಂಡಿಗೆ ೩೦೦,೦೦೦ ಕಿಲೋಮೀಟರ್ ಧುಮ್ಮಿಕ್ಕಿದರೆ, ಶಬ್ದ ಬರಿಯ ೩೩೦ ಮೀಟರುಗಳು ಮಾತ್ರ ತೆವಳುತ್ತದೆ. ಆದ್ದರಿಂದಲೇ ಒಂದೇ ಸ್ಥಳದಲ್ಲಿ, ಕಾಲದಲ್ಲಿ ಗುಡುಗು, ಮಿಂಚು ಹೊರಟರೂ, ಮಿಂಚು ನಮ್ಮ ಕಣ್ಣಿಗೆ ಕಾಣಿಸಿದ ಸ್ವಲ್ಪ ಸಮಯದ ಬಳಿಕವೇ ಗುಡುಗು ಕೇಳಿಸುತ್ತದೆ. ಹೊಳೆಯ ಆಚೆ ದಂಡೆಯಲ್ಲಿ ಬಟ್ಟೆ ಒಗೆಯುತ್ತಿದ್ದರೆ, ಬಟ್ಟೆ ಕಲ್ಲನ್ನು ಕುಟ್ಟಿದ್ದು ಕಂಡ ಬಳಿಕವೇ ಅದರ ಶಬ್ದ ನಮಗೆ ಕೇಳಿಸುವುದನ್ನು ಗಮನಿಸಬಹುದು. ಹೊರಟ ಜಾಗದಿಂದ ದೂರ ಸರಿದಷ್ಟೂ ಶಬ್ದ ಕ್ಷೀಣಿಸುತ್ತದೆ. ದೂರ ಎರಡರಷ್ಟಾದರೆ, ಶಬ್ದ ನಾಲ್ಕರಷ್ಟು ಕಡಿಮೆಯಾಗುತ್ತದೆ. ದೂರ ಮೂರರಷ್ಟಾದರೆ ಶಬ್ದ ಒಂಬತ್ತರಷ್ಟು ಕಡಿಮೆ. ದೂರ ಹೆಚ್ಚಿದಂತೆ ಅದರ ವರ್ಗದಷ್ಟು ಶಬ್ದದ ತೀವ್ರತೆ ಕಡಿಮೆಯಾಗುತ್ತದೆ. ಆದ್ದರಿಂದಲೇ ವಯಸ್ಸಾಗುತ್ತಿದ್ದಂತೆ ''ಸ್ವಲ್ಪ ಹತ್ತಿರ ಬಂದು ಮಾತನಾಡಬಾರದೇ'' ಎಂದುಕೊಳ್ಳಲು ಪ್ರಾರಂಭಿಸುತ್ತೇವೆ. ಶಬ್ದದ ವೇಗ ಸೆಕೆಂಡಿಗೆ ಬರಿಯ ೩೩೦ ಮೀಟರುಗಳಿರುವುದರಿಂದ ಬಲಶಾಲಿ ವಿಮಾನಗಳು ಅದಕ್ಕಿಂತಲೂ ಹೆಚ್ಚಿನ ವೇಗದಲ್ಲಿ ಚಲಿಸಬಲ್ಲವು. ಆಗ ಶಬ್ದ ವಿಮಾನವನ್ನು ಅಟ್ಟಿಸಿಕೊಂಡು ಬರುತ್ತಿದ್ದರೂ, ವಿಮಾನ ಅದಕ್ಕೆ ಸಿಲುಕದೆ ಮುಂದೋಡುತ್ತದೆ. ವಿಮಾನದ ಹಿಂದೆ ಕೋನಾಕಾರದ ಶಬ್ದದ ಅಲೆ ಏಳುತ್ತದೆ. ಛಳಿಗಾಲದಲ್ಲಿ ಉಷ್ಣತೆ ಕಡಿಮೆಯಾಗಿ, ಶಬ್ದದ ವೇಗವೂ ಕಡಿಮೆಯಾಗುತ್ತದೆ. ಆದರೆ, ಈ ಪುಟ್ಟ ವ್ಯತ್ಯಾಸ ನಮ್ಮ ಗಮನಕ್ಕೆ ಬರುವುದಿಲ್ಲ.

ಬರಿಗಣ್ಣಿನಿಂದ ನೋಡಬಹುದಾದ, ನಮಗೆ ಪರಿಚಿತ ಅಲೆಗಳೆಂದರೆ, ಸಮುದ್ರದ ಅಲೆಗಳು. ಯಾವುದೇ ತರಂಗ ಸಮೂಹಕ್ಕೆ ಎರಡು ಮುಖ್ಯ ಗುಣಗಳಿವೆ. ಒಂದು ತರಂಗದ ತೀವ್ರತೆ ಅಥವಾ ಎತ್ತರ, ಇನ್ನೊಂದು ಕಂಪನ ಸಂಖ್ಯೆ. ಅಲೆ ಹಾಯ್ದು ಹೋದಾಗ ನೀರು ಸಮುದ್ರ ಮಟ್ಟದಿಂದ ಎಷ್ಟು ಎತ್ತರ ಏಳುತ್ತದೆ ಎನ್ನುವುದು ಅದರ ತೀವ್ರತೆಯನ್ನು ಸೂಚಿಸುತ್ತದೆ. ತರಂಗದ ತೀವ್ರತೆ ಅಲೆ ಒಯ್ಯುತ್ತಿರುವ ಶಕ್ತಿಯ ಪ್ರಮಾಣವನ್ನು ತೋರಿಸುತ್ತದೆ. ಎತ್ತರ ದುಪ್ಪಟ್ಟಾದರೆ, ಶಕ್ತಿ ನಾಲ್ಕು ಪಟ್ಟಾಗುತ್ತದೆ. ಎತ್ತರ ಮೂರು ಪಟ್ಟಾದರೆ, ಶಕ್ತಿ ಒಂಬತ್ತು ಪಟ್ಟಾಗುತ್ತದೆ. ಶಕ್ತಿ, ತೀವ್ರತೆಯ ವರ್ಗಕ್ಕೆ ಅನುಗುಣವಾಗಿ ಹೆಚ್ಚುತ್ತದೆ. ಕಂಪನ ಸಂಖ್ಯೆ ಒಂದು ಸೆಕೆಂಡಿಗೆ ಎಷ್ಟು ಅಲೆಗಳು ಒಂದು ಬಿಂದುವನ್ನು ಹಾಯ್ದುಹೋಗುತ್ತವೆ ಎಂಬುದನ್ನು ಸೂಚಿಸುತ್ತದೆ. ಎರಡು ಅನುಕ್ರಮ ತರಂಗಗಳ ನಡುವಿನ ದೂರವನ್ನು ತರಂಗದೂರ ಎನ್ನುತ್ತೇವೆ. ತರಂಗದೂರವನ್ನೂ ಕಂಪನ ಸಂಖ್ಯೆಯನ್ನೂ ಗುಣಿಸಿದರೆ ಅಲೆಯ ವೇಗ ದೊರೆಯುತ್ತದೆ.

ಶಬ್ದದ ಅಲೆಗಳಿಗೂ ಸಮುದ್ರದ ಅಲೆಗಳಿಗೂ ಒಂದು ಮುಖ್ಯ ವ್ಯತ್ಯಾಸವಿದೆ. ಸಮುದ್ರದ ಅಲೆಗಳಲ್ಲಿ ನೀರಿನ ಏರಿಳಿತವು ಅಲೆ ಚಲಿಸುವ ದಿಕ್ಕಿಗೆ ಲಂಬವಾಗಿರುತ್ತವೆ. ಅಲೆ ಸಮುದ್ರಮಟ್ಟದಲ್ಲಿ ಚಲಿಸುತ್ತಿದ್ದರೆ, ನೀರು ಮೇಲಕ್ಕೂ, ಕೆಳಕ್ಕೂ ಆವರ್ತನ ಚಲನೆ ನಡೆಸುತ್ತದೆ. ಶಬ್ದ ಗಾಳಿಯಲ್ಲಿ ಹಾಯುವ ತರಂಗ ಸಮೂಹ. ಆದರೆ, ಇಲ್ಲಿ ಗಾಳಿ ಹೊಯ್ದಾಡುವುದು ಚಲನೆಯ ದಿಕ್ಕಿನಲ್ಲೇ. ಈ ಗಾಳಿಯ ಹೊಯ್ದಾಟದಿಂದ, ಶಬ್ದ ಹಾದುಹೋಗುವ ದಾರಿಯಲ್ಲಿ ಗಾಳಿಯ ಒತ್ತಡ ಸಾಧಾರಣ ಒತ್ತಡಕ್ಕಿಂತ ಒಮ್ಮೆ ಹೆಚ್ಚು, ಒಮ್ಮೆ ಕಡಿಮೆಯಾಗಿ ಬದಲಾಗುತ್ತಿರುತ್ತದೆ. ಒಂದು ಸೆಕೆಂಡಿಗೆ ಎಷ್ಟು ಸಲ ಆವರ್ತನೆಯಾಗುತ್ತದೆ ಎನ್ನುವುದು ಕಂಪನ ಸಂಖ್ಯೆಯನ್ನು ಸೂಚಿಸುತ್ತದೆ. ಹೆಚ್ಚಿನ ಒತ್ತಡದಲ್ಲಿರುವ ಎರಡು ಅನುಕ್ರಮ ಬಿಂದುಗಳ ನಡುವಿನ ದೂರ ತರಂಗದೂರ. ವಾತಾವರಣದ ಒತ್ತಡಕ್ಕಿಂತ ಎಷ್ಟು ಹೆಚ್ಚು ಒತ್ತಡ ತಲುಪುತ್ತದೆಯೋ ಅದು ತೀವ್ರತೆಯನ್ನು ಸೂಚಿಸುತ್ತದೆ. ಶಬ್ದ ಎಷ್ಟು ಜೋರು ಎಂಬುದನ್ನು ತೀವ್ರತೆ ನಿರ್ಧರಿಸುತ್ತದೆ. ಕಂಪನ ಸಂಖ್ಯೆ ಶಬ್ದ ನಮ್ಮ ಕಿವಿಗೆ ಹೇಗೆ ಕೇಳಿಸುತ್ತದೆ ಎನ್ನುವುದನ್ನು ನಿರ್ಧರಿಸುತ್ತದೆ. ಕಂಪನ ಸಂಖ್ಯೆ ಹೆಚ್ಚಿದ್ದಾಗ ಶಬ್ದ ನಮಗೆ ತಾರಕ ಸ್ಥಾಯಿಯಾಗಿಯೂ, ಕಡಿಮೆ ಇದ್ದಾಗ ಮಂದ್ರ ಸ್ಥಾಯಿಯಾಗಿಯೂ ಕೇಳಿಸುತ್ತದೆ. ನಮ್ಮ ಕಿವಿಯ ತಮಟೆಗೆ ಸೆಕೆಂಡಿಗೆ ೨೦ಕ್ಕಿಂತಲೂ ಕಡಿಮೆ ಕಂಪನ ಸಂಖ್ಯೆಯ ಶಬ್ದ ಬಡಿದರೆ ಕೇಳಿಸುವುದಿಲ್ಲ. ಹಾಗೆಯೇ ೨೦,೦೦೦ಕ್ಕಿಂತ ಹೆಚ್ಚಿನ ಕಂಪನ ಸಂಖ್ಯೆಯ ಶಬ್ದಗಳೂ ಕೇಳಿಸುವುದಿಲ್ಲ. ಇವುಗಳ ನಡುವಿನ ಕಂಪನ ಸಂಖ್ಯೆ ಇರುವ ಶಬ್ದ ಕಿವಿಯ ತಮಟೆಗೆ ತಲುಪಿದರೆ ಶಬ್ದದಿಂದಾದ ತಮಟೆಯ ಕಂಪನ ವಿದ್ಯುತ್ ರೂಪದಲ್ಲಿ ನಮ್ಮ ಮೆದುಳಿಗೆ ರವಾನೆಯಾಗುತ್ತದೆ. ಮೆದುಳು ಆ ಸಂದೇಶವನ್ನು ಶಬ್ದದ ಅನುಭವವನ್ನಾಗಿ ಪರಿವರ್ತಿಸುತ್ತದೆ. ಆದ್ದರಿಂದಲೇ ನಮಗೆ ಕಿವಿ ಕೇಳಿಸಬೇಕಾದರೆ, ಕಿವಿಯ ತಮಟೆಯಲ್ಲದೆ ಅಲ್ಲಿಂದ ಮೆದುಳಿಗೆ ಸಂದೇಶ ಒಯ್ಯುವ ನರಗಳೂ, ಆ ಸಂದೇಶವನ್ನು ಅರ್ಥೈಸುವ ಮೆದುಳಿನ ಚಟುವಟಿಕೆಯೂ ಜಾಗ್ರತವಾಗಿರಬೇಕು. ನಾಯಿಗಳಂತಹ ಕೆಲವು ಪ್ರಾಣಿಗಳು ೨೦ಕ್ಕೂ ಕಡಿಮೆ ಮತ್ತು ೨೦,೦೦೦ಕ್ಕೂ ಹೆಚ್ಚು ಕಂಪನ ಸಂಖ್ಯೆಯುಳ್ಳ ಶಬ್ದಗಳನ್ನು ಕೇಳಲು ಶಕ್ತವಾಗಿವೆ. ಎಲ್ಲ ಪ್ರಾಣಿಗಳ ಕಿವಿಗಳೂ ತಮಟೆಗಳನ್ನು ನೆಚ್ಚಿಯೇ ಕೆಲಸ ನಿರ್ವಹಿಸುವುದಿಲ್ಲ. ಕೀಟಗಳ ಕಿವಿಗಳಲ್ಲಿ ಶಬ್ದದ ಕಂಪನಗಳಿಗೆ ಸ್ಪಂದಿಸುವ ಸೂಕ್ಷ್ಮ ರೋಮಗಳಿರುತ್ತವೆ. ಶಬ್ದ ತರಂಗಗಳಿಂದಾಗುವ ರೋಮಗಳ ಕಂಪನದಿಂದ ಕೀಟ ಶಬ್ದಗ್ರಹಣ ಮಾಡುವುದಲ್ಲದೆ ಅದು ಬರುತ್ತಿರುವ ದಿಕ್ಕನ್ನೂ ಗ್ರಹಿಸುತ್ತದೆ.



ಶ್ವಾಸಕೋಶದಲ್ಲಿ ತುಂಬಿಕೊಂಡ ಗಾಳಿಯನ್ನು ಧ್ವನಿಪೆಟ್ಟಿಗೆಯ ಮುಖಾಂತರ ಹಾಯಿಸಿ ನಾವು ಗಲಾಟೆ ಮಾಡುತ್ತೇವೆ. ಆದ್ದರಿಂದಲೇ ಶ್ವಾಸಕೋಶದಲ್ಲಿ ತುಂಬಿಕೊಂಡಿರುವ ಗಾಳಿಯನ್ನು ಪೂರ್ಣ ಹೊರಗೆ ಬಿಟ್ಟ ನಂತರ ನಮಗೆ ಮಾತನಾಡಲು ಆಗುವುದಿಲ್ಲ. ಪ್ರಪಂಚದ ಯಾವ ಇಬ್ಬರ ಧ್ವನಿಪೆಟ್ಟಿಗೆಯೂ ಒಂದೇ ಆಕಾರ ಉಳ್ಳದ್ದಾಗಿರದು. ಆದ್ದರಿಂದಲೇ ಎಲ್ಲರೂ ಅವರ ಸ್ವಂತ ಧ್ವನಿಯಲ್ಲೇ ಮಾತನಾಡುತ್ತಾರೆ. ನಮ್ಮ ಧ್ವನಿಪೆಟ್ಟಿಗೆ ನಮ್ಮನ್ನು ಹಡೆದ ತಂದೆ, ತಾಯಿಯರ ಪೆಟ್ಟಿಗೆಯನ್ನೇ ಹೋಲುವುದರಿಂದ, ನಮ್ಮ ಧ್ವನಿಗೂ, ಅವರ ಧ್ವನಿಗೂ ಹೋಲಿಕೆ ಇರುತ್ತದೆ. ಎಷ್ಟೋ ವೇಳೆ ನಾವು ಜನರ ಮುಖವನ್ನು ಮರೆಯುತ್ತೇವೆ. ಆದರೆ ಅವರ ಧ್ವನಿಯನ್ನು ಮರೆಯುವುದು ಕಷ್ಟ. ವಾಹನಗಳ ಹುಚ್ಚು ಹೆಚ್ಚುತ್ತಿರುವ ಇಂದಿನ ದಿನಗಳಲ್ಲಿ, ಪುಟ್ಟ ಮಕ್ಕಳೂ ಶಬ್ದ ಕೇಳಿಯೇ ಅನೇಕ ದ್ವಿಚಕ್ರವಾಹನಗಳ, ಕಾರುಗಳ ಮಾದರಿಯನ್ನು ಗುರುತಿಸಲು ಕಲಿತಿರುವುದನ್ನು ಕಾಣುತ್ತೇವೆ. ನಮ್ಮ ಮೆದುಳಿನಲ್ಲಿ ಲೆಕ್ಕವಿಲ್ಲದಷ್ಟು ಶಬ್ದಗಳ ಮುದ್ರಣವಿದೆ. ದೂರದರ್ಶನದಲ್ಲಿ ಅಂತ್ಯಾಕ್ಷರೀ ಆಟವನ್ನು ವೀಕ್ಷಿಸಿದಾಗ, ಇಲ್ಲಿಯವರೆಗೆ ಹೊರಬಂದಿರುವ ಎಲ್ಲ ಸಿನೆಮಾ ಹಾಡುಗಳೂ ಪುಟ್ಟ ಮೆದುಳಿನಲ್ಲಿ ಹೇಗೆ ಮುದ್ರಿತವಾಗಿರಬಹುದು ಎಂದು ಆಶ್ಚರ್ಯಪಡದಿರಲು ಆಗುವುದಿಲ್ಲ. ಇಂತಹ ಶಕ್ತಿಯೇ ನಮ್ಮ ಹಿಂದಿನ ಚತುರ್ವೇದಿಗಳಿಗೂ ಇದ್ದುದರಿಂದ ಬರಹವಿಲ್ಲದ ಕಾಲದಲ್ಲಿಯೂ ವೇದಪಾಠಗಳನ್ನು ಉಳಿಸಿಕೊಳ್ಳುವುದು ಸಾಧ್ಯವಾಯಿತು. ಅನೇಕ ಭಾಷೆಗಳನ್ನು ನಿರರ್ಗಳವಾಗಿ ಮಾತನಾಡಬಲ್ಲ ಲೆಕ್ಕವಿಲ್ಲದಷ್ಟು ಜನ ನಮ್ಮಲ್ಲಿ ಇದ್ದಾರೆ. ಇದನ್ನೆಲ್ಲಾ ನಮ್ಮ ಮೆದುಳು ಹೇಗೆ ಸಾಧ್ಯವಾಗಿಸುತ್ತದೆ ಎಂಬುದನ್ನು ಇನ್ನೂ ನಾವು ವೈಜ್ಞಾನಿಕವಾಗಿ ತಿಳಿಯಬೇಕಾಗಿದೆ.

ಶಬ್ದ ತರಂಗ ನಮ್ಮ ಕಿವಿಯ ತಮಟೆಯ ಮೇಲೆ ಬಿದ್ದಾಗ ಅದು ಹೇರುವ ಒತ್ತಡ ಅತ್ಯಲ್ಪ. ಇದಕ್ಕಿಂತ ಲಕ್ಷಾಂತರಪಟ್ಟು ಅಧಿಕ ಒತ್ತಡವನ್ನು ನಮ್ಮ ಸುತ್ತಲಿನ ವಾತಾವರಣ ಸತತ ಕಿವಿಯ ತಮಟೆಯ ಮೇಲೆ ಬಡಿಯುತ್ತಲೇ ಇರುತ್ತದೆ. ಆದರೆ ನಮ್ಮ ಕಿವಿಯ ತಮಟೆಯ ಒಳಗಿರುವ ಕೋಣೆಯಲ್ಲಿ ಗಾಳಿಯಿದ್ದು, ಅದು ತಮಟೆಯ ಮೇಲೆ ಒಳಗಿನಿಂದ ಹೊರಕ್ಕೆ ಒತ್ತಡ ಹೇರುತ್ತದೆ. ಇದು ವಾತಾವರಣದ ಒತ್ತಡಕ್ಕೆ ಸಮವಾಗಿರುತ್ತದೆ. ಆದ್ದರಿಂದ, ಶಬ್ದ ಉಂಟುಮಾಡುವ ಮೇಲಿನ ಒತ್ತಡವನ್ನು ಗ್ರಹಿಸಲು ಸಾಧ್ಯ. ಕಿಟಕಿಗಳಿಲ್ಲದ ಕೋಣೆಯಲ್ಲಿ ಬಾಗಿಲನ್ನು ಒಮ್ಮೆಲೇ ತೆಗೆದರೆ ಅಥವಾ ಮುಚ್ಚಿದರೆ ವಾತಾವರಣದ ಒತ್ತಡ ಒಮ್ಮೆಗೇ ಬಹಳ ಬದಲಿಸಬಹುದು. ಆಗ ನಮ್ಮ ಕಿವಿ ಕ್ಷಿಪ್ರವಾಗಿ ಹೊಸ ಒತ್ತಡಕ್ಕೆ ಹೊಂದಿಕೊಳ್ಳದಿದ್ದರೆ, ನಮಗೆ ಕಿವಿ ಗುನುಗುಟ್ಟುವ ಅನುಭವವಾಗುತ್ತದೆ. ಇದೇ ರೀತಿಯ ಇನ್ನೂ ತೀವ್ರತರದ ಅನುಭವ ಒಮ್ಮೆಗೇ ವೇಗವಾಗಿ ಚಲಿಸಲು ಪ್ರಾರಂಭಿಸುವ ಲಿಫ್ಟುಗಳಲ್ಲಿ ಹಾಗೂ ವಿಮಾನ ಒಮ್ಮೆಗೇ ಎತ್ತರದಿಂದ ಇಳಿದಾಗ ಆಗುತ್ತದೆ. ಎಷ್ಟೋ ವೇಳೆ ವಿಮಾನ ಇಳಿದ ಮೇಲೆಯೂ ಹಲವಾರು ನಿಮಿಷಗಳು ನಮ್ಮ ಕಿವಿ ಸರಿಯಾಗಿ ಕೆಲಸ ಮಾಡದಿರಬಹುದು. ವಯಸ್ಸಾದ ಕೆಲವರಲ್ಲಿ ಇಂತಹ ಒತ್ತಡ ನಿಯಂತ್ರಣ ಸರಿಯಾಗಿ ಕೆಲಸ ಮಾಡದೆ ಪದೇ ಪದೇ ಕಿವಿ ಗುಂಯ್‌ಗುಟ್ಟುವ, ಒಂದೇ ಸಮನೆ ಕೇಳಿಸುವ ಏಕತಾನ ಧ್ವನಿಯಿಂದ ಬಳಲುತ್ತಾರೆ.

ಮಲಗಿದ ಕೆಲವೇ ಕ್ಷಣಗಳಲ್ಲಿ ಸೊಳ್ಳೆಯ ಸಂಗೀತ ಪ್ರಾರಂಭವಾಗುವುದನ್ನು ಗಮನಿಸಿದ್ದೀರಲ್ಲಾ? ಈ ಸೊಳ್ಳೆಯ ಗಲಾಟೆಗೆ ಹೋಲಿಸಿದರೆ, ನಾವು ಸಾಧಾರಣವಾಗಿ ಮಾತನಾಡುವಾಗ ಮಾಡುವ ಗಲಾಟೆ ಲಕ್ಷಾಂತರಪಟ್ಟು ಶಕ್ತಿಶಾಲಿ. ಇಷ್ಟು ವೈಶಾಲ್ಯವಿರುವ ಶಬ್ದದ ಮಟ್ಟವನ್ನು ಸೂಚಿಸಲು ಸರಿಹೋಗುವ ಮಾಪನ ಡೆಸಿಬೆಲ್. ಈ ಮಾಪನದಲ್ಲಿ ''ಲಾಗರಿತಂ'' ಕೋಷ್ಟಕ ಅನುಸರಿಸಿ ತೀವ್ರತೆಯನ್ನು ಸೂಚಿಸುತ್ತಾರೆ. ಈ ಮಾಪನದಲ್ಲಿ ಶಕ್ತಿ ಹತ್ತುಪಟ್ಟು ಹೆಚ್ಚಿದರೆ, ಅದನ್ನು ಸೂಚಿಸುವ ಸಂಖ್ಯೆ ಒಂದರಷ್ಟು ಮಾತ್ರ ಹೆಚ್ಚುತ್ತದೆ. ಶಕ್ತಿ ನೂರುಪಟ್ಟು ಹೆಚ್ಚಿದರೆ, ಸೂಚಿಸುವ ಸಂಖ್ಯೆಯ ಹೆಚ್ಚಳ ೨. ಕೈ ಗಡಿಯಾರ ಹೊರಡಿಸುವ ಶಬ್ದ ೨೦ ಡೆಸಿಬೆಲ್ ಆದರೆ ನಮ್ಮ ಸಾಧಾರಣ ಮಾತು ೬೦ ಡೆಸಿಬೆಲ್. ಸೈಲೆನ್ಸರ್ ತೆಗೆದ ಮೋಟಾರ್‌ಸೈಕಲ್ ೮೦-೯೦ ಡೆಸಿಬೆಲ್ ಶಬ್ದ ಮಾಡುತ್ತದೆ. ೧೦೦ ಮೀಟರ್ ದೂರದಿಂದ ಜೆಟ್ ವಿಮಾನ ನಮ್ಮ ಕಿವಿಯ ಮೇಲೆ ೧೩೦ ಡೆಸಿಬೆಲ್ ಶಬ್ದ ಬಡಿಯುತ್ತದೆ. ದಿನಂಪ್ರತಿ ೮ ಘಂಟೆಗಿಂತ ಹೆಚ್ಚು ಕಾಲ ೯೦ ಡೆಸಿಬೆಲ್ ಗದ್ದಲದಲ್ಲಿ ಇದ್ದರೆ ನಮ್ಮ ಕಿವಿಗೆ ಹಾನಿಯಾಗಬಹುದು. ೧೦೦ ಡೆಸಿಬೆಲ್ ಗಲಾಟೆಯನ್ನು ೨ ಘಂಟೆಗಳಿಗಿಂತ ಹೆಚ್ಚು ಕೇಳಬಾರದು. ಇಂದಿನ ಯುವಪೀಳಿಗೆ ಇಷ್ಟಪಡುವ ರಾಕ್ ಸಂಗೀತಗಳು ಈ ಮಟ್ಟದ ಶಬ್ದಮಾಲಿನ್ಯ ಮಾಡಬಲ್ಲವು.

ನಮಗೆ ಎರಡು ಕಿವಿ ಇರುವುದರಿಂದ ಶಬ್ದ ಬಂದ ದಿಕ್ಕನ್ನು ಅರಿಯಲು ಸಾಧ್ಯವಾಗುತ್ತದೆ. ಒಂದೆಡೆಯಿಂದ ಶಬ್ದ ಬರುತ್ತಿದ್ದರೆ ಯಾವ ಕಿವಿ ಶಬ್ದ ಹೊರಡುತ್ತಿರುವ ಬಿಂದುವಿಗೆ ಹತ್ತಿರದಲ್ಲಿದೆಯೋ ಅದಕ್ಕೆ ಬೀಳುವ ಶಬ್ದದ ತೀವ್ರತೆ ಇನ್ನೊಂದು ಕಿವಿಗೆ ಬೀಳುವ ತೀವ್ರತೆಗಿಂತ ಹೆಚ್ಚಿರುತ್ತದೆ. ಈ ಎರಡೂ ಕಿವಿಗಳ ಮೇಲೆ ಬೀಳುವ ಅಲ್ಪ ವ್ಯತ್ಯಾಸದಿಂದಲೇ ನಮ್ಮ ಮೆದುಳು ಶಬ್ದ ಬರುತ್ತಿರುವ ದಿಕ್ಕನ್ನು ಪತ್ತೆ ಹಚ್ಚುತ್ತದೆ. ಸಂಗೀತ ಕಛೇರಿಗಳಲ್ಲಿ ನಮಗೆ ಧ್ವನಿ ಜೀವಂತ ಎನ್ನಿಸುವುದು, ಹಾಡುವವರ ಮತ್ತು ಪಕ್ಕವಾದ್ಯದವರ ನಾದಗಳು ಬೇರೆ ಬೇರೆ ಬಿಂದುಗಳಿಂದ ಹೊರಟು ನಮ್ಮ ಎರಡು ಕಿವಿಗಳಿಗೆ ಭಿನ್ನ ತೀವ್ರತೆಗಳೊಂದಿಗೆ ತಲುಪುವುದೇ ಕಾರಣ. ನಮ್ಮ ಕಿವಿಗಳಂತೆ, ಎರಡು ಧ್ವನಿ ಮುದ್ರಣ ಯಂತ್ರಗಳನ್ನು ಪ್ರತ್ಯೇಕ ಜಾಗಗಳಲ್ಲಿ ಸ್ಥಾಪಿಸಿ, ಅವುಗಳಲ್ಲಿ ಭಿನ್ನವಾಗಿ ಮುದ್ರಿತವಾಗುವ ಧ್ವನಿಗಳನ್ನು ಎರಡು ಕಿವಿಗಳಿಗೆ ಪ್ರತ್ಯೇಕವಾಗಿ ತಲುಪುವಂತೆ ಮಾಡಿದರೆ, ಮುದ್ರಿತ ಧ್ವನಿಯೂ ಜೀವಂತ ಕಛೇರಿಯಂತೆಯೇ ಕೇಳಿಸುತ್ತದೆ. ಇದೇ ''ಸ್ಟೀರಿಯೋ ಸಂಗೀತದ'' ಗುಟ್ಟು.

ಚಲಿಸುತ್ತಿರುವ ಮಾಧ್ಯಮದಿಂದ ಹೊರಟ ಶಬ್ದ ನಮ್ಮ ಕಿವಿಗೆ ಬಿದ್ದಾಗ ಅದರ ಕಂಪನ ಸಂಖ್ಯೆ ಬದಲಾದಂತೆ ನಮಗೆ ಕೇಳಿಸುತ್ತದೆ. ಶಬ್ದ ಹೊಮ್ಮುತ್ತಿರುವ ಬಿಂದು ನಮ್ಮ ಕಡೆಗೆ ವೇಗದಿಂದ ಬರುತ್ತಿದ್ದಾಗ ಕಂಪನ ಸಂಖ್ಯೆ ಹೆಚ್ಚಿದ ಭಾಸವಾಗುತ್ತದೆ. ಇದರಿಂದ ಸ್ಥಾಯಿ ಬದಲಾವಣೆಯಾದಂತೆ ಕೇಳಿಸುತ್ತದೆ. ಆದ್ದರಿಂದಲೇ ರೈಲು ಹಳಿಯ ಪಕ್ಕ ನಿಂತಿದ್ದಾಗ ಅದು ಕೂಗುತ್ತಾ ನಮ್ಮ ಕಡೆ ಬರುವಾಗ ತಾರಕ ಸ್ಥಾಯಿಯಲ್ಲಿಯೂ, ನಮ್ಮಿಂದ ದೂರ ಹೋಗುತ್ತಿರುವಾಗ ಮಂದ್ರಸ್ಥಾಯಿಯಲ್ಲಿಯೂ ಕಿರುಚುತ್ತಿರುವಂತೆ ಕೇಳಿಸುತ್ತದೆ.

ಬಾಯಿಯ ಆಕಾರ, ನಾಲಿಗೆಯ ಸ್ಥಾನ, ಉಸಿರುಬಿಡುವ ಪಟ್ಟು ಮುಂತಾದುವನ್ನೆಲ್ಲಾ ನಿಯಂತ್ರಿಸಿ, ನಮಗೆ ಶಬ್ದದ ಕಂಪನ ಸಂಖ್ಯೆಯನ್ನು ನಿಯಂತ್ರಿಸುವ ಶಕ್ತಿಯಿದೆ. ಪ್ರತಿ ಭಾಷೆಯೂ ವರ್ಣಮಾಲೆಯನ್ನು ಸೂಚಿಸಲು ತನ್ನದೇ ಆದ ಕಂಪನ ಸಂಖ್ಯಾಸ್ಥಾನಗಳನ್ನು ರೂಢಿಸಿಕೊಂಡಿದೆ. ನಮ್ಮ ಭಾಷೆಗೆ ಬೇಕಾದ ಕಂಪನ ಸಂಖ್ಯೆಯ ಶಬ್ದಗಳನ್ನು ಹೊರಡಿಸಲು ನಾವು ಬಾಲ್ಯದಲ್ಲಿ ಸಹಜವಾಗಿ ಕಲಿಯುತ್ತೇವೆ.

ಸುದ್ದಿ ಚಿತ್ರ

## ಕಾಸರಗೋಡಿನಲ್ಲಿ ಪುಸ್ತಕ ಪ್ರದರ್ಶನ



ಜನರಿಗೆ ಒಳ್ಳೆಯ ಓದನ್ನು ಒದಗಿಸುವುದು ಮಾತ್ರವಲ್ಲದೆ, ಓದುಗರಿರುವಲ್ಲಿಗೇ ಪುಸ್ತಕ ಒಯ್ಯುವ ಕಾಯಕವನ್ನು ನವಕರ್ನಾಟಕ ಪ್ರಕಾಶನ ಕಳೆದ ೩೦ ವರ್ಷಗಳಿಂದ ತಪ್ಪದೇ ಮಾಡುತ್ತ ಬರುತ್ತಿದೆ. ವರ್ಷಪೂರ್ತಿ ಕರ್ನಾಟಕದ ನಾನಾ ಕಡೆ ಮಾತ್ರವಲ್ಲದೆ, ಗಡಿಭಾಗಗಳಲ್ಲಿ, ಕರ್ನಾಟಕದ ಹೊರಗಿರುವ ಊರುಗಳಲ್ಲಿ ಸಹ ಪುಸ್ತಕ ಪ್ರದರ್ಶನ ಏರ್ಪಡಿಸುತ್ತಿದೆ.

ಈ ಬಾಲ್ಯದ ಅಭ್ಯಾಸ ಆಳವಾಗಿ ಬೇರೂರಿರುವುದರಿಂದ ನಂತರ ಕಲಿತ ಭಾಷೆಯನ್ನು ಇದೇ ಸ್ವರಸ್ಥಾನಗಳಲ್ಲಿ ಆಡುತ್ತೇವೆ. ಆದ್ದರಿಂದಲೇ ಪರಭಾಷಿಗರು ಬಾಯಿ ತೆರೆದೊಡನೆ ತಮ್ಮ ಮೂಲವನ್ನು ನಮಗೆ ತಿಳಿಸುತ್ತಾರೆ. ನಮ್ಮ ಗಂಟಲಿನಿಂದ ಹೊರಡುವ ಯಾವುದೇ ಧ್ವನಿ ಒಂದೇ ಕಂಪನ ಸಂಖ್ಯೆಯದಲ್ಲ. ಇದರಲ್ಲಿ ಹತ್ತಾರು ಕಂಪನ ಸಂಖ್ಯೆಗಳ ಶಬ್ದಗಳು ಮೇಳೈಸಿರುತ್ತವೆ. ಇದರಲ್ಲಿ ಒಂದು ಕಂಪನ ಸಂಖ್ಯೆಯನ್ನು ಮೂಲ ಕಂಪನ ಸಂಖ್ಯೆ ಎಂದು ಎಣಿಸಿದರೆ, ಇದರ ಎರಡು, ಮೂರು ಮುಂತಾದ ಪೂರ್ಣ ಸಂಖ್ಯೆಯ ಗುಣಕಗಳಾದ ಕಂಪನ ಸಂಖ್ಯೆಯ ಶಬ್ದಗಳೂ ಸೇರಿರುತ್ತವೆ. ಈ ಬೇರೆ ಬೇರೆ ಕಂಪನ ಸಂಖ್ಯೆಗಳ ತೀವ್ರತೆಯೂ ನಮ್ಮ ಗಂಟಲಿಗೆ ವಿಶಿಷ್ಟವಾದ ಮಟ್ಟಗಳಲ್ಲಿರುತ್ತವೆ. ಆದ್ದರಿಂದಲೇ ನಾವು ಹೊರಡಿಸುವ ಧ್ವನಿ ನಮ್ಮದೇ. ಇನ್ನಾರ ಧ್ವನಿಪೆಟ್ಟಿಗೆಯೂ ಇದೇ ತೀವ್ರತೆಗಳಲ್ಲಿ ಬೇರೆ ಬೇರೆ ಕಂಪನ ಸಂಖ್ಯೆಯ ಶಬ್ದಗಳನ್ನು ಹೊರಡಿಸುವುದಿಲ್ಲ. ಆದ್ದರಿಂದಲೇ ಧ್ವನಿ ಕೇಳಿಯೇ ನಾವು ಜನರನ್ನು ಸುಲಭವಾಗಿ ಗುರುತಿಸುತ್ತೇವೆ. ಶಬ್ದದ ವೈಜ್ಞಾನಿಕ ಅಭ್ಯಾಸಕ್ಕೆ (ಕಂಪನ ಸಂಖ್ಯೆಗಳು ಹಾಗೂ ಅವುಗಳ ತೀವ್ರತೆಗಳನ್ನು ಸೂಚಿಸಲು) ಬೇಕಾದ ಗಣಿತವನ್ನು ಮಹಾಮೇಧಾವಿ ಎನಿಸಿದ ಫ್ರೆಂಚ್ ಗಣಿತಜ್ಞ ಫೂರಿಯರ್ ಎಂಬುವವರು ಅಭಿವೃದ್ಧಿಪಡಿಸಿದರು. ಈ ಗಣಿತವನ್ನು ಬಳಸಿ ಗಣಕ ಯಂತ್ರಗಳಿಗೆ ಧ್ವನಿಯಿಂದಲೇ ಜನರನ್ನು ಗುರುತಿಸಲು ಕಲಿಸಬಹುದು. ಇದು ಸಾರ್ವತ್ರಿಕವಾಗಿ ಸಾಧ್ಯವಾದಾಗ ನಮ್ಮ ಮನೆಗಳಲ್ಲಿ ಇಂದು ಬಳಸುವ ಬೀಗಗಳಿಗೆ ಬದಲು ಧ್ವನಿಗ್ರಾಹಕ ಯಂತ್ರಗಳನ್ನು ಅಳವಡಿಸಿ, ಮನೆಯ ಮಂದಿ ''ಬಾಗಿಲು ತೆಗೆಯೇ ಸೇಸಮ್ಮ'' ಎಂದಾಗ ಮಾತ್ರ ಒಳಬಿಡುವಂತೆ ನಿರ್ದೇಶಿಸಬಹುದು.

ಕಿವಿ ಸರಿಯಾಗಿ ಕೇಳಿಸದಿದ್ದಾಗ ಅದನ್ನು ಸರಿಪಡಿಸುವ ಉಪಕರಣ ಇಂದು ಲಭ್ಯವಿದೆ. ಈ ಯಂತ್ರಗಳು ಕಿವಿಗೆ ಬಂದು ತಲುಪುವ ತರಂಗಗಳನ್ನು ವರ್ಧಿಸಿ, ಗ್ರಹಿಸಲು ಸಹಾಯಮಾಡುತ್ತವೆ. ನಮ್ಮ ಕಿವಿಯ ಸೂಕ್ಷ್ಮತೆ ಎಲ್ಲ ಕಂಪನ ಸಂಖ್ಯೆಯ ಶಬ್ದಗಳಿಗೂ ಸಮವಾಗಿ ಇಲ್ಲದುದರಿಂದ ಇಂದು ದೊರೆಯುವ ಆಧುನಿಕ ಯಂತ್ರಗಳಲ್ಲಿ ಕಂಪನ ಸಂಖ್ಯೆಯ ಆಧಾರದ ಮೇಲೆ ಧ್ವನಿತರಂಗಗಳನ್ನು ಬೇರೆ ಬೇರೆ ಪ್ರಮಾಣದಲ್ಲಿ ಹೆಚ್ಚಿಸುವ ವ್ಯವಸ್ಥೆ ಇರುತ್ತದೆ. ಇದರಿಂದ ಕಿವಿ ತನ್ನ ಶಕ್ತಿಯನ್ನು ಬಹುಪಾಲು ಕಳೆದುಕೊಂಡಿದ್ದರೂ ಇತರರಂತೆ ಸಹಜ ಬದುಕು ನಡೆಸುವುದು ಸಾಧ್ಯವಾಗುತ್ತದೆ. ಹೀಗೆಯೇ, ಇಂದಿನ ಸೀಡೀ ಪ್ಲೇಯರುಗಳಲ್ಲಿ ಕಂಪನ ಸಂಖ್ಯೆಯ ಆಧಾರದ ಮೇಲೆ ಶಬ್ದ ಹೆಚ್ಚಿಸುವ ಸೌಲಭ್ಯವಿರುತ್ತದೆ. ಸಂಗೀತದಲ್ಲಿ ಕೆಲವರಿಗೆ ಮಂದ್ರಸ್ಥಾಯಿಯಲ್ಲಿರುವ ತಬಲ ಜೋರಾಗಿ ಕೇಳಿಸಬೇಕೆಂದು ಇಷ್ಟ. ಇನ್ನು ಕೆಲವರಿಗೆ ತೀವ್ರಸ್ಥಾಯಿಯಲ್ಲಿರುವ ಕೊಳಲಿನ ದನಿಯೇ ಮುಖ್ಯವಾಗಿ ಬೇಕು. ಅವರವರ ಅಭಿರುಚಿಗೆ ಸರಿಹೊಂದುವಂತೆ ಧ್ವನಿಗಳನ್ನು ಹಿರಿದು ಮಾಡುವ ವ್ಯವಸ್ಥೆ ಇರುತ್ತದೆ.

ಶಬ್ದವನ್ನೇ ಪೂರ್ಣ ನೆಚ್ಚಿಕೊಂಡು ಬದುಕುವ ಪ್ರಾಣಿಗಳೆಂದರೆ ಬಾವಲಿಗಳು. ಇವುಗಳ ಪ್ರಪಂಚವನ್ನು ಶಬ್ದ ಪ್ರಪಂಚವೆಂದೇ ಕರೆಯಬೇಕು. ಬಾವಲಿಗಳಿಗೆ ಕಣ್ಣು ಸರಿಯಾಗಿ ಕಾಣುವುದಿಲ್ಲ. ಹಗಲು ನಿದ್ದೆ ಮಾಡುತ್ತವೆ. ರಾತ್ರಿಯಾಗುತ್ತಿದ್ದಂತೆ ಅವುಗಳಿಗೆ ಪ್ರಿಯ ತಿನಿಸಾದ ಕೀಟಗಳ ಬೇಟೆಗೆ ತೊಡಗುತ್ತವೆ. ಕತ್ತಲೆಯಲ್ಲಿ, ಕಣ್ಣು ಸರಿಯಿಲ್ಲದ ಬಾವಲಿಗಳು, ಸಣ್ಣ ಕೀಟಗಳನ್ನು ಶಬ್ದದ ಸಹಾಯದಿಂದಲೇ ಗುರುತಿಸಿ ಅವುಗಳ ಮೇಲೆ ಎರಗುತ್ತವೆ. ಇದಕ್ಕೆ ಇಂದು ವಿಮಾನಗಳ ಹಾರಾಟದಲ್ಲಿ ಬಳಕೆಯಾಗುವ ''ರಾಡಾರ್'' ತಂತ್ರವನ್ನೇ ಬಳಸುತ್ತವೆ. ಬಾವಲಿಗಳು ತೀವ್ರ ಕಂಪನ ಸಂಖ್ಯೆಯ ಶಬ್ದದ ತರಂಗ ಸಮೂಹಗಳನ್ನು ಹೊರಡಿಸುತ್ತವೆ. ಈ ತರಂಗ ಸಮೂಹಗಳು ಹಾರುತ್ತಿರುವ ಕೀಟಗಳಿಂದ ಪ್ರತಿಫಲನಗೊಂಡು ಬಾವಲಿಯ ಕಿವಿಗಳಿಗೆ ಹಿಂದಿರುಗುತ್ತವೆ. ಹೊರಟ ಎಷ್ಟು ಸಮಯದ ನಂತರ ಮತ್ತು ಎಷ್ಟು ತೀವ್ರತೆಯಲ್ಲಿ ಪ್ರತಿಧ್ವನಿ ಕೇಳಿಸುತ್ತದೆಂಬ ಆಧಾರದ ಮೇಲೆ ಬಾವಲಿಗೆ ಕೀಟ ಇರುವ ಸ್ಥಳ ಮತ್ತು ಅದರ ಚಲನೆಯ ವೇಗ ತಿಳಿಯುತ್ತದೆ. ಪ್ರತಿಧ್ವನಿ ಕ್ಷೀಣವಾಗಿರುವುದರಿಂದ ಬಾವಲಿಯ ಕಿವಿ ಅತಿ ಸೂಕ್ಷ್ಮವಾಗಿರಬೇಕಾಗುತ್ತದೆ. ಆದರೆ ಇಂತಹ ಸೂಕ್ಷ್ಮ ಕಿವಿಗಳಿಗೆ ಬಾವಲಿಯೇ ಹೊರಡಿಸುವ ಶಬ್ದ ಬಡಿದರೆ ಹಾನಿಯಾಗುವ ಸಂಭವವುಂಟು. ಆದ್ದರಿಂದ, ಶಬ್ದ ಹೊರಡಿಸುವಾಗ ಕಿವಿಗಳನ್ನು ಮುಚ್ಚಿಕೊಳ್ಳುವ, ನಂತರವೇ ತೆರೆದು ಪ್ರತಿಧ್ವನಿಗಾಗಿ ಕಾಯುವ ವ್ಯವಸ್ಥೆ ಬಾವಲಿಗಳಲ್ಲಿದೆ. ಈ ಬಾವಲಿಗಳಿಗೆ ಪ್ರಪಂಚ ಹೇಗೆ ಕಾಣುತ್ತಿರಬಹುದು ? 'ಕಾಣುತ್ತಿರಬಹುದು' ಎಂಬುದಕ್ಕಿಂತ ''ಹೇಗೆ ಕೇಳುತ್ತಿರಬಹುದು'' ಎಂದು ಪ್ರಶ್ನಿಸಿಕೊಳ್ಳುವುದು ಇನ್ನೂ ಹೆಚ್ಚು ಸಮಂಜಸ. ಬಾವಲಿಯ ವಿಶ್ವ ನಮ್ಮ ಅನುಭವಕ್ಕೇ ಬಾರದ ಪ್ರಪಂಚ.

ಶಬ್ದಪ್ರಪಂಚ ನಮ್ಮ ವಾತಾವರಣಕ್ಕೇ ಸೀಮಿತವಲ್ಲ. ಸಮುದ್ರದಲ್ಲಿ ವಾಸಿಸುವ ಸ್ತನಿಗಳಾದ ಡಾಲ್ಫಿನ್ನುಗಳು ಶಬ್ದ ಮಾಡಿ ನೂರಾರು ಮೈಲಿ ದೂರವಿರುವ ತಮ್ಮ ಬಳಗಕ್ಕೆ ಸಂದೇಶ ಕಳಿಸಬಲ್ಲವು. ನೀರಿನಲ್ಲಿ ಶಬ್ದದ ಅಲೆಗಳು ಗಾಳಿಯಲ್ಲಿ ಚಲಿಸುವಂತೆಯೇ ಚಲಿಸುತ್ತವೆ. ಆದರೆ ಘನಾಕಾರದ ವಸ್ತುಗಳಲ್ಲಿ ಶಬ್ದದ ಚಲನೆ ಇನ್ನೂ ಜಟಿಲ. ಭೂಮಿಯಲ್ಲಿ ಸಹಸ್ರಾರು ಮೈಲಿಗಳು ಚಲಿಸುವ ಇಂತಹ ಶಬ್ದತರಂಗಗಳನ್ನು ಅನೇಕ ಪ್ರಯೋಗಾಲಯಗಳು ಸತತ ಕೇಳುತ್ತವೆ. ಇವುಗಳಿಂದ ದೊರೆಯುವ ಮಾಹಿತಿ ಭೂಕಂಪಗಳನ್ನೂ, ಅವುಗಳ ತೀವ್ರತೆಯನ್ನೂ ಅವು ಪ್ರಾರಂಭವಾಗುವ ಬಿಂದುವನ್ನೂ ಪತ್ತೆ ಹಚ್ಚಲು ಅತ್ಯಗತ್ಯ. ಇಂತಹ ಶಬ್ದಗಳ ಆಲಿಕೆಯಿಂದಲೇ ನಮ್ಮ ಭೂಮಿಯ ಮೇಲ್ಪದರದ ರಚನೆಯ ಬಗ್ಗೆಯೂ ಮಾಹಿತಿ ದೊರೆಯುತ್ತದೆ.

ನಮ್ಮ ಕಿವಿಯನ್ನು ತಲುಪುತ್ತಿರುವ ಶಬ್ದ ತರಂಗಗಳ ಕಂಪನ ಸಂಖ್ಯೆ ಯಾವ ನಿಯಮವನ್ನೂ ಪಾಲಿಸದೆ ಬದಲಾಗುತ್ತಿದ್ದರೆ ನಮಗೆ ಗದ್ದಲದ ಅನುಭವವಾಗುತ್ತದೆ. ಅದೇ ಕಂಪನ ಸಂಖ್ಯೆ ನವಿರಾಗಿ ಬದಲಾಗುತ್ತಿದ್ದರೆ ಸಂಗೀತದ ಅನುಭವವಾಗುತ್ತದೆ. ನಮ್ಮ ಸಂಗೀತದಲ್ಲಿ ಮಂದ್ರ ''ಸಾ'' ಧ್ವನಿಯ ಕಂಪನ ಸಂಖ್ಯೆ ತೀವ್ರ ''ಸಾ'' ಧ್ವನಿಯ ಅರ್ಧದಷ್ಟು. ಮಿಕ್ಕ ಎಲ್ಲ ಧ್ವನಿಗಳ ಕಂಪನ ಸಂಖ್ಯೆಯೂ ಈ ಎರಡು ಕಂಪನ ಸಂಖ್ಯೆಗಳಿಗೆ ಹೊಂದಿಕೊಂಡು ಇರಬೇಕು. ಎಲ್ಲ ಸಂಗೀತ ವಾದ್ಯಗಳಲ್ಲೂ ಶಬ್ದದ ಕಂಪನ ಸಂಖ್ಯೆಯನ್ನು ನಿಯಂತ್ರಿಸುವ ವ್ಯವಸ್ಥೆಯಿರುತ್ತದೆ. ತಂತಿ ವಾದ್ಯಗಳಲ್ಲಿ ತಂತಿಯ ಉದ್ದ ಕಡಿಮೆಯಾದಂತೆ ಹೊರಡುವ ಶಬ್ದದ ಕಂಪನ ಸಂಖ್ಯೆ ಹೆಚ್ಚುತ್ತದೆ. ತಂತಿಯನ್ನು ಬಿಗಿಯಾಗಿ ಎಳೆದು ಕಟ್ಟಿದರೂ ಕಂಪನ ಸಂಖ್ಯೆ ಹೆಚ್ಚುತ್ತದೆ. ಅದೇ ತಂತಿ ದಪ್ಪವಾದರೆ ಕಂಪನ ಸಂಖ್ಯೆ ಕಡಿಮೆಯಾಗುತ್ತದೆ. ತಂಬೂರಿ ನುಡಿಸಿ ಈ ನಿಯಮಗಳು ಅನ್ವಯವಾಗುವುದನ್ನು ಸುಲಭವಾಗಿ ಕಂಡುಕೊಳ್ಳಬಹುದು. ಕೊಳಲಿನಲ್ಲಿ, ಊದುವ ತುದಿಯಿಂದ ಬೆರಳು ಮುಚ್ಚಿರುವ ರಂಧ್ರದವರೆಗಿನ ದೂರ ಕಂಪನ ಸಂಖ್ಯೆಯನ್ನು ನಿರ್ಧರಿಸುತ್ತದೆ. ಇಲ್ಲಿಯೂ ಉದ್ದ ಕಡಿಮೆಯಾದಂತೆ ಕಂಪನ ಸಂಖ್ಯೆ ಹೆಚ್ಚುತ್ತದೆ. ಸಂಗೀತ ಕಛೇರಿ ಪ್ರಾರಂಭವಾಗುವ ಮೊದಲು ಪಕ್ಕವಾದ್ಯದವರು ತಮ್ಮ ವಾದ್ಯಗಳ ಕಂಪನ ಸಂಖ್ಯೆಗಳನ್ನು ಸರಿಪಡಿಸಿಕೊಳ್ಳುವುದನ್ನು ಸಹನೆಯಿಂದ ಸಹಿಸಿಕೊಳ್ಳುವುದು ಕಛೇರಿ ಕೇಳುವುದಕ್ಕೆ ನಾವು ತೆರಲೇಬೇಕಾದ ಬೆಲೆ. ಸಂಗೀತ ಕಲಿಯಬೇಕೆಂದರೆ ನಮ್ಮ ಧ್ವನಿ ಪೆಟ್ಟಿಗೆ ಮಾಡುವ ಗದ್ದಲಗಳ ಕಂಪನ ಸಂಖ್ಯೆಯನ್ನು ನಿಯಂತ್ರಿಸಲು ಕಲಿಯಬೇಕು. ಸುಶ್ರಾವ್ಯವಾದ ಸಂಗೀತವನ್ನು ಕೇಳಿದಾಗ, ಮೆದುಳಿಗೆ ಧ್ವನಿಪೆಟ್ಟಿಗೆಯನ್ನು ಹಾಗೂ ನಮ್ಮ ಬಾಯಿಯೊಳಗಿನ ಖಾಲಿ ಜಾಗ, ಆಕಾರಗಳನ್ನು ಎಷ್ಟು ಸೂಕ್ಷ್ಮವಾಗಿ ನಿಯಂತ್ರಿಸಲು ಸಾಧ್ಯ ಎನ್ನುವುದು ತಿಳಿಯುತ್ತದೆ.

ನಮ್ಮ ಜೀವನದಲ್ಲಿ ಶಬ್ದದ ಪ್ರಾಮುಖ್ಯತೆ ಅನೇಕ ಸಿದ್ಧಾಂತಗಳಿಗೆ ಎಡೆಮಾಡಿಕೊಟ್ಟಿದೆ. ''ವೇದ ಅನಾದಿ'' ಎಂದು ಕೇಳಿದ್ದೀರಲ್ಲಾ? ಈ ವಿಶ್ವಸೃಷ್ಟಿಯ ಮೊದಲೇ ವೇದಗಳೆಲ್ಲಾ ಇದ್ದುವಂತೆ. ವೇದ ಮುನಿಗಳು ತಮಗೆ ಸಾಧ್ಯವಾದಷ್ಟು ಮಂತ್ರಗಳನ್ನು ಕೇಳಿಸಿಕೊಂಡು ಪ್ರಚುರ ಪಡಿಸಿದ್ದಾರಂತೆ. ವೇದದ ಬರಹಗಾರರು ಅವರೇ ಅಲ್ಲ. ಮೊದಲೇ ಇದ್ದುದನ್ನು ಕೇಳಿಸಿಕೊಂಡದ್ದು ಮಾತ್ರ ಅವರ ಹೆಚ್ಚುಗಾರಿಕೆ. ಆದ್ದರಿಂದಲೇ ಇನ್ನು ಮುಂದೆ ಯಾರೂ ವೇದಗಳನ್ನು ಕಲಿಯದೇ ಹೋದರೂ ಅವು ನಶಿಸಲಾರವು. ಶಬ್ದ ರೂಪದಲ್ಲಿ ಅವು ಎಲ್ಲೆಡೆ ತೇಲುತ್ತಿರುತ್ತವೆ, ಮುಂದೊಂದು ದಿನ ಯಾರಾದರೂ ಯೋಗ್ಯರು ಅವತರಿಸಿದರೆ ಅವರ ಕಿವಿಯ ತಮಟೆಗೆ ಬಂದು ಬಡಿಯುತ್ತವೆ.

ಗ್ರೀಕ್ ತತ್ವಜ್ಞಾನಿ ಪೈಥಾಗೋರಸ್ ಮತ್ತು ಅವನ ಅನುಯಾಯಿಗಳು ಸಂಗೀತದ ಲಯಬದ್ಧ ಧ್ವನಿಗಳಿಂದ ತುಂಬ ಪ್ರಭಾವಿತರಾದರು. ನಮ್ಮ ಕಿವಿಗೆ, ಮನಸ್ಸಿಗೆ ಮಧುರವೆನಿಸುವ ಸಂಗೀತ ವಾದ್ಯಗಳ ತಂತಿಗಳ ಉದ್ದ ನಿಗದಿತ ಪ್ರಮಾಣದಲ್ಲಿ ಇರಬೇಕಾದ್ದರಿಂದ ಇಂತಹ ಪ್ರಮಾಣಗಳನ್ನು ಸೂಚಿಸುವ ಸಂಖ್ಯೆಗಳಿಗೆ ಮಾಂತ್ರಿಕ ಗುಣಗಳನ್ನು ಪ್ರೇರೇಪಿಸಿದರು. ಎಲ್ಲ ವಿಶ್ವ ತತ್ವಗಳಿಗೂ ಈ ಸಂಖ್ಯೆಗಳೇ ಆಧಾರ ಎಂದು ಪ್ರತಿಪಾದಿಸಿದರು. ಈ ವಿಶ್ವವೆಲ್ಲಾ ಸಂಖ್ಯೆಗಳಿಂದಲೇ ಉದ್ಭವವಾಗಿವೆ ಎಂಬ ಸಿದ್ಧಾಂತ ಬೆಳೆಸಿದರು. ಭವಿಷ್ಯ ಹೇಳುವ ''ಸಂಖ್ಯಾಶಾಸ್ತ್ರ''ಕ್ಕೂ ಇಂತಹ ಮೂಲವೇ ಇರಬಹುದು. ಇಂದಿಗೂ ವಿಶ್ವದ ಹೆಚ್ಚು ಜನ ಒಂದಲ್ಲ ಒಂದು ಸಂಖ್ಯೆಯನ್ನು ತಮ್ಮ ಅದೃಷ್ಟ ಸಂಖ್ಯೆಯೆಂದೋ, ಅನಿಷ್ಟ ಸಂಖ್ಯೆಯೆಂದೋ ನಂಬುತ್ತಾರೆ. ತಮ್ಮ ವಾಹನಕ್ಕಾಗಲಿ, ಮನೆಗಳಿಗಾಗಲಿ ತಮ್ಮ ನಂಬಿಕೆಗಳಿಗೆ ಹೊಂದಿಕೆಯಾಗುವ ಸಂಖ್ಯೆಗಳು ಮಾತ್ರ ಬರುವಂತೆ ನೋಡಿಕೊಳ್ಳುತ್ತಾರೆ. ಇಂತಹ ಕೆಲವು ನಂಬಿಕೆಗಳು ಶಬ್ದಜನಿತ ಎನ್ನುವುದರಲ್ಲಿ ಅನುಮಾನವಿಲ್ಲ.

**ಪ್ರೊ॥ ಎಂ. ಆರ್. ಎನ್. ಮೂರ್ತಿ**
ಅಣು ಜೀವಭೌತ ವಿಜ್ಞಾನ ಘಟಕ
ಭಾರತೀಯ ವಿಜ್ಞಾನ ಸಂಸ್ಥೆ, ಬೆಂಗಳೂರು-೫೬೦ ೦೧೨

ಸುಳ್ಳುಹೇಳುವ ಸ್ಪರ್ಧೆ



# ಸುಳ್ಳು ಹೇಳುವ ಸ್ಪರ್ಧೆ

ಶಿವರಾಮ ಕಾರಗಡಿ

ಕೆಲವು ಸಂದರ್ಭಗಳಲ್ಲಿ ಈ ಸಂಘ ಸಂಸ್ಥೆಗಳು ಹುಟ್ಟಿಕೊಳ್ಳುವುದೇ ಒಳ್ಳೆಯ ಕೆಲಸವನ್ನು ಮಾಡಲು ಅಥವಾ ಹಮ್ಮಿಕೊಳ್ಳಲು ಎಂಬುದು ನನಗೆ ಖಚಿತವಾಗಿದೆ. ಜಡ್ಡುಗಟ್ಟಿದ ಈ ವ್ಯವಸ್ಥೆಯ ಮಧ್ಯೆ ನಿಂತು ನಿಷ್ಕ್ರಿಯನಾದ ನನ್ನಂತಹ ಮನುಷ್ಯನಿಗೆ ಒಂದಷ್ಟು ರಸದೌತಣ ನೀಡಿದ್ದು ನಮ್ಮೂರಿನಲ್ಲಿ ತಲೆ ಎತ್ತಿದ 'ಮಿತ್ರ ಸಂಘ' ಎಂದರೆ ತಪ್ಪಾಗದು. ಪ್ರಾರಂಭದಲ್ಲಿ ಯಾವುದಾದರೂ ಒಳ್ಳೆಯ ಕಾರ್ಯಕ್ರಮ ಮಾಡಿ ತನ್ನ ಉದ್ದೇಶ ಪೂರೈಸುವುದು ಹಾಗೂ ಊರಿನಲ್ಲಿ ಜನಪ್ರಿಯವಾಗಬೇಕೆಂಬ ಯೋಜನೆಯಡಿ ನನ್ನಲ್ಲಿ ಸಲಹೆ ಕೇಳಲು ಬಂದದ್ದೆ - ನಾನು ಭೂಮಿಯಲ್ಲಿ ನಿಲ್ಲಲಾಗದ ಪರಿಸ್ಥಿತಿಯನ್ನು ನಿರ್ಮಿಸಿತ್ತು. 'ನೋಡಿ, ನಮ್ಮೂರಿನಲ್ಲಿ ಈಗಾಗಲೇ ಹತ್ತಾರು ಸಂಘಗಳಿವೆ. ಅವುಗಳು ಯಾವುದೋ ತತ್ವಕ್ಕೆ ಬದ್ಧವಾಗಿ ತಮಗೆ ಅನುಕೂಲವಾಗುವ ಅಥವಾ ನಿಲುವಿಗೆ ಹತ್ತಿರವಾಗುವ ವ್ಯಕ್ತಿಗಳನ್ನು ಕರೆಯಿಸಿ ಒಂದು ವರ್ಗದ ಪ್ರೇಕ್ಷಕರನ್ನು ಕಲೆ ಹಾಕಿಕೊಂಡಿದೆ. ಆದರೆ ನೀವೂ ಅಂತಹ ಯಾವುದೇ ತತ್ವ ಸಿದ್ಧಾಂತಕ್ಕೆ ಒಳಗಾಗದೆ ಎಲ್ಲರನ್ನೂ ಏಕ ವೇದಿಕೆಯಡಿ ತರುವ ಪ್ರಯತ್ನ ಮಾಡಿ' ಎಂದು ಸಲಹೆ ಇತ್ತು ಸುಮ್ಮನಾದೆ. ಅಲ್ಲೇ.... ಅವರಲ್ಲಿ ಗುಸುಗುಸು ಪ್ರಾರಂಭವಾಗಿ, ಸಡನ್ನಾಗಿ ಎಲ್ಲರೂ ಎದ್ದು ಮನೆಯ ಅಂಗಳದಲ್ಲಿ ನಿಂತು ಅವರು ಏನೇನೋ ಮಾತಾಡುವುದು ಒಬ್ಬನೇ ಕುಳಿತು ವೀಕ್ಷಿಸಿದೆ. ಹೀಗಿರಲಾಗಿ ನನ್ನ ನಿರೀಕ್ಷೆಯಿದ್ದರೂ ಇಲ್ಲದ ಒಂದು ಮಾತು ನನ್ನ ಉಬ್ಬಿಸಿತು. ಎಂದೂ, ಯಾರೂ ಕರೆಯದ ನನ್ನನ್ನು ಇವರು ಕರೆದದ್ದು ನಾನು ಆಕಾಶವಿಹಾರಿಯಾಗುವಂತಾಯಿತು. ಮನೆಯ ಒಳಗೋಡಿ ಬೇಗನೆ ಚಹವನ್ನು ಮಾಡಿಸಿ ತಂದುಕೊಟ್ಟೆ. ಅಂದಿನಿಂದಲೇ ನನ್ನ ಸುತ್ತ ಕನಸಿನ ಪ್ರಪಂಚವೊಂದು ತೆರೆದುಕೊಂಡಿತು. ನೋಡಿ.... ಸಾರ್ ನಮ್ಮ ಸಂಘದ ಪ್ರಥಮ ಕಾರ್ಯಕ್ರಮವಾಗಿ 'ಸುಳ್ಳು ಹೇಳುವ ಸ್ಪರ್ಧೆ'ಯನ್ನು ಏರ್ಪಡಿಸೋಣ ಎಂದು ತೀರ್ಮಾನಿಸಿದ್ದೇವೆ. ಇದರ ಮೂಲಕ ಎಲ್ಲಾ ಸಂಘದವರೂ ನಮ್ಮ ಕಾರ್ಯಕ್ರಮವನ್ನು ವೀಕ್ಷಿಸುವುದಷ್ಟೆ ಅಲ್ಲದೆ ಸೌಹಾರ್ದತೆ ಕೂಡ ಸಾಧ್ಯ ಎಂದು ನನಗೆ ವಿವರಿಸಿದರು. ಈ ಸಂಘದ ವಿಶೇಷ ಕಾರ್ಯಕ್ರಮ ಕೇಳಿ ಬೆರಗಾದರೂ ಒಳಗೊಳಗೆ ಖುಷಿ ಉಂಟಾಯಿತು. ನಾನು ತೀರ್ಪುಗಾರನಾಗಿ ತೆರಳಿ 'ಸುಳ್ಳು ಹೇಳುವ ಮಹಾಮೇಧಾವಿ'ಯನ್ನು ಆರಿಸುವ ಗುಂಗಿನಲ್ಲಿ ಸುಳ್ಳಿನ ವಿಚಿತ್ರ ಆಕರ್ಷಣೆಗೆ ಒಳಗಾದೆ. ಒಂದು ರೀತಿಯ ಅಭ್ಯಾಸದ ಸಲುವಾಗಿ ಮನೆಯಲ್ಲಿ ಸುಳ್ಳಿನ ಸರಮಾಲೆಯನ್ನೆ ಪ್ರಾರಂಭಿಸಿದೆ. ಈಗ ಬಂದೆ ಎಂದು ಶಿವಮೊಗ್ಗಕ್ಕೆ ಹೋಗಿ ಬರುವುದು, ಕಟಿಂಗ್ ಮಾಡಿಸುತ್ತೇನೆ ಎಂದು ಹೇಳಿ ವಾಪಾಸು ಬಂದು ಹಾಗೆಯೇ ಸ್ನಾನ ಮಾಡಿ ಅಮ್ಮನಿಂದ ಉಗಿಸಿಕೊಳ್ಳುವುದು, ನನ್ನ ಚಿಕ್ಕಪ್ಪನ ಮಕ್ಕಳು ಮಾಮಾ, ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರು ಯಾರೆಂದು ಕೇಳಿದರೆ.... ನೋಡು ಅದ್ಯಾರೊ ಕಾಳೇಗೌಡ ನಾಗಾವಾರ ಎಂದು ಹೇಳಿ ಬಚಾವಾಗುವಷ್ಟರಲ್ಲಿ ಅವರ ಅಪ್ಪ ಬಂದು 'ಅದ್ಯಾಕೊ ಮಾರಾಯ ಇತ್ತಿತ್ತಲಾಗಿ ಸುಳ್ಳೆ ಹೇಳುವುದು ಪ್ರಾರಂಭಿಸಿದ್ದಿ, ನೀನಂತೂ ಸುಳ್ಳಿನ ತೀರ್ಪುಗಾರನಾಗಿರಬಹುದು, ಈ ಮಕ್ಕಳಿಗೇಕೆ ಸುಳ್ಳು ಹೇಳುವುದು' ಎಂದು ಕೇಳಿದರೂ 'ನಿಮಗದೆಲ್ಲಾ ಗೊತ್ತಾಗಲ್ಲ' ಎಂದು ಸಮಾಜಾಯಿಸಿಕೊಂಡು ಸುಳ್ಳಿಗೆ ಮತ್ತೊಂದು ಸೇರ್ಪಡಿಸಿಕೊಂಡು ನಾನೇ ಈ ರೀತಿ ಸುಳ್ಳನ್ನು ಹೇಳಿ ಒದ್ದಾಡುತ್ತಿರುವಾಗ ಇನ್ನು ಸ್ಪರ್ಧಿಸುವವರು ಯಾವ ರೀತಿಯ ಭೀಕರ ಸುಳ್ಳಿನ ಸೃಷ್ಟಿಯಲ್ಲಿ ತೊಡಗಿರಬೇಕು ಎಂದು ಎಣಿಸಿಕೊಂಡೇ ಕಂಗಾಲಾಗುತ್ತಿದ್ದೆ. ಅದೇನೇ ಆದರೂ ನನಗಂತೂ ಇದು ವಿಶಿಷ್ಟವಾದ ಸಂತೋಷವನ್ನು ನೀಡಿತೆಂಬುದು ಮುಂದಿನದನ್ನು ಓದಿದಾಗ ಅನುಭವಿಸುವಿರಿ.

ಅಂತೂ 'ಸುಳ್ಳು ಹೇಳುವ ಸ್ಪರ್ಧೆ'ಯ ದಿನ ಬಂದೇಬಿಟ್ಟಿತು. ನಾನಂತೂ ಗರಿ ಗರಿ ಬಟ್ಟೆ ಹಾಕಿಕೊಂಡು ಸುಳ್ಳಿನ ಸಂತೆಗೆ ಕಾಲಿಟ್ಟೆ. ವೇದಿಕೆಯ ಶೃಂಗಾರ ಕಂಡೇ ಅವಕ್ಕಾದೆ. ಏಕಿಷ್ಟು ಸುಳ್ಳಿಗಾಗಿ ಶೃಂಗಾರ, ಇನ್ನು ಸತ್ಯದ ಸ್ಪರ್ಧೆಗಾದರೆ ಹೇಗಿರಬಹುದು, ಎಂದುಕೊಂಡೆ. ಒಟ್ಟಾರೆ ಸುಳ್ಳಿನ ಮಜವೇ ಹೀಗಿರಬೇಕೆಂದು ಸಂಘದ ವ್ಯವಸ್ಥಾಪಕರಲ್ಲಿ ಸ್ಪರ್ಧೆಯ ಕುರಿತು ತಿಳಕೊಂಡೆ. 'ಸಾರ್', ನಮ್ಮ ಸಂಘದ ಪ್ರಥಮ ಕಾರ್ಯಕ್ರಮ ಇದಾಗಿರುವುದರಿಂದ ಯಾವುದೇ ಪ್ರಚಾರವನ್ನು ಮಾಡದೇ ಈ ದಿನ ಮಾತ್ರ ಆಟೋದಲ್ಲಿ ಪ್ರಚಾರ ಮಾಡಿದೆವು. ಆ ಮೂಲಕ ನಾವು ಪ್ರಥಮ ವಿಶಿಷ್ಟತೆಯ ಮೆರೆದು ಜನರಿಗೆ ಹತ್ತಿರವಾದೆವು.' 'ಸ್ವಲ್ಪ ಹೊತ್ತಾದರೂ ಹೋಗಿ ಬರುವ' ಎಂದು ಜನರು ಮಾತಾಡುವುದನ್ನ ನಾನೇ ಕೇಳಿಸಿಕೊಂಡೆ. ಇನ್ನು ಸ್ಪರ್ಧೆ ಯಾವ ರೀತಿ ಇರಬೇಕೆನ್ನುವುದರ ಬಗ್ಗೆ....... ನಿರ್ದಿಷ್ಟವಾಗಿ ಇಂಥವರೇ ಭಾಗವಹಿಸಬೇಕು ಎಂದು ನಿಯಮ ಬೇಡ; ವರ್ಗ, ಜಾತಿ, ಇನ್ನಿತರ ಕಟ್ಟಳೆಗಳೇನೂ ಇಲ್ಲದೆ, ವೇದಿಕೆಯ ಮೇಲಿಂದಲೇ ಸಭೆಯಲ್ಲಿ ಕುಳಿತ ಗೆಳೆಯರಲ್ಲಿ ಕೇಳಿಕೊಂಡು ನಿಮ್ಮಲ್ಲಿ ಸುಳ್ಳು ಹೇಳುವುದಕ್ಕೆ ಆಸಕ್ತಿ ಉಳ್ಳವರು ಈ ಸ್ಪರ್ಧೆಯಲ್ಲಿ ಭಾಗವಹಿಸಿ ಎಂದು ಪ್ರಸಾರ ಮಾಡುವುದು, ಎಂದು ಅವರ ಯೋಜನೆ. ಆ ಮೂಲಕ ಎರಡನೇ ವಿಶಿಷ್ಟತೆ ಸಾಧಿಸಿದಂತಾಗುತ್ತದೆ. 'ಇನ್ನುಳಿದದ್ದು ಸುಳ್ಳು ಹೇಳುವವರಿಗೆ, ಹಾಗೆಯೇ ನಿಮಗೆ ಬಿಟ್ಟದ್ದು' ಎಂದು ಸಂಯೋಜಕರು ಸುಮ್ಮನಾದರು. ಅವರ ಉದ್ದನೆಯ ವಿವರಣೆ ಕೇಳಿಯೇ ಸುಸ್ತಾದೆ. ಇದ್ಯಾವ ರೀತಿಯ ಕಾರ್ಯಕ್ರಮವೆಂದುಕೊಂಡು ಎಷ್ಟು ಜನ ಬಂದಿರಬಹುದೆಂದು ಇಣುಕಿದೆ. ಅಬ್ಬಾ ! ಯಾರಾದರೂ ವಿಚಾರವಾದಿಗಳು ಬಂದು ವೈಚಾರಿಕತೆ, ಈ ದೇಶದ ಅನಿಷ್ಟತೆಗಳ ಕುರಿತು ಅಥವಾ ನಮ್ಮ ಪರಿಸರ ಸಂರಕ್ಷಣೆಯ ಕುರಿತು ಒಂದು ಕಾರ್ಯಕ್ರಮ ಮಾಡಿದರೆ ಇಷ್ಟು ಜನ ಸೇರುತ್ತಿರಲಿಲ್ಲವೆಂದು ನೊಂದೆ. ಆಗಲೇ ಅನ್ನಿಸಿತ್ತು, ಬೇಡವಿತ್ತು ಈ ತೀರ್ಪುಗಾರಿಕೆ ಎಂದು ! ಈ ವ್ಯವಸ್ಥಾಪಕರ ವಿಶಿಷ್ಟತೆ ಇನ್ಯಾವ ರೂಪದಲ್ಲಿ ಇರಬಹುದು, ಜನರನ್ನು ನೋಡಿ ಇವರ ಪೈಕಿ ಯಾವ ರೀತಿಯ ಸ್ಪರ್ಧಾಳುಗಳಿರಬಹುದು, ಎಂದುಕೊಂಡೆ. ಸ್ಪರ್ಧೆ ಆರಂಭವಾಗಿಬಿಟ್ಟಿತು. ಯಾರೋ ಒಬ್ಬ ಸುಳ್ಳು ಹೇಳಲು ಬಂದೇಬಿಟ್ಟು..... ರಾಜಾರೋಷವಾಗಿ ಸುಳ್ಳನ್ನು ಹೇಳಿಯೇಬಿಟ್ಟ. ನನ್ನ ಕಿವಿಗೆ ಬಂದೂ ಬೀಳದಷ್ಟು ನಗೆಯ ಅಲೆ ಪ್ರೇಕ್ಷಕರಿಂದ ಬಂದು ನಾನೂ ನಗಲು ಆರಂಭಿಸಿದೆ. (ನಗದಿದ್ದರೆ ಸುಳ್ಳಿನ ತೀರ್ಪು ನೀಡಲು ಸಾಧ್ಯವಿರಲಿಲ್ಲ). ಆತನಿಗೆ ಸಿಕ್ಕ ಭವ್ಯ ಚಪ್ಪಾಳೆಯನ್ನು, ಹುರುಪನ್ನು ಕಂಡು ನಮ್ಮ

ದೇಶದಲ್ಲಿ ಸುಳ್ಳಿಗೆ ಎಂತಹ ಬೆಲೆ ಎಂದುಕೊಂಡು ಮತ್ತೊಬ್ಬ ಸುಳ್ಳಿನ ಸರದಾರನಿಗಾಗಿ ಕಾದೆ. ಹೀಗೆಯೇ ನಾಲ್ಕನೆಯವನಾಗಿ ಬಂದವನು ನನಗೆ ಸ್ವಲ್ಪ ಪರಿಚಯವಿದ್ದವನು. ತನ್ನ ಖಾತೆಯಿಂದ ಸುಳ್ಳಿನ ಸತ್ಯತೆಯನ್ನು ತನ್ನ ವಿಶಿಷ್ಟ ಹಾವಭಾವದಿಂದ ತೆರೆದಿಟ್ಟ : 'ನೋಡಿ, ನಮ್ಮ ದೇಶ ಹಿಂದುಳಿಯಲು ಮುಖ್ಯ ಕಾರಣವೆಂದರೆ...... ಎಲ್ಲರೂ ಇಲ್ಲಿ ಭ್ರಷ್ಟಾಚಾರದಲ್ಲಿ ತೊಡಗಿರದೇ ಇದ್ದದ್ದು, ಭಾರತದ ಕ್ರಿಕೆಟ್‌ನಲ್ಲಿ ಫಿಕ್ಸಿಂಗ್ ನಡೆಯಲು ಕಾರಣವೆಂದರೆ ಬೇರೆ ದೇಶದಲ್ಲಿ ಅದು ನಡೆದಿದ್ದರಿಂದ, ಲಾರಾ ದತ್ತ ವಿಶ್ವ ಸುಂದರಿಯಾಗಲು ಕಾರಣ ನಮ್ಮ ಕೃಷ್ಣಾರವರ ಮೋಹಕ ಮುಖವನ್ನು ನೋಡಿದ್ದರಿಂದ, ಶ್ರೀ ವೀರಪ್ಪನ್ ರಾಜಕುಮಾರನನ್ನು ಅಪಹರಿಸಲು ಕಾರಣವೆಂದರೆ...... ಕರುಣಾನಿಧಿಯ ಸಾಧನೆಯನ್ನು ತೋರಿಸಲು, ಕೆಲವು ಪತ್ರಿಕೆಗಳು ರೌಡಿಗಳ ಕುರಿತೇ ಕಾದಂಬರಿ ಬರೆಯಲು ಕಾರಣ..... ಮುಂದೆ ಈ ದೇಶದ ಠಾಕ್ರೆ ರಾಜಕಾರಣೆಯನ್ನು ಸೃಷ್ಟಿಸುವ ಸಲುವಾಗಿ !' ಹೀಗೆ ಸುಳ್ಳಿನ ಸತ್ಯತೆ ಸರಾಗವಾಗಿ ಆತನಿಂದ ಹೊರಟದ್ದು ನಿಲ್ಲುವಂತಿರಲಿಲ್ಲ. ಅಂಕಗಳತ್ತ ನನ್ನ ಗಮನ ಹರಿಯದೆ ಆತನ ಮಾತಿನತ್ತಲೇ ಕೇಂದ್ರಿಸಿದೆ. ಇನ್ನೂ ಕೆಲ ನಿಮಿಷವಿದ್ದುದರಿಂದ ಪುನಃ ನಮ್ಮ ಕನ್ನಡ ಸಾಹಿತ್ಯದತ್ತ ಆತನ ದೃಷ್ಟಿ ಹೊರಳಿತು : ''ನಮ್ಮ ಭೈರಪ್ಪ ಇದ್ದಾರಲ್ಲ ಅವರ ಇತ್ತೀಚಿನ ಕೃತಿ 'ಸಾರ್ಥ' ಜನಪ್ರಿಯವಾಗಲು ಕಾರಣ ಅದು ಯಾವುದೇ 'ಸೆಕ್ಸ್' ಕೃತಿಗಳಿಗಿಂತ ಭಿನ್ನವಾಗಿಲ್ಲದ್ದು. ಎಲ್ಲರೂ ಈಗೀಗ ಕಂಪ್ಯೂಟರಿನತ್ತ ಮುಖ ಮಾಡಲು ಕಾರಣ..... ಅದರಿಂದ ಸಿಗುವ ಮಾಹಿತಿ ಆಧರಿಸಿ ಸ್ವಂತಿಕೆಯ ಕೊರೆದು ಪುಸ್ತಕ ರಚಿಸಲು, ಇತ್ತೀಚೆಗೆ ಹಂಗರಹಳ್ಳಿಯಲ್ಲಿ ಜೀತಮುಕ್ತಗೊಳಿಸಲು ಕಾರಣ ಮುಂದಿನ ಚುನಾವಣೆಯಲ್ಲಿ ತಮ್ಮ ಸಾಧನೆಯ ಪಟ್ಟಿಯಲ್ಲಿ ಅದನ್ನು ಸೇರಿಸಿಕೊಳ್ಳಲು !'' ಕರ್ನಾಟಕದಲ್ಲಿ ಈಗ ಹೆಚ್ಚು ಜನಪ್ರಿಯವಾದ ಆಡಿಯೋ ಕ್ಯಾಸೆಟ್ 'ಮಂಗನ ಕೈಯಲ್ಲಿ ಮಾಣಿಕ್ಯ' ಎಂದದ್ದು ಪ್ರೇಕ್ಷಕರಲ್ಲಿ ನಗೆಯ ಹೊಳೆಯನ್ನೇ ಹರಿಸಿತು. ಆತನ ವಾಗಾಡಂಬರವನ್ನು ಕಂಡು, ಪ್ರೇಕ್ಷಕರ ಮೆಚ್ಚುಗೆಯನ್ನು ಕಂಡು ಈತನೇ ಚೆನ್ನಾಗಿ ಸುಳ್ಳನ್ನು ಹೇಳಿರಬಹುದೆಂದು ಸುಳ್ಳಿನ ತೀರ್ಪಿಗೆ ಅಂತಿಮ ತೆರೆ ಎಳೆದೆ. ಸ್ಪರ್ಧೆ ಮುಗಿಯಿತು. ಇನ್ನು ಯಾವ ರೀತಿಯ ವಿಶಿಷ್ಟತೆ ಇದೆ ಎಂದು ನಾನಂದುಕೊಳ್ಳುವಷ್ಟರಲ್ಲಿ ವ್ಯವಸ್ಥಾಪಕರು ವೇದಿಕೆಗೆ ಬಂದರು. ಕುಳಿತಿದ್ದ ಎಲ್ಲರಿಗೂ, ತೀರ್ಪುಗಾರನಾದ ನನಗೂ ಸೇರಿದಂತೆ, ಯಾವ ಪ್ರಶಸ್ತಿಯನ್ನು ಕೊಡಬಹುದು ಮತ್ತು ಗೆದ್ದವನಿಗೆ ಏನನ್ನು ಕೊಡಬಹುದೆಂದು ಸುಳ್ಳಿನ ಗುಂಗಿನಲ್ಲೇ ಕುಳಿತಿರಲು ಆ ಮಹಾಶಯ ಸುಳ್ಳಿನ ಮಹತ್ವವನ್ನು ಕುರಿತು ಭಾಷಣ ಬಿಗಿಯಲಾರಂಭಿಸಿದ ಸುಳ್ಳು ಅಷ್ಟು ಸತ್ಯವಾದದ್ದು ಅದೃಷ್ಟ ಶಾಲಿ ಎಂಬುದು ನನಗಂದೇ ಗೊತ್ತಾದದ್ದು. ಆತನ ಭಾಷಣದ ಕೊನೆಯಲ್ಲಿ ''ನೋಡಿ, ನಾವು ಪ್ರಥಮವಾಗಿ ಮಾಡುತ್ತಿರುವ ಈ ಕಾರ್ಯಕ್ರಮಕ್ಕೆ ಈ ರೀತಿಯ ಪ್ರೋತ್ಸಾಹ ನೀಡಿದ್ದೀರಾ; ಧನ್ಯವಾದಗಳು, ಹಾಗೂ ಗೆದ್ದ ಸುಳ್ಳುಗಾರನಿಗೆ ಪ್ರಶಸ್ತಿಯನ್ನು ಕೊಡಬೇಕಾಗಿದೆ. ಅದಕ್ಕಾಗಿ ನಮ್ಮ ಸಂಘದಲ್ಲಿ ಆದ ತೀರ್ಮಾನದಂತೆ...... ಈಗ ಆಳ್ವಿಕೆ ನಡೆಸುತ್ತಿರುವ ನಮ್ಮ ಸರ್ಕಾರದಲ್ಲಿ ಯಾವ ಸಚಿವ ಹೆಚ್ಚಿನ ಆಶ್ವಾಸನೆಗಳನ್ನು ನೀಡಿ, ಹೆಚ್ಚಿನ ಉದ್ಘಾಟನಾ ಕಾರ್ಯಕ್ರಮಗಳಲ್ಲಿ ಭಾಗವಹಿಸಿ, ಹೆಚ್ಚಿನ ವರ್ಗಾವಣೆ ಪ್ರಕ್ರಿಯೆಯಲ್ಲಿ ತೊಡಗಿ, ಹೆಚ್ಚಿನ ಹಗರಣಗಳಿಗೆ ಕಾರಣನಾಗಿರುವನೋ ಅಂತಹ ಸತ್ಯಸಂಧನ ಮೂಲಕ ನಮ್ಮ ಸುಳ್ಳಿನ ಸ್ಪರ್ಧೆಯಲ್ಲಿ ಭಾಗವಹಿಸಿದ ಮಹನೀಯರಿಗೆ ಪ್ರಶಸ್ತಿ ಕೊಡಿಸುತ್ತೇವೆ. ನಮ್ಮ ಸಂಘ ಅಂತಹ ಒಬ್ಬ ಮಂತ್ರಿಗಾಗಿ ಐದು ವರ್ಷ ಕಾಯುತ್ತದೆ (ಮೊದಲೇ ಸರ್ಕಾರ ಬಿದ್ದರೂ ಅವರೆಗಿನ ಸಾಧನೆಯನ್ನು ಪರಿಗಣಿಸಿ!) ಎಂಬುದು ನಿಮ್ಮರಿವಿಗೆ ತರುತ್ತಿದ್ದೇವೆ.'' ಸಂಘದ ಈ ರೀತಿಯ ವಿಶಿಷ್ಟ ಕಾರ್ಯಕ್ರಮವನ್ನು, ಉದ್ದೇಶವನ್ನು ಕೇಳಿಯೇ ಇಲ್ಲಿಂದ ಹೊರಟು ಮನೆಗೆ ಹೋದರೆ ಸಾಕೆನಿಸಿ, ವ್ಯವಸ್ಥಾಪಕರು ಊಟಕ್ಕಾಗಿ ಕರೆಯುತ್ತಿದ್ದರೂ ಅಲ್ಲೇನಾದರೂ ವಿಶಿಷ್ಟತೆ ಇರಬಹುದೆಂದು ಹೆದರಿ ಮನೆಯೆಡೆಗೆ ನಡೆದೆ.

**ಶಿವರಾಮ ಕಾರಗಡಿ**
ಹೊಸನಗರ, ಹನಿಯ -ಅಂಚೆ, ಹೊಸನಗರ ತಾ. ಶಿವಮೊಗ್ಗ - ೫೭೭ ೪೧೮

## ಶ್ರದ್ಧಾಂಜಲಿ

**ಭಾ**ರತ ಕಮ್ಯೂನಿಸ್ಟ್ ಚಳುವಳಿಯ ಹಿರಿಯ ನಾಯಕ, ಕಾರ್ಮಿಕ ಚಳುವಳಿಯ ಮುಂದಾಳು ಆಗಿದ್ದ ಕಾ॥ ಇಂದ್ರಜಿತ್ ಗುಪ್ತ ೨೦-೨-೨೦೦೧ ರಂದು ಮುಂಜಾನೆ ಕೊಲ್ಕತಾದಲ್ಲಿ ನಿಧನರಾದರು.

ಎಂಬತ್ತೆರಡರ ಪ್ರಾಯದ ಇಂದ್ರಜಿತ್, ೧೯೬೦ ರಿಂದಲೂ ಪಶ್ಚಿಮ ಬಂಗಾಳದಿಂದ ಲೋಕಸಭೆಗೆ ಆಯ್ಕೆಯಾಗಿ ದೀರ್ಘ ಅವದಿಗೆ ಸಂಸತ್ ಸದಸ್ಯರಾಗಿದ್ದರು



ಕಾ॥ ಇಂದ್ರಜಿತ್ ಗುಪ್ತ

ಬಾರ್-ಅಟ್-ಲಾ ಕಲಿಯಲು ಇಂಗ್ಲೆಂಡಿಗೆ ಹೋಗಿದ್ದ ಅವರು, ಅಲ್ಲಿನ ಕಮ್ಯೂನಿಸ್ಟ್ ಚಳುವಳಿಯಿಂದ ಸ್ಫೂರ್ತಿಗೊಂಡು ನಿಷ್ಠಾವಂತ ಮಾರ್ಕ್ಸ್‌ವಾದಿಯಾಗಿ ಭಾರತಕ್ಕೆ ಹಿಂದಿರುಗಿದರು. ವಿದ್ಯಾರ್ಥಿ ದೆಸೆಯಲ್ಲೇ ಸ್ವಾತಂತ್ರ್ಯ ಚಳುವಳಿಯತ್ತ ಆಕರ್ಷಿತರಾದರು. ಸ್ವಾತಂತ್ರ್ಯ ಹೋರಾಟದ ಜೊತೆಯಲ್ಲೇ ಕಾರ್ಮಿಕರ ಹಕ್ಕುಗಳಿಗಾಗಿ ಹೋರಾಟದೊಂದಿಗೆ ತಮ್ಮ ಸಾರ್ವಜನಿಕ ಜೀವನವನ್ನು ಪ್ರಾರಂಭಿಸಿದರು. ವರ್ಲ್ಡ್ ಫೆಡರೇಷನ್ ಆಫ್ ಟ್ರೇಡ್ ಯೂನಿಯನ್ನಿನ ಅಧ್ಯಕ್ಷರಾಗಿ, ಅಖಿಲ ಭಾರತ ಟ್ರೇಡ್ ಯೂನಿಯನ್ ಕಾಂಗ್ರೆಸ್ಸಿನ ಪ್ರಧಾನ ಕಾರ್ಯದರ್ಶಿಯಾಗಿ ಮತ್ತು ಭಾರತ ಕಮ್ಯೂನಿಸ್ಟ್ ಪಾರ್ಟಿಯ ಪ್ರಧಾನ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿದರು.

ಸಂಸತ್ಸದಸ್ಯತನದ ಗತ್ತು, ಆಡಂಬರ ಇಲ್ಲದ ಸರಳ ಜೀವಿ, ನಿಗರ್ವಿ. ಸಮರ್ಥ ವಾಗ್ಮಿ. ಸಂಸತ್ತಿನಲ್ಲಿ ಮಾತಾಡಲು ನಿಂತರೆ ಎಲ್ಲರ ಗಮನ ಇವರ ಮಾತಿನತ್ತ. ಕಟುವಾಗಿ, ನಿಷ್ಠುರವಾಗಿ ಹೇಳಬೇಕಾದ್ದನ್ನು ಸಹ ತರ್ಕಬದ್ಧವಾಗಿ ಸರ್ಕಾರದ ಕಿವಿಗೆ ನಾಟುವಂತೆ ಹೇಳಬಲ್ಲ ವಿವೇಚನೆ. ತೂಕದ ಮಾತುಗಳಿಗೆ ಹೆಸರಾದವರು. ಅತ್ಯುತ್ತಮ ಸಂಸದೀಯ ಪಟು ಎಂಬ ಗೌರವಕ್ಕೆ ಪಾತ್ರರಾದವರು.

ಎಡಪಕ್ಷಗಳ ಒಗ್ಗಟ್ಟಿನ ಬಗ್ಗೆ ತಮ್ಮ ಕಡೆಯ ದಿನಗಳ ವರೆಗೂ ಅತ್ಯಂತ ಕಾಳಜಿ ವಹಿಸಿ ದುಡಿದ ಕಾ॥ ಇಂದ್ರಜಿತ್ ಅವರ ನಿಧನದಿಂದ ಭಾರತ ಕಮ್ಯೂನಿಸ್ಟ್ ಪಕ್ಷದ ಜೊತೆಗೆ ಎಲ್ಲ ಪ್ರಗತಿಶೀಲ ಚಳುವಳಿಗಳು ಬಡವಾಗಿವೆ.

ಇಂದ್ರಜಿತ್ ಗುಪ್ತ ಅವರಿಗೆ ಹೊಸತು ಶ್ರದ್ಧಾಂಜಲಿ ಅರ್ಪಿಸುತ್ತದೆ. ❑❑❑

## ಸಾದರ ಸ್ವೀಕಾರ

**ಸ್ತ್ರೀ ಸಂ-ವೇದನೆಗಳು** (ಕವನ ಸಂಕಲನ)
*ಕಲ್ಯಾಣಮ್ಮ ಲಂಗೋಟಿ*
**ಪುಟ : ೬೪** **ಬೆಲೆ : ರೂ. ೧೦**
**ಕನ್ನಡ ಜ್ಯೋತಿ ಪ್ರಕಾಶನ**, ಮಹಾಂತೇಶನಗರ
ರಾಮದುರ್ಗ - ೫೯೧ ೧೨೩ (ಬೆಳಗಾವಿ ಜಿಲ್ಲೆ)

**ಇಚ್ಛಾ ಸಂತಾನ** (ಲೇಖನಗಳು)
*ಬಿ. ಬೋರೇಗೌಡ*
**ಪುಟ : ೪೮** **ಬೆಲೆ : ರೂ. ೧೫**
**ಪದ್ಮ ಪ್ರಕಾಶನ**, ೪೨, ೯ನೇ ಮುಖ್ಯರಸ್ತೆ,
ವಿನಾಯಕನಗರ, ಮೈಸೂರು - ೧೨.

**ಗ್ರಂಥ ಗ್ರಂಥಾಲಯ ವಾಚನ** (ಸೂಕ್ತಿ ಸಂಗ್ರಹ)
ಸಂಪಾದಕ : *ಟಿ. ವಿ. ವೆಂಕಟರಮಣಯ್ಯ*
**ಪುಟ : ೮೦** **ಬೆಲೆ : ರೂ. ೨೫**

**ನಗೆ ಹಾಸ್ಯ** (ಸೂಕ್ತಿ ಸಂಗ್ರಹ)
ಸಂಪಾದಕ : *ಟಿ. ವಿ. ವೆಂಕಟರಮಣಯ್ಯ*
**ಪುಟ : ೮೦** **ಬೆಲೆ : ರೂ. ೨೫**

**ಚಿಂತೆ** (ಸೂಕ್ತಿ ಸಂಗ್ರಹ)
ಸಂಪಾದಕ : *ಟಿ. ವಿ. ವೆಂಕಟರಮಣಯ್ಯ*
**ಪುಟ : ೩೬** **ಬೆಲೆ : ರೂ. ೧೦**

*ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು :*
**ಟಿ. ವಿ. ವೆಂಕಟರಮಣಯ್ಯ** : ಇಡಬ್ಲ್ಯು ಎಸ್. ೨೧೮,
ಕೆ.ಎಚ್.ಬಿ. ಕಾಲೋನಿ, ೨ನೇ ಹಂತ, ೫ನೇ ಕ್ರಾಸ್,
ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯.

# ಅಮೆರಿಕಾದ ಅಧ್ಯಾಪಕ ಸಂಘದ ಕಾರ್ಯವಿಧಾನ

*ಜನವರಿ ವಿಶೇಷ ಸಂಚಿಕೆಯಲ್ಲಿ ಪ್ರಕಟವಾದ ಲೇಖನದ ಮೊದಲ ಭಾಗದಲ್ಲಿ ಶ್ರೀ ದಿನೇಶ್ ಕುಮಾರ್ ಅವರು ಅಮೆರಿಕಾದ ವಿಶ್ವವಿದ್ಯಾಲಯಗಳ ಹಾಗೂ ಕಾಲೇಜುಗಳ ಪ್ರಾಧ್ಯಾಪಕರ ಸಂಘವು ಶೈಕ್ಷಣಿಕ ಶ್ರೇಷ್ಠತೆಯನ್ನು ಹೆಚ್ಚಿಸಲು ಮತ್ತು ಅಧ್ಯಾಪಕ ವೃಂದದ ಸೇವಾ ನಿಯಮಗಳನ್ನು ಹಸನುಗೊಳಿಸಲು ಹೇಗೆ ಸಂಘಟಿತವಾಗಿದೆ ಮತ್ತು ಹೇಗೆ ಮಧ್ಯಪ್ರವೇಶ ಮಾಡುತ್ತದೆ ಎಂಬುದನ್ನು ವಿವರಿಸಿದ್ದರು. ಶಿಕ್ಷಕರಿಗೆ ಪ್ರಾತಿನಿಧ್ಯ ನೀಡದೆ ಯಾವ ಶೈಕ್ಷಣಿಕ ನಿರ್ಧಾರವೂ ಸಾಧ್ಯವಿಲ್ಲವೆಂಬುದನ್ನು ಅಮೆರಿಕಾದ ಪ್ರಾಧ್ಯಾಪಕರ ಸಂಘ ತೋರಿಸಿಕೊಟ್ಟಿದೆ. ಪ್ರಾಧ್ಯಾಪಕರ ಸಂಘದ ಸಕ್ರಿಯ ಕಾರ್ಯಕರ್ತರಾದ ಪ್ರೊ॥ ದಿನೇಶ್ ಹಾಸನ್ ಲೇಖನದ ಎರಡನೆಯ ಹಾಗೂ ಕೊನೆಯ ಭಾಗದಲ್ಲಿ, ವಿಶ್ವವಿದ್ಯಾನಿಲಯಗಳ ಬೌದ್ಧಿಕ ನೌಕರರಿಗೆ ಲಭ್ಯವಿರುವ ಸೌಲಭ್ಯಗಳನ್ನು ಗಟ್ಟಿಗೊಳಿಸಿಕೊಳ್ಳಲು ಪ್ರಾಧ್ಯಾಪಕ ಸಂಘವು ಅನುಸರಿಸುವ ಕ್ರಮಗಳನ್ನು ಪರಿಶೀಲಿಸಿದ್ದಾರೆ. ಶಿಕ್ಷಣ ಕ್ಷೇತ್ರದಲ್ಲಿ ಅಮೆರಿಕಾದ ಮಾದರಿಗಳನ್ನು ಎತ್ತಿ ಹಿಡಿಯುವ ನಮ್ಮ ಆಡಳಿತ ಯಂತ್ರವು ಅಧ್ಯಾಪಕ ಸಂಘಗಳನ್ನು ಪುರಸ್ಕರಿಸಲು ಹಿಂದೇಟು ಹಾಕುವುದನ್ನು ಗಮನಿಸಿದರೆ ನಮ್ಮ ಹೋರಾಟದ ಹಾದಿ ಎಷ್ಟು ದುರ್ಗಮವೆಂಬುದರ ಅರಿವು ಉಂಟಾಗುತ್ತದೆ. ಹೋರಾಟಗಾರರು ಸಹ ಸಂಘಟನೆಯ ವಿಧಾನಗಳನ್ನು ವಿಸ್ತೃತಗೊಳಿಸಿಕೊಳ್ಳುವ ಅವಶ್ಯಕತೆಯನ್ನು ಮನಗಾಣಬೇಕಾಗಿದೆ. 'ಹೊಸತು'ವಿಗಾಗಿಯೇ ಬರೆಯಲಾದ ಪ್ರೊಫೆಸರ್ ದಿನೇಶ್ ಹಾಸನ್ ಅವರ ಇಂಗ್ಲಿಷ್ ಲೇಖನವನ್ನು ಎರಡು ಭಾಗಗಳಲ್ಲಿ ಸಂಗ್ರಹಿಸಿಕೊಟ್ಟಿರುವವರು ಶ್ರೀಮತಿ ವೀಣಾ ಕುಮಾರ್.*

*ಹಿಂದಿನ ಭಾಗದಲ್ಲಿ ಪಠ್ಯಕ್ರಮಗಳನ್ನು ನವೀಕರಿಸಬೇಕಾದರೆ ಅಮೆರಿಕಾದ ವಿಶ್ವವಿದ್ಯಾಲಯಗಳು ಯಾವ ಕ್ರಮಗಳನ್ನು ಕಡ್ಡಾಯವಾಗಿ ಅನುಸರಿಸಬೇಕಾಗುತ್ತದೆಂಬುದನ್ನು ಸೂಚಿಸಲಾಗಿತ್ತು. ಅದರ ಮುಂದುವರಿಕೆ ಇಲ್ಲಿದೆ.*

**ಪ್ರೊ॥ ದಿನೇಶ್ ಹಾಸನ್**

ಒಂದು ನಿರ್ದಿಷ್ಟ ಪಠ್ಯಕ್ರಮವನ್ನು ಯಾವುದೇ ತ್ರೈಮಾಸಿಕ ಮೌಲ್ಯಮಾಪನಕ್ಕೆ ಒಳಪಡಿಸುವುದು ಬೇಡ ಎಂಬುದಕ್ಕೆ ಬಲವಾದ ಕಾರಣಗಳಿದ್ದರೆ ಆಯಾ ಶಿಕ್ಷಣ ವಿಭಾಗದ ಸದಸ್ಯರು ಅದನ್ನು ಕೈಬಿಡುವಂತೆ ವಿಭಾಗದ ಮುಖ್ಯಸ್ಥರಿಗೆ ಲಿಖಿತ ಬೇಡಿಕೆಯನ್ನು ಮುಂದಿಡಬೇಕು. ಮುಖ್ಯಸ್ಥರು ಈ ಬೇಡಿಕೆಯನ್ನು ಒಪ್ಪಿಕೊಂಡಲ್ಲಿ ಅವರ ರುಜು ಹಾಕಿದ ಒಪ್ಪಿಗೆಯನ್ನು ಒಳಗೊಂಡ ಬಿನ್ನವತ್ತಳೆಯನ್ನು ಅವರ ಅಧಿಕೃತ ಸಿಬ್ಬಂದಿಯ ಕಡತದಲ್ಲಿ ಸೇರಿಸಲಾಗುತ್ತದೆ. ಆಡಳಿತದ ವತಿಯಿಂದ ನಡೆಯುವ ಮೌಲ್ಯ ಮಾಪನಗಳಿಗೆ ಆಡಳಿತವು ಸೂಕ್ತ ಸಲಕರಣೆಗಳನ್ನು ಮತ್ತು ವ್ಯವಸ್ಥೆಯನ್ನು ಒದಗಿಸುತ್ತದೆ. ವಿದ್ಯಾರ್ಥಿಗಳು ಅಧ್ಯಾಪಕರ ಮೌಲ್ಯಮಾಪನ ಮಾಡುವ ವಿಧಿವಿಧಾನವನ್ನು ಅಧ್ಯಾಪಕ ಮಂಡಲಿ ಮತ್ತು ಶೈಕ್ಷಣಿಕ ವ್ಯವಹಾರಗಳ ಉಸ್ತುವಾರಿ ಸಮಿತಿಯ ಉಪಾಧ್ಯಕ್ಷರು ಸೂಚಿಸಿ, ಸೆನೇಟ್ ಅವನ್ನು ಒಪ್ಪಿಕೊಂಡ ನಂತರ ಯಾವುದೇ ಲಿಖಿತ ಪತ್ರದಲ್ಲಿ ಸೇರಿಸಲಾಗಿರುತ್ತದೆ.

ವಿದ್ಯಾರ್ಥಿಗಳು ಮಾಡಿದ ಅಧ್ಯಾಪಕರ ಮೌಲ್ಯಮಾಪನ ಮತ್ತು ಸಹೋದ್ಯೋಗಿಗಳು ಮಾಡಿದ ಮೌಲ್ಯಮಾಪನದ ಸಾರಾಂಶಗಳನ್ನು ಆಯಾ ವಿಭಾಗದ ಸದಸ್ಯರಿಗೆ ಮೌಲ್ಯ ಮಾಪನದ ನಂತರ ಬರುವ ತ್ರೈಮಾಸಿಕದಲ್ಲಿ ನೀಡಲಾಗುವುದು. ವಿದ್ಯಾರ್ಥಿಗಳು ಮಾಡಿದ ಮೌಲ್ಯಮಾಪನದ ಪ್ರತಿಯೊಂದನ್ನು ಗ್ರಂಥಾಲಯದಲ್ಲಿ ಇಡಲಾಗುತ್ತದೆ. ಇದು ಗ್ರಂಥಾಲಯವನ್ನು ಉಪಯೋಗಿಸಿಕೊಳ್ಳುವ ಪ್ರತಿಯೊಬ್ಬರಿಗೂ ಲಭ್ಯವಿರುತ್ತದೆ. ಮೌಲ್ಯಮಾಪನದ ಸಾರಾಂಶಗಳನ್ನು ಆಯಾ ಅಧ್ಯಾಪಕರ ಅಧಿಕೃತ ಸಿಬ್ಬಂದಿ ಕಡತದಲ್ಲೂ ಸೇರಿಸಲಾಗುತ್ತದೆ.

ಕಡೇ ಪಕ್ಷ ಮೂರು ವರ್ಷಗಳಿಗೊಮ್ಮೆ ಆಯಾ ಕಾಲೇಜುಗಳ ಡೀನ್‌ಗಳು, ಶೈಕ್ಷಣಿಕ ವ್ಯವಹಾರಗಳ ಉಸ್ತುವಾರಿ ಸಮಿತಿಯ ಉಪಾಧ್ಯಕ್ಷರು ಮತ್ತು ಅಧ್ಯಕ್ಷರುಗಳ ಮೌಲ್ಯಮಾಪನವನ್ನು ಪೂರ್ಣಾವಧಿಯ ಅಧ್ಯಾಪಕರೇ ಮಾಡುತ್ತಾರೆ. ಇದರ ಸಾರಾಂಶಗಳನ್ನು ಆಡಳಿತಾಧಿಕಾರಿಯ ಅಧಿಕೃತ ಸಿಬ್ಬಂದಿ ಕಡತದಲ್ಲಿ ಇರಿಸಲಾಗುತ್ತದೆ. ಬೋಧನೆಯ ಗುಣಮಟ್ಟವನ್ನು ಉತ್ತಮಪಡಿಸಲು ಆಡಳಿತವು ಪ್ರಾಧ್ಯಾಪಕರ ಸಂಘದ ಘಟಕದೊಂದಿಗೆ ಸಮಾಲೋಚಿಸಿ ಅಧ್ಯಾಪಕರ ಶೈಕ್ಷಣಿಕ ಶಿಸ್ತಿನ ವಿಷಯಗಳಿಗೆ ಸಂಬಂಧಿಸಿದಂತೆ ಸೂಕ್ತ ಸಂಖ್ಯೆಯ ಕಾರ್ಯಾಗಾರಗಳನ್ನು ನಡೆಸುತ್ತದೆ. ಇದು ಒಪ್ಪಂದವು ಜಾರಿಯಲ್ಲಿರುವ ಪ್ರತಿವರ್ಷದಲ್ಲೂ ನಡೆಯುತ್ತದೆ.

ಒಪ್ಪಂದದಲ್ಲಿ ವರ್ಣಿಸಿರುವ ಅಧ್ಯಾಪಕ ವೃಂದದವರ ಮೌಲ್ಯಮಾಪನದ ವ್ಯವಸ್ಥೆಯನ್ನು ಮಾತ್ರ ಒಪ್ಪಂದದ ಅವಧಿಯಲ್ಲಿ ಉಪಯೋಗಿಸಲಾಗುತ್ತದೆ. ಈ ಒಪ್ಪಂದದ ಇತರ ಉಪಬಂಧಗಳು ಅಪೇಕ್ಷಿಸುವ ತೌಲನಿಕ ತೀರ್ಪುಗಳಿಗೆ ಈ ಕ್ರಮ ಅನ್ವಯಿಸುವುದಿಲ್ಲ.

ಅಧ್ಯಾಪಕರ ವೈಯ್ಯಕ್ತಿಕ ಕಡತಗಳಲ್ಲಿನ ದಾಖಲೆಗಳ ವಿಮರ್ಶೆಗೆ ಅವಕಾಶ ಕೊಡದೆ ಅವರ ವೃತ್ತಿ ನಿರ್ವಹಣೆಯ ಬಗ್ಗೆ ಯಾವುದೇ ಗುಪ್ತ ದಾಖಲೆಗಳನ್ನು ಇಡದಂತೆ ನೋಡಿಕೊಳ್ಳುವುದು ಒಪ್ಪಂದದ ಮುಖ್ಯ ಉದ್ದೇಶ. ಪ್ರತಿಯೊಬ್ಬ ಪೂರ್ಣಾವಧಿ ಅಧ್ಯಾಪಕನಿಗೂ ಆಡಳಿತವು ಒಂದು ಅಧಿಕೃತ ಕಡತವನ್ನಿರಿಸಿದ್ದು ಅದು ಶೈಕ್ಷಣಿಕ ವ್ಯವಹಾರಗಳನ್ನು ನೋಡಿಕೊಳ್ಳುವ ಉಪಾಧ್ಯಕ್ಷರ ಕಛೇರಿಯಲ್ಲಿ ಇಟ್ಟಿರಲಾಗುತ್ತದೆ. ಒಪ್ಪಂದದಲ್ಲಿ ಮೌಲ್ಯಮಾಪನದ ಬಗ್ಗೆ ನಿಗದಿಗೊಳಿಸಲಾದ ಉಪಬಂಧಗಳನ್ನು ಆಚರಣೆಗೆ ತರಲು ಇರುವ ಅಧಿಕೃತ ದಾಖಲೆ ಎಂದರೆ ಇದೊಂದೇ. ಆಡಳಿತವು ಏಕಪಕ್ಷೀಯವಾಗಿ ಯಾವುದೇ ಅಧ್ಯಾಪಕನ ಕಡತದಲ್ಲಿ ಬೇರೆ ದಾಖಲೆಗಳನ್ನು ಸೇರಿಸುವುದನ್ನು ತಡೆಗಟ್ಟಲು ವೈಯಕ್ತಿಕ ಸೇವಾ ಕಡತದಲ್ಲಿ ಈ ಕೆಳಗಿನ ದಾಖಲೆಗಳು ಮಾತ್ರವೇ ಇರಬೇಕೆಂದು ಒಪ್ಪಿಕೊಳ್ಳಲಾಗಿದೆ.

(ಅ) ವ್ಯಕ್ತಿಯ ಹಿಂದಿನ ಉದ್ಯೋಗ, ವಿದ್ಯಾರ್ಹತೆ ಮತ್ತು ತರಬೇತಿಗಳ ಬಗ್ಗೆ ಮಾಹಿತಿ; (ಆ) ಉದ್ಯೋಗಿಯು ಹಿಂದೆ ಕೆಲಸ ಮಾಡಿರಬಹುದಾದ ಎಲ್ಲಾ ಕಾಲೇಜುಗಳ ಅಧಿಕೃತ ದಾಖಲೆಗಳು; (ಇ) ಆಯಾ ಅಧ್ಯಾಪಕರ ವಿಶ್ವವಿದ್ಯಾಲಯದೊಂದಿಗಿನ ಒಪ್ಪಂದಗಳ ಪ್ರತಿಗಳು; (ಈ) ವಿದ್ಯಾರ್ಥಿಗಳು, ವಿಭಾಗಾ ಮುಖ್ಯಸ್ಥರು ಮತ್ತು ಸಹೋದ್ಯೋಗಿಗಳು ಮಾಡಿದ ಮೌಲ್ಯಮಾಪನದ ವರದಿಗಳು; (ಉ) ಅಧ್ಯಾಪಕನು ಯಾವುದೇ ವಿಷಯದ ಬಗ್ಗೆ ಸ್ವತಃ ಸೇರಿಸಲಿಚ್ಛಿಸುವ ದಾಖಲೆಗಳ ಮತ್ತು ಪ್ರತಿಕ್ರಿಯೆಗಳ ಪ್ರತಿ; (ಊ) ಬಡ್ತಿ ಮತ್ತು ಸೇವಾವಧಿಗೆ ಸಂಬಂಧಿಸಿದ ದಾಖಲೆಗಳು; (ಋ) ಆಡಳಿತವು ಫೈಲಿನಲ್ಲಿ ಸೇರಿಸಲು ಸೂಕ್ತವೆಂದು ಭಾವಿಸುವ ದಾಖಲೆಗಳು (ಅವು ಕಾನೂನುಬದ್ಧವಾದ ರೀತಿಯಲ್ಲಿದ್ದಲ್ಲಿ); ಮತ್ತು (ಌ) ಸೇವಾ ಹಿರಿತನ ಅಥವಾ ಜ್ಯೇಷ್ಠತೆಗೆ ಸಂಬಂಧಿಸಿದ ಮಾಹಿತಿ.

ಪ್ರತಿಯೊಬ್ಬ ಅಧ್ಯಾಪಕನ ಕಡತದಲ್ಲೂ ಶೈಕ್ಷಣಿಕ ವ್ಯವಹಾರಗಳ ಉಪಾಧ್ಯಕ್ಷರ ಅಥವಾ ಅವರ ಅಧಿಕೃತ ಪ್ರತಿನಿಧಿಯ ಸಹಿ ಮತ್ತು ಸೇರಿಸಿದ ದಿನಾಂಕವನ್ನು ನಮೂದಿಸಿರಲಾಗುತ್ತದೆ. ಅನಾಮಧೇಯ ಹೇಳಿಕೆಗಳನ್ನು ಇರಿಸಲಾಗುವುದಿಲ್ಲ. ಅಭ್ಯರ್ಥಿಯು ಕಳಿಸಿಲ್ಲದ ಅಥವಾ ಬೇರೆಯವರು ಕಳಿಸಿದ್ದು ಅಭ್ಯರ್ಥಿಗೆ ಅದರ ಪ್ರತಿ ತಲುಪದೇ ಇದ್ದ ಪಕ್ಷದಲ್ಲಿ, ಅಂತಹ ದಾಖಲೆಯ ಪ್ರತಿಯೊಂದನ್ನು ಅಭ್ಯರ್ಥಿಗೆ ಆಡಳಿತವು ಕಳಿಸಿಕೊಡುತ್ತದೆ.

ಅಭ್ಯರ್ಥಿಯು ಲಿಖಿತ ರೂಪದಲ್ಲಿ ಅನುಮತಿ ಕೊಟ್ಟಿದ್ದ ಪಕ್ಷದಲ್ಲಿ ಅವನ ಅಥವಾ ಅವಳ ಪ್ರತಿನಿಧಿ ಮತ್ತು/ಅಥವಾ ಪ್ರಾಧ್ಯಾಪಕ ಸಂಘದ ಸ್ಥಳೀಯ ಘಟಕವು ಫೈಲನ್ನು ಪರಿಶೀಲಿಸಿ ದಾಖಲೆಗಳ ನಕಲನ್ನು ತೆಗೆದುಕೊಳ್ಳಬಹುದು. ನಿರ್ದಿಷ್ಟ ಫಾರಮ್ಮಿನಲ್ಲಿ ಅನುಮತಿ ಇಲ್ಲ ಎಂಬ ಒಂದೇ ಕಾರಣದಿಂದ ಫೈಲನ್ನು ನೋಡುವ ಅವಕಾಶವನ್ನು ನಿರಾಕರಿಸುವುದಿಲ್ಲ. ಫೈಲನ್ನು ನೋಡಲು ಆಡಳಿತವು ಶುಲ್ಕ ವಿಧಿಸುವುದಿಲ್ಲ, ಆದರೆ ನಕಲು ಮಾಡಿಕೊಳ್ಳಲು ಸಮಂಜಸ ಶುಲ್ಕ ವಿಧಿಸಬಹುದು.

ಸೂಕ್ತ ಆಡಳಿತಾಧಿಕಾರಿಗಳಿಗೆ ಸಿಬ್ಬಂದಿ ಫೈಲನ್ನು ಪಡೆದುಕೊಳ್ಳಲು ಅವಕಾಶವಿದೆ. ಅಧ್ಯಾಪಕರು ನಿಗದಿತ ಸಮಯಗಳಲ್ಲಿ ಫೈಲುಗಳನ್ನು ನೋಡಬಹುದು. ಫೈಲನ್ನು ನೋಡಿ, ನಕಲು ಮಾಡಿಕೊಳ್ಳಲು ಪ್ರಾಧ್ಯಾಪಕರ

ಸಂಘಕ್ಕೂ ಅವಕಾಶವಿದೆ. ವಿಭಾಗದ ಮುಖ್ಯಸ್ಥ ಅಥವಾ ಡೀನ್‌ರ ಕಛೇರಿಯಲ್ಲಿ ಅನಧಿಕೃತ ಫೈಲುಗಳಿದ್ದಲ್ಲಿ ಸಂಬಂಧಪಟ್ಟ ಅಧ್ಯಾಪಕರು ಅದನ್ನು ಪಡೆಯುವ ಅವಕಾಶವಿದೆ.

ಅಭ್ಯರ್ಥಿಯ ಲಿಖಿತ ಬೇಡಿಕೆಯಂತೆ ಆಡಳಿತವು ಕೆಳಕಾಣಿಸಿದ ದಾಖಲೆಗಳನ್ನು ಫೈಲಿನಿಂದ ತೆಗೆದು ಬಿಡಬಹುದು : (ಅ) ವ್ಯಕ್ತಿಯು ಯಾವುದೇ ಕೊರತೆಗಳ ಬಗ್ಗೆ ಬರೆದ ದಾಖಲೆಗಳು (ಅವನ್ನು ಸಲ್ಲಿಸಿ ಮೂರಕ್ಕಿಂತ ಹೆಚ್ಚು ವರ್ಷಗಳಾಗಿದ್ದಲ್ಲಿ); (ಆ) ಅಧ್ಯಾಪಕರ ಮೇಲೆ ಅವರಲ್ಲಿ ಕಂಡಿರಬಹುದಾದ ಕೊರತೆಯ ಬಗ್ಗೆ ವಿದ್ಯಾರ್ಥಿಗಳು ಸಲ್ಲಿಸಿದ ಪತ್ರಗಳು (ಅವನ್ನು ಸಲ್ಲಿಸಿ ಮೂರಕ್ಕಿಂತ ಹೆಚ್ಚು ವರ್ಷಗಳಾಗಿದ್ದಲ್ಲಿ); (ಇ) ವಿದ್ಯಾರ್ಥಿಗಳು ನಡೆಸಿದ ಮೌಲ್ಯಮಾಪನಗಳು (ಮೌಲ್ಯಮಾಪನ ನಡೆಸಿ ಕನಿಷ್ಠ ಮೂರು ಶೈಕ್ಷಣಿಕ ವರ್ಷಗಳು ಕಳೆದಿದ್ದಲ್ಲಿ); (ಈ) ಮುಖ್ಯಸ್ಥರು ಮತ್ತು/ಅಥವಾ ಸಹೋದ್ಯೋಗಿಗಳು ನಡೆಸಿದ ಮೌಲ್ಯಮಾಪನಗಳು (ಖಾಯಂ ಸೇವಾವಧಿ ಹೊಂದಿದ ಸದಸ್ಯರಿಗಾದರೆ ಅದು ನಡೆದು ೨ ವರ್ಷಗಳಾಗಿದ್ದರೆ, ಹಾಗೆ ಖಾಯಂ ಸೇವಾವಧಿ ಹೊಂದಿರದ ಸದಸ್ಯರಿಗಾದರೆ ಅದು ನಡೆದು ೪ ವರ್ಷಗಳಾಗಿದ್ದರೆ).

ಒಪ್ಪಂದದ ಎರಡೂ ಪಕ್ಷಗಳು ವೃತ್ತಿ ಕೌಶಲ್ಯದ ಅಭಿವೃದ್ಧಿಗೆ ರಜೆಯ ಪರಿಕಲ್ಪನೆಯನ್ನು ಒಪ್ಪಿಕೊಳ್ಳುತ್ತವೆ. ಆಡಳಿತವು ಪುದುವಟ್ಟಿನ ಅಥವಾ ಅನುದಾನದ ಲಭ್ಯತೆಗೆ ಅನುಗುಣವಾಗಿ ವರ್ಷಕ್ಕೆ ಎರಡು ಬಾರಿ ಹೀಗೆ ಕೌಶಲ್ಯದ ಅಭಿವೃದ್ಧಿಗಾಗಿ ರಜೆಯನ್ನು ನೀಡಬಹುದು.

ವೃತ್ತಿಪರ ಕೌಶಲ್ಯದ ಅಭಿವೃದ್ಧಿಗಾಗಿ ಸಂಬಳ ರಹಿತ ರಜೆಯನ್ನೂ ವಿಭಾಗದ ಮುಖ್ಯಸ್ಥರು, ಡೀನ್ ಹಾಗೂ ಶೈಕ್ಷಣಿಕ ವ್ಯವಹಾರಗಳ ಉಪಾಧ್ಯಕ್ಷರ ಶಿಫಾರಸ್ಸಿನ ಮೇರೆಗೆ ಆಯಾ ಸಂಸ್ಥೆಯ ವಿಶ್ವಸ್ಥ ಮಂಡಳಿಯು ಯಾವುದೇ ಸಮಯದಲ್ಲಿ ನೀಡಬಹುದು.

ಪ್ರಾಧ್ಯಾಪಕರ ಸಂಘಗಳ ಪರವಾಗಿ ಸಂಧಾನ ನಡೆಸುವ ಸ್ಥಳೀಯ ಘಟಕದ ಸದಸ್ಯರು ಸಾರ್ವಜನಿಕ ಸೇವೆ ಅಥವಾ ಕುಟುಂಬದ ಅವಶ್ಯಕತೆಗಳಂತಹ ಕಾರಣಗಳಿಗೆ ಯಾವುದೇ ಸಮಯದಲ್ಲಿ ಸಂಬಳ ರಹಿತ ರಜೆ ಪಡೆಯಬಹುದು.

ಮುಖ್ಯಸ್ಥರು ವಿಭಾಗದ ಸದಸ್ಯರೊಂದಿಗೆ ಸಮಾಲೋಚನೆ ನಡೆಸಿ ವಿಭಾಗದ ಯಾವುದೇ ಅಧ್ಯಾಪಕರ ಪ್ರವಾಸಕ್ಕೆಂದು ಮೀಸಲಾದ ಹಣವನ್ನು ಸದಸ್ಯರಿಗೆ ನ್ಯಾಯ ಸಮ್ಮತವಾಗಿ ಸಿಗುವಂತೆ ಪ್ರಯತ್ನಿಸುತ್ತಾರೆ. ಈ ಒಪ್ಪಂದದ ಅವಧಿಯವರೆಗೆ ಸಂಧಾನ ನಡೆಸುವ ಘಟಕದ ಸದಸ್ಯರಿಗೆ ಆಡಳಿತವು ವಿಮಾ ಸವಲತ್ತನ್ನು ನೀಡುತ್ತದೆ. ಘಟಕದ ಸದಸ್ಯರಿಗೆ ಅಥವಾ ಅವರೇ ಆರಿಸಿಕೊಂಡ ಅವರ ಕುಟುಂಬದ ಯಾವುದೇ ಒಬ್ಬ ಸದಸ್ಯರಿಗೆ ದಂತ ವಿಮಾ ಸವಲತ್ತನ್ನು ಸಹ ನೀಡುತ್ತದೆ.

ಆಡಳಿತ ಮತ್ತು ಪ್ರಾಧ್ಯಾಪಕರ ಸಂಘದ ಘಟಕವು ಈ ಒಪ್ಪಂದದ ಕಾರ್ಯಭಾರವು ಪ್ರತಿಯೊಬ್ಬರ ಜವಾಬ್ದಾರಿ ಯೆಂದು ಗುರುತಿಸಿ ಅದರಂತೆ ಕಾರ್ಯನಿರ್ವಹಣೆ ಮಾಡುತ್ತದೆ.

ಸಂಧಾನ ನಡೆಸುವ ಘಟಕದಲ್ಲಿನ ಎಲ್ಲಾ ಸದಸ್ಯರಿಗೂ ಸ್ವತಂತ್ರವಾಗಿ ಸಂಘಟನೆಗೊಳ್ಳುವ, ಪ್ರಾಧ್ಯಾಪಕ ಸಂಘವು ಸಾಮೂಹಿಕ ಸಂಧಾನದಲ್ಲಿ ತೊಡಗಿಕೊಳ್ಳುವಂತೆ ಬೆಂಬಲಿಸುವ ಹಕ್ಕಿದೆ ಎಂದು ಒಪ್ಪಿಕೊಳ್ಳಲಾಗಿದೆ. ಪ್ರಾಧ್ಯಾಪಕ ಸಂಘದಲ್ಲಿ ಸದಸ್ಯತ್ವ ಹೊಂದಿದ್ದಕ್ಕೆ ಆಡಳಿತವು ಯಾವುದೇ ತಾರತಮ್ಯವನ್ನು ತೋರುವಂತಿಲ್ಲ; ಅಲ್ಲದೆ ಘಟಕಕ್ಕೆ ಸೇರಿಕೊಳ್ಳದಂತೆ ಹಿಮ್ಮೆಟ್ಟಿಸುವ ಪ್ರಯತ್ನವನ್ನು ಮಾಡುವಂತಿಲ್ಲ.

ವಿಶ್ವವಿದ್ಯಾಲಯದ ಅಂಚೆ ಸೇವೆಗಳು, ಸಭೆ ಸೇರುವ ಹಾಗೂ ತರಗತಿ ನಡೆಸುವ ಕೋಣೆಗಳು, ಸಭಾಭವನಗಳು ಮತ್ತು ಸಲಕರಣೆಗಳನ್ನು ಉಚಿತವಾಗಿ ಮತ್ತು ಸಮಂಜಸವಾಗಿ ಉಪಯೋಗಿಸಲು ಎಲ್ಲ ಸದಸ್ಯರಿಗೂ ಅವಕಾಶವಿದೆ. ಎರಡೂ ಪಕ್ಷಗಳು ದೂರುಗಳನ್ನು

ಸಕ್ರಮವಾಗಿ ನಿರ್ಣಯಿಸಲು ಪ್ರಾಮಾಣಿಕವಾದ, ನ್ಯಾಯಯುತವಾದ ಮತ್ತು ಸಮರ್ಥವಾದ ತಂತ್ರವನ್ನು ಸ್ಥಾಪಿಸಬೇಕಾದ ಅವಶ್ಯಕತೆಯನ್ನು ಇದೇ ವ್ಯವಸ್ಥೆ ಗುರುತಿಸುತ್ತದೆ. ಸಾಧ್ಯವಾದಮಟ್ಟಿಗೆ ಈ ವಿಷಯಗಳು ಪ್ರಾಮಾಣಿಕವಾಗಿ ಇತ್ಯರ್ಥವಾಗುವಂತೆ ಪ್ರಯತ್ನಿಸಲಾಗುತ್ತದೆ ಕೂಡ. ಯಾವುದೇ ದೂರಿದ್ದರೂ ಅದು ಅಗಾಧವಾಗಿ ಬೆಳೆದು ಪ್ರಕೋಪಕ್ಕೆ ಬರುವ ಮೊದಲೇ ಅದನ್ನು ಸೂಕ್ತವಾಗಿ ಪರಿಶೀಲಿಸಿ ಇತ್ಯರ್ಥವಾಗುವಂತೆ ಮಾಡುವುದನ್ನೂ ಎರಡೂ ಪಕ್ಷಗಳು ಒಂದು ನಿಯಮವನ್ನಾಗಿ ಅಂಗೀಕರಿಸಿವೆ. ಸಂಧಾನ ನಡೆಸುವ ಘಟಕದ ಸದಸ್ಯರು ತಮ್ಮ ಕುಂದು-ಕೊರತೆಗಳನ್ನು ಅನೌಪಚಾರಿಕವಾಗಿ ಪರಿಹರಿಸುವಂತೆ ಆಡಳಿತ ಅಧಿಕಾರವನ್ನು ಹೊಂದಿರುವ ಯಾವುದೇ ವ್ಯಕ್ತಿಯೊಡನೆ ಕೇಳಿಕೊಳ್ಳುವ ಹಕ್ಕು ಪಡೆದಿರುತ್ತಾರೆ. ಸಂಧಾನ ಘಟಕದ ಅಥವಾ ಪ್ರಾಧ್ಯಾಪಕರ ಸಂಘದ ಸದಸ್ಯನೊಬ್ಬನು ಒಪ್ಪಂದದ ಉಪಬಂಧಗಳ ಉಲ್ಲಂಘನೆ, ಅಪಾರ್ಥ ಅಥವಾ ಅನುಚಿತ ಉಪಯೋಗವಾಗಿದೆಯೆಂದು ಆರೋಪಿಸುವುದನ್ನು ''ಕುಂದು-ಕೊರತೆ'' ಎಂದು ಭಾವಿಸಲಾಗುತ್ತದೆ. ಅನೌಪಚಾರಿಕ ವಿಧಾನಗಳ ಮೂಲಕ ದೂರುಗಳ ಇತ್ಯರ್ಥ ಸಮಾಧಾನಕರವಾಗಿರದಿದ್ದಲ್ಲಿ, ಔಪಚಾರಿಕ ವಿಧಾನಗಳನ್ನು ಅನುಸರಿಸಲಾಗುವುದು. ಅದು ಹೀಗಿದೆ : ಮಧ್ಯಸ್ಥಿಕೆಗೆ ಅರ್ಜಿ ಹಾಕುವ ಮುನ್ನ ಒಪ್ಪಂದದಲ್ಲಿ ಸ್ಪಷ್ಟಪಡಿಸಿರುವ ಇತ್ಯರ್ಥ ಕ್ರಮದ ಸೂಕ್ತ ಕ್ರಮಗಳನ್ನು ಪೂರೈಸಿರಬೇಕು. ಪಕ್ಷಗಳು ಈ ರೀತಿಯ ಕ್ರಮಗಳನ್ನು ಅನುಸರಿಸುವ ಅಗತ್ಯವಿಲ್ಲ ಎಂದು ಲಿಖಿತ ರೂಪದಲ್ಲಿ ಒಪ್ಪಿಕೊಂಡು ಮಧ್ಯಸ್ಥಿಕೆಗೆ ನೇರವಾಗಿ ಮೊರೆಹೋಗಬಹುದು. ಈ ಪ್ರಕ್ರಿಯೆಗಳು ನಡೆಯುವಾಗ ಎರಡು ಪಕ್ಷಗಳಿಗೂ ಉಪಸ್ಥಿತರಾಗಿರುವ ಮತ್ತು ಕಾನೂನು ಸಹಾಯವನ್ನು ತಮ್ಮದೇ ಖರ್ಚಿನಲ್ಲಿ ಪಡೆದುಕೊಳ್ಳುವ ಹಕ್ಕಿದೆ.

ವಿವಾದಕ್ಕೆ ಸಂಬಂಧಪಟ್ಟ ಯಾವುದೇ ದಾಖಲೆಗಳು ಆಡಳಿತದ ಸ್ವಾಧೀನದಲ್ಲಿದ್ದಲ್ಲಿ ತೊಂದರೆಗೊಳಗಾದ ವ್ಯಕ್ತಿಯಾಗಲಿ ಸಂಘದ ಘಟಕವಾಗಲಿ ಕೋರಿಕೆ ಸಲ್ಲಿಸಿದಲ್ಲಿ ಕೋರಿಕೆ ಸಲ್ಲಿಸಿದ ಐದು ದಿನಗಳೊಳಗೆ ಅವನ್ನು ಒದಗಿಸಲಾಗುವುದು. ಇದರ ಖರ್ಚನ್ನು ತೊಂದರೆಗೊಳಗಾದ ಪಕ್ಷವೇ ಭರಿಸಬೇಕು. ಸಂಧಾನ ಘಟಕದ ಸದಸ್ಯನೊಬ್ಬನು ವಿವಾದ ನಿರ್ಣಯ ಪ್ರಕ್ರಿಯೆಯಲ್ಲಿ ಭಾಗವಹಿಸಿದ್ದಕ್ಕಾಗಿ ಯಾವುದೇ ಶಿಸ್ತುಕ್ರಮಕ್ಕೆ ಒಳಗಾಗುವ ಸಾಧ್ಯತೆ ಇಲ್ಲ. ಆಡಳಿತ ಮತ್ತು ಸಂಘದ ಘಟಕವು ವಿವಾದದ ಪ್ರಕ್ರಿಯೆಯನ್ನು ಬದಲಿಸಲು ಪರಸ್ಪರ ಒಪ್ಪಿಕೊಳ್ಳದಿದ್ದಲ್ಲಿ ಕುಂದುಕೊರತೆಗಳನ್ನು ಈ ಕೆಳಗೆ ವಿವರಿಸಿದಂತೆ ಪರಿಷ್ಕರಿಸಲಾಗುವುದು.

ಸಂಘದ ಘಟಕವು ಮಧ್ಯಸ್ಥಿಕೆಗೆ ಅಪೀಲು ಹೋಗುವುದನ್ನು ಬೆಂಬಲಿಸಿದರೆ ಸಂಘದ ಮತ್ತು ಆಡಳಿತದ ಪ್ರತಿನಿಧಿಗಳು ಮಧ್ಯಸ್ಥಿಕೆ ವಹಿಸುವವರನ್ನು ಆರಿಸಲು ಅಥವಾ ಅಂತಹವರ ಪಟ್ಟಿಯನ್ನು ಒದಗಿಸಲು ಫೆಡರಲ್ ಮೀಡಿಯೇಶನ್ ಮತ್ತು ಕನ್ಸಿಲಿಯೇಶನ್ ಸರ್ವೀಸ್ ಅಥವಾ ಅಮೆರಿಕನ್ ಆರ್ಬಿಟ್ರೇಶನ್ ಅಸೋಸಿಯೇಶನ್‌ಗೆ ಕೋರಿಕೆ ಸಲ್ಲಿಸಲು ಹತ್ತು ದಿನಗಳೊಳಗೆ ಸಭೆ ಸೇರುತ್ತಾರೆ. ಪಟ್ಟಿ ಸಿಕ್ಕ ಹತ್ತು ದಿನಗಳೊಳಗೆ ಮಧ್ಯಸ್ಥರನ್ನು ಆಯ್ಕೆ ಮಾಡಲಾಗುತ್ತದೆ ಅಥವಾ ಇನ್ನೊಂದು ಪಟ್ಟಿಗಾಗಿ ಕೋರಿಕೆ ಸಲ್ಲಿಸಲಾಗುತ್ತದೆ. ಕುಂದುಕೊರತೆಯ ಮಧ್ಯಸ್ಥಿಕೆ ಮಾಡಬಹುದೋ ಇಲ್ಲವೋ ಎಂಬುದರ ಬಗ್ಗೆಯೇ ಪ್ರಶ್ನೆ ಇದ್ದರೆ, ಮಧ್ಯಸ್ಥರನ್ನೇ ಈ ಬಗ್ಗೆ ತೀರ್ಮಾನಿಸಲು ಕೋರಲಾಗುತ್ತದೆ. ಮಧ್ಯಸ್ಥಿಕೆ ಬೇಕು ಎಂದಾದಲ್ಲಿ ಮಧ್ಯಸ್ಥರು ಪ್ರಕ್ರಿಯೆಯನ್ನು ಮುಂದುವರೆಸುತ್ತಾರೆ. ಸಂಘದ ಘಟಕ, ತೊಂದರೆಗೊಳಗಾದವರು ಮತ್ತು ಆಡಳಿತ ಹೀಗೆ ಮೂರೂ ಪಕ್ಷಗಳು ಮಧ್ಯಸ್ಥರ ತೀರ್ಮಾನದ ಕಟ್ಟಿಗೆ ಒಳಗಾಗುತ್ತಾರೆ ಮತ್ತು ತೀರ್ಮಾನಕ್ಕೆ ಬದ್ಧರಾಗುತ್ತಾರೆ. ವಿಚಾರಣೆಗೆ ಬಂದ ಮೂವತ್ತು ದಿನಗಳ ಒಳಗೆ ಮಧ್ಯಸ್ಥರು ತೀರ್ಮಾನ ಕೊಡುತ್ತಾರೆ. ಮಧ್ಯಸ್ಥಿಕೆಯ ಪ್ರಕ್ರಿಯೆಯು ಕೆಳಗಿನ ಕಾರ್ಯನೀತಿಯಂತೆ ನಡೆಯುತ್ತದೆ: (ಅ) ಮಧ್ಯಸ್ಥಿಕೆ ವಹಿಸುವವರು ಒಪ್ಪಂದದ ಒಕ್ಕಣೆಗೆ ಸಂಪೂರ್ಣವಾಗಿ ಬದ್ಧರಾಗಿರಬೇಕು; (ಆ) ಮಧ್ಯಸ್ಥಿಕೆ ವಹಿಸುವವರು ಮಧ್ಯಸ್ಥಿಕೆಗೆ ಒಪ್ಪಿಸಿದ ವಿಷಯವನ್ನು ಸಂಕ್ಷಿಪ್ತಗೊಳಿಸುವುದಾಗಲಿ ಒಪ್ಪಂದದ ಉಪಬಂಧಗಳನ್ನು ಬದಲಾಯಿಸುವುದಾಗಲಿ, ಮೊಟಕುಗೊಳಿಸುವುದಾಗಲಿ, ಬೆಳೆಸುವುದಾಗಲಿ ಮಾಡುವಂತಿಲ್ಲ. ಮಧ್ಯಸ್ಥರಿಗೆ ಬೇರಾವುದೇ ವಿಷಯವನ್ನು ನಿರ್ಧರಿಸುವ ಅಧಿಕಾರವಿಲ್ಲ. (ಇ) ಮಧ್ಯಸ್ಥಿಕೆ ವಹಿಸುವವರ ಶುಲ್ಕ ಮತ್ತು ಎಲ್ಲಾ ಖರ್ಚು ವೆಚ್ಚಗಳನ್ನು ಎರಡೂ ಪಕ್ಷಗಳಿಗೆ ಸಮಾನವಾಗಿ ಹಂಚಲಾಗುತ್ತದೆ. ನಡೆದ ಪ್ರಕ್ರಿಯೆಯ ಲಿಖಿತ ರೂಪ ಬೇಕಾದವರು ಅದರ ಖರ್ಚನ್ನು ತಾವೇ ಭರಿಸಬೇಕು.

ತೊಂದರೆಗೊಳಗಾದ ಪಕ್ಷವು ಬೇರಾವುದೇ ಕಾನೂನುಬದ್ಧ ರೀತಿಯಲ್ಲಿ ಮುಂದುವರೆಯಲು ನಿರ್ಧರಿಸಿದರೆ ಯಾವುದೇ ನಿಗದಿತ ನ್ಯಾಯಾಲಯದಲ್ಲಿ ವ್ಯಾಜ್ಯ ಹೂಡಬಹುದು. ಈ ಒಪ್ಪಂದದ ಎರಡೂ ಪಕ್ಷಗಳು ವಿದ್ಯಾಸಂಸ್ಥೆಗಳು ಸಾಮಾನ್ಯವಾಗಿ ಅಂಗೀಕರಿಸಿದ ಸಿದ್ಧಾಂತಗಳು ಮತ್ತು ಪ್ರಕ್ರಿಯೆಗಳ ಅಭಿವೃದ್ಧಿಯಲ್ಲಿ ಪ್ರಾಧ್ಯಾಪಕರ ಸಂಘವು ವಹಿಸಿದ ಪಾತ್ರವನ್ನು ಗುರುತಿಸುತ್ತವೆ.

ಶೈಕ್ಷಣಿಕ ಸ್ವಾತಂತ್ರ್ಯ, ಅಧ್ಯಾಪಕರ ಪರಿಣಾಮಕಾರಿ ವೃತ್ತಿ ನಿರ್ವಹಣೆ ಮತ್ತು ಹಕ್ಕುಗಳನ್ನು ರಕ್ಷಿಸುವುದೇ ಮೇಲೆ ತಿಳಿಸಿದ ಎಲ್ಲ ರೂಢಿಗಳ ಮೂಲೋದ್ದೇಶವಾದರೂ ವಿಶ್ವವಿದ್ಯಾಲಯದ ಆಡಳಿತಗಳು ಸಾಮೂಹಿಕ ಸಂಧಾನದಿಂದ ಮೂಡಿಬಂದ ಒಪ್ಪಂದವು ನೀಡುವ ರಕ್ಷಣೆಗಳನ್ನು ಒತ್ತಟ್ಟಿಗೆ ತಳ್ಳಲು ಸಾಧ್ಯವಿದೆ ಮತ್ತು ಆಗಾಗ ಪ್ರಯತ್ನಿಸುತ್ತವೆ. ಯಾವುದೇ ಅಧ್ಯಾಪಕರಿಗೆ ಒಪ್ಪಂದದ ಉಲ್ಲಂಘನೆಯಾಗಿದೆ ಎನಿಸಿದರೆ ಅವರು ಕಾನೂನು ಕ್ರಮವನ್ನು ಕೈಗೊಳ್ಳಬಹುದು. ಇಂತಹ ಸಂದರ್ಭದಲ್ಲಿ ಪ್ರಾಧ್ಯಾಪಕರ ಸಂಘದ ಘಟಕವು ಶೈಕ್ಷಣಿಕ ಕಾನೂನುಗಳಲ್ಲಿ ಪ್ರವೀಣರಾಗಿರುವ ವಕೀಲರನ್ನು ಸೂಚಿಸುವುದಕ್ಕಿಂತ ಹೆಚ್ಚೇನೂ ಮಾಡಲು ಸಾಧ್ಯವಿಲ್ಲ. ಆದರೆ ಸರ್ಕಾರಿ ವಿಶ್ವವಿದ್ಯಾಲಯಗಳ ಆಡಳಿತಗಳಿಗೆ ಕೊನೆಯಿಲ್ಲದ ಕಾನೂನು ಸಂಪನ್ಮೂಲಗಳಿರುತ್ತವೆ. ಅಂತಹ ಸಂದರ್ಭಗಳಲ್ಲಿ ಆಡಳಿತವು ಅಧ್ಯಾಪಕರನ್ನು ವ್ಯಾಜ್ಯಗಳ ಮೂಲಕ ದಿವಾಳಿಯೆಬ್ಬಿಸುವುದೇ ಅಲ್ಲದೆ ಕೆಲಸದಿಂದಲೂ ತೆಗೆದುಹಾಕಬಹುದು. ಅಂತಹ ಅಧ್ಯಾಪಕರಿಗೆ ಆಡಳಿತದ ದೆಸೆಯಿಂದ ಎಷ್ಟೇ ಆಳವಾದ ನೋವುಂಟಾಗಿರಲಿ, ಪ್ರಮುಖ ಸಾಂವಿಧಾನಿಕ ವಿಷಯಗಳನ್ನು ಪ್ರಶ್ನಿಸದ ವ್ಯಾಜ್ಯಗಳಿಗೆ ದೇಶದ ಯಾವುದೇ ನ್ಯಾಯಾಲಯವು ಗಮನಹರಿಸುವುದು ಬಹಳ ಅಪರೂಪ. ವಿಶ್ವವಿದ್ಯಾಲಯಗಳ ಆಂತರಿಕ ವಿಷಯಗಳಲ್ಲಿ ಮೂಗು ತೂರಿಸುವುದಕ್ಕೆ ಅವು ಬೇಸರಿಸುತ್ತವೆ.

ಭಾರತದಲ್ಲಿ ಉನ್ನತ ಶಿಕ್ಷಣಕ್ಕೆ ಮೀಸಲಾಗಿರುವ ವಿಶ್ವವಿದ್ಯಾಲಯಗಳು ಸ್ವಯಮಾಡಳಿತ ಸಂಸ್ಥೆಗಳಾಗಲು ಮತ್ತು ಸಮಾಜದ ಅವಶ್ಯಕತೆಗಳಿಗೆ ಸ್ಪಂದಿಸುವಂತೆ ಮಾಡಲು ದಾರಿಯನ್ನು ಹುಡುಕದೆ ತಮ್ಮ ಬೆಳವಣಿಗೆಗೆ ತಾವೇ ಕೊಡಲಿಯೇಟು ಹಾಕಿಕೊಳ್ಳುತ್ತಿವೆ. ಬೋಧನೆಯು ಒಂದು ರೀತಿಯ ದುಡಿಮೆ ಎಂಬುದನ್ನು ಒಪ್ಪಲು ಸ್ವತಃ ಅಧ್ಯಾಪಕರೇ ಇನ್ನೂ ಹಿಂದು ಮುಂದು ನೋಡುವ ಪರಿಸ್ಥಿತಿ ಭಾರತದಲ್ಲಿದೆ. ಅವರಿನ್ನೂ ಬಹಳಮಟ್ಟಿಗೆ ಬೋಧನೆಯೆಂದರೆ ದೈವಪ್ರೇರಣೆಯಿಂದ ನಡೆಯುವುದು, ಪರೋಕ್ಷ ಜ್ಞಾನವನ್ನು ವಿತರಿಸುವುದು ಎಂಬ ಗುಂಗಿನಲ್ಲೇ ಉಳಿದು ಜನಪರವಾದ ಪ್ರಗತಿಶೀಲ ಚಳುವಳಿಗಳಲ್ಲಿ ಭಾಗವಹಿಸದೆ ಹಿಂದುಳಿದಿದ್ದಾರೆ. ಸಮಾಜ ಪರಿವರ್ತನೆಯ ಹರಿಕಾರರೆಂದು ತಮ್ಮನ್ನು ತಾವು ಗುರುತಿಸಿಕೊಳ್ಳದಿರುವುದು ಇಂತಹ ಅಧ್ಯಾಪಕರ ಗುರುತರ ನ್ಯೂನತೆಯಾಗಿದೆ; ಇದರಿಂದಾಗಿ ಜಾತೀಯತೆ ಹಾಗೂ ವಿಚ್ಛಿದ್ರ ಪ್ರವೃತ್ತಿಗಳು ಅನೇಕ ರೀತಿಗಳಲ್ಲಿ ದೇಶದ ವಾತಾವರಣವನ್ನು ಕಲುಷಿತಗೊಳಿಸುತ್ತಿದ್ದರೂ ಅಧ್ಯಾಪಕರ ಬಹುಭಾಗ ನಿರ್ಲಿಪ್ತವಾಗಿ ಉಳಿದಿದೆ. ಅಧ್ಯಾಪಕ ವೃಂದದ ಈ ಹಿಂಜರಿಕೆಯನ್ನು ಗುರುತಿಸಿರುವ ರಾಜಕಾರಣಿಗಳು ಭಾರತದ ಭವಿಷ್ಯ ರೂಪಿಸುವುದರಲ್ಲಿ ಅಧ್ಯಾಪಕರ ಪಾತ್ರವೇನೂ ಇಲ್ಲವೆಂಬಂತೆ ನಡೆದುಕೊಳ್ಳುತ್ತಿದ್ದಾರೆ. ಈಗಂತೂ ಜಾಗತೀಕರಣದ ಉಪದ್ರವವು ಮಿತಿಮೀರಿ ದೇಶದ ಸ್ವಾಯತ್ತತೆಗೇ ಭಂಗ ಬರುತ್ತಿದೆ; ಆ ಜಾಗತೀಕರಣವು ಜನಸಂಖ್ಯೆಯ ಒಂದು ಚಿಕ್ಕ ಭಾಗಕ್ಕೆ ಮಾತ್ರ ಅನುಕೂಲ ತರುತ್ತಿರಬಹುದು, ಅಷ್ಟೆ. ಜಾಗತೀಕರಣದ ಪರಿಣಾಮಗಳನ್ನು ಸ್ಫುಟವಾಗಿ ಗುರುತಿಸದ ಅಧ್ಯಾಪಕ ವೃಂದವು ದೇಶದ ಸ್ವಂತಿಕೆಯು ನುಚ್ಚುನೂರಾಗುತ್ತಿರುವುದನ್ನು ಸುಮ್ಮನೆ ನೋಡುತ್ತಾ ಕುಳಿತಿರುವುದು ಶೋಚನೀಯ. ಕೆಲವೊಮ್ಮೆ ಈ ಪ್ರಕ್ರಿಯೆಗೆ ಕುಮ್ಮಕ್ಕು ನೀಡುವ ವಿಭಾಗವೂ ಅಧ್ಯಾಪಕ ವೃಂದದಲ್ಲಿದೆಯೆಂದರೆ ಆಶ್ಚರ್ಯವೆನಿಸುತ್ತದೆ. ದೇಶವು ಕೊಳ್ಳುಬಾಕ ಸಂಸ್ಕೃತಿಗೆ ಶರಣಾಗುವುದನ್ನು ತಪ್ಪಿಸುವ ಹೊಣೆ ಅಧ್ಯಾಪಕರಿಗೂ ಇದೆ. ಸ್ವತಃ ನಮ್ಮ ದೇಶಕ್ಕೆ ಬೇಕಾದ ತಾಂತ್ರಿಕ ಪರಿಣತರನ್ನು ಬೇರೆ ದೇಶಗಳಿಗೆ ರಫ್ತು ಮಾಡುವ ಪರಿಪಾಠವನ್ನು ತಪ್ಪಿಸುವುದರಲ್ಲೂ ಅವರಿಗೆ ದೊಡ್ಡ ಜವಾಬ್ದಾರಿ ಇದೆ.

**ಪ್ರೊ|| ದಿನೇಶ್ ಹಾಸನ್**
ನಂ. ೮೨೨, ಸ್ಟಬ್ಸ್ ಮಿಲ್ ರೋಡ್, ಲೆಬನಾನ್
ಓಹಿಯೋ ೪೫೦೩೬, ಯು.ಎಸ್.ಎ.

# ಬೆಳ್ಳಿ ಚುಕ್ಕಿಯ ನಿರ್ಗಮನ

**ಯು**ಗಾದಿಯ ಶುಭಾಶಯಗಳು. ಸೂರ್ಯ ವಿಷುವದ್ ಬಿಂದುವನ್ನು ದಾಟುವ ದಿನ ಮಾರ್ಚ್ ೨೧. ಈ ದಿನವೇ ಖಗೋಳ ವೈಜ್ಞಾನಿಕವಾಗಿ ''ಯುಗಾದಿ'' ಅಂದರೆ ಹೊಸ ವರ್ಷದ ಆರಂಭ. ಖಗೋಳದಲ್ಲಿ ಈ ಕಾಲ್ಪನಿಕ ಬಿಂದುವಿನ ಹೆಸರೇ ವಸಂತ ವಿಷುವ. ಇದಾದ ನಾಲ್ಕೇ ದಿನಕ್ಕೆ ಅಮಾವಾಸ್ಯೆ; ಪಾಡ್ಯದ ದಿನ ಚಾಂದ್ರಮಾನ ಯುಗಾದಿಯ ಹಬ್ಬದ ಸಡಗರ. ವಸಂತ ಹೆಸರಿಗೆ ಅನ್ವಯವಾಗಿ ಎಲ್ಲೆಲ್ಲೂ ಚಿಗುರು, ಹಸಿರು. ಕಳೆದ ತಿಂಗಳು ಎಲೆಗಳನ್ನು ಉದುರಿಸಿ ಬೋಳಾಗಿ ನಿಂತ ಮರಗಳು ಈಗ ಹೊಸ ಹಸಿರು ಉಡುಗೆ ತೊಡುತ್ತವೆ.

ಕಳೆದ ಕೆಲವು ತಿಂಗಳುಗಳಿಂದ ಸಂಜೆ ಪಶ್ಚಿಮದಲ್ಲಿ ಕೋರೈಸುತ್ತಿದ್ದ ಶುಕ್ರ ಈ ತಿಂಗಳು ವಿದಾಯ ಹೇಳುತ್ತದೆ. ಮೋಡಗಳು, ಚಂದ್ರನ ಬೆಳಕು ಎಲ್ಲವನ್ನು ಮೆಟ್ಟಿ ನಿಂತ ಈ ಬೆಳ್ಳಿ ಚುಕ್ಕಿಯನ್ನು ತಿಂಗಳಿಡೀ ಗಮನಿಸಿ. ಆರಂಭದಲ್ಲಿ ಮೀನರಾಶಿಯಿಂದ ಮೇಷಕ್ಕೆ ಕಾಣುವುದಾದರೂ ಎರಡು ಮೂರು ದಿನಗಳಲ್ಲಿ ಚಲನೆ ನಿಧಾನವಾಗುವುದು. ೬-೭-೮ ಈ ತಾರೀಖುಗಳಲ್ಲಿ ಚಲನೆಯೇ ಇಲ್ಲವೇನೋ ಎಂಬಂತೆ ತಟಸ್ಥವಾಗುವುದು. ಆನಂತರ ಹಿಮ್ಮುಖ ಚಲನೆಯ ಆರಂಭ. ಹೀಗಾಗಿ ದಿನದಿನಕ್ಕೆ ಬೇಗ ಬೇಗ ಅದು ಪಶ್ಚಿಮದ ಅಂಚಿಗೆ ಸರಿಯುತ್ತದೆ. ಇದುವರೆಗೂ ಅರ್ಧಚಂದ್ರನ ಆಕಾರದಲ್ಲಿ ಕಾಣುತ್ತಿದ್ದು ಈಗ ಕ್ರಮೇಣ ಬಾಲಚಂದ್ರನ ಆಕಾರ ಪಡೆಯತೊಡಗುತ್ತದೆ. ಭೂಮಿಯಿಂದ ಇದರ ದೂರ ಕನಿಷ್ಠವಾಗುತ್ತಿದೆ ಯಾದ್ದರಿಂದ ಪ್ರಕಾಶದ ಹೆಚ್ಚಳವೂ ಕಂಡುಬರುತ್ತದೆ. ದೂರದರ್ಶಕದ ಸೌಲಭ್ಯ ಇದ್ದವರು ಈ ಬದಲಾವಣೆಯ ಹಂತಗಳನ್ನು ಬರೆದು ಇಟ್ಟುಕೊಳ್ಳಬಹುದು. ಅನೇಕ ಉಪಾಧ್ಯಾಯರು ಇಂತಹ ಸಂದರ್ಭಗಳನ್ನು ವಿಶೇಷವಾಗಿ ಬಳಸಿಕೊಂಡು ಮಕ್ಕಳಿಗೆ ಶುಕ್ರಗ್ರಹದ ಕಲೆಗಳ ಬಗ್ಗೆ ತಿಳಿಸಿಕೊಟ್ಟಿದ್ದಾರೆ. ಏಪ್ರಿಲ್ ನಂತರ ಇಂತಹ ಅವಕಾಶ ಬೆಳಗಿನಜಾವದಲ್ಲಿ ಸಿಗುತ್ತದೆ. ವ್ಯಾವಹಾರಿಕ ದೃಷ್ಟಿಯಿಂದ ಸಂಜೆಯ ಈ ಅವಕಾಶ ಹೆಚ್ಚು ಉಪಯೋಗವಾಗುತ್ತದೆ.



*ಫೆಬ್ರವರಿ-ಮಾರ್ಚ್ ತಿಂಗಳುಗಳಲ್ಲಿ ಬುಧ, ಶುಕ್ರ ಮತ್ತು ಭೂಮಿಯ ಚಲನೆ : ಮಾರ್ಚ್ ೨೧ರಂದು ಸೂರ್ಯ ವಿಷುವದ್ ಬಿಂದುವನ್ನು ದಾಟುವಾಗ ಅಥವಾ ಮೇಷ ಪ್ರಥಮ ಬಿಂದುವಿನ ನೇರಕ್ಕೆ ಕಾಣುತ್ತವೆ. ಮಾರ್ಚ್ ೨೯ರಂದು ಶುಕ್ರ ಸೂರ್ಯನ ನೇರಕ್ಕೆ ಬಂದಾಗ (ಅಂತರ್ಯುತಿ) ಕಾಣದಂತಾಗುತ್ತದೆ. ಅದಕ್ಕೆ ಮೊದಲು ಬಾಲಚಂದ್ರನ ಆಕಾರದಲ್ಲಿ ಕಾಣುತ್ತದೆ.*

ಮಾರ್ಚ್ ೨೯ರಂದು ಶುಕ್ರ ಸೂರ್ಯನ ನೇರಕ್ಕೆ ಬರುತ್ತದೆ. ಈ ಸ್ಥಾನಕ್ಕೆ ಅಂತರ್ಯುತಿ (inferior




conjunction) ಎಂಬ ಹೆಸರಿದೆ. ಸೂರ್ಯನ ನೇರಕ್ಕೆ ಬರಲು ಇನ್ನೂ ಒಂದು ಅವಕಾಶವಿದೆ. ಅದಕ್ಕೆ ಬಹಿರ್ಯುತಿ (superior conjunction)ಎಂಬ ಹೆಸರಿದೆ. ಈ ಎರಡೂ ಸಂದರ್ಭಗಳಲ್ಲಿ ಶುಕ್ರ ಕೆಲವು ದಿನಗಳ ಕಾಲ ಕಾಣದಂತಾಗುತ್ತದೆ. ಸಂಜೆಯಿಂದ ಬೆಳಗಿನ ಆಕಾಶಕ್ಕೆ ಜಾರುವ ಸಂದರ್ಭಗಳೇ ಇವು. ಮಾರ್ಚ್ ೨೯ರಂದು ಅಂತರ್ಯುತಿ ಆದರೂ, ೨೩-೨೪ರಿಂದಲೇ ಅದು ಸಂಧ್ಯಾಪ್ರಕಾಶದಲ್ಲಿ ಕರಗಿಹೋಗಿ ಕಾಣದಾಗುತ್ತದೆ. ಆದರೆ ಅದರ ಜಾಡನ್ನು ಹಿಂಬಾಲಿಸಿದ್ದವರು, ಈ ದಿನಗಳಲ್ಲಿ ಸೂರ್ಯ ಮುಳುಗುವ ಮೊದಲೇ ನೀಲಿ ಆಕಾಶದಲ್ಲಿ ಕಾಣಲು ಪ್ರಯತ್ನಿಸಬಹುದು.

ರಾಶಿ ಚಕ್ರದ ಮೇಷ, ವೃಷಭ, ಮಿಥುನ, ಕಟಕ, ಸಿಂಹ ಇವು ಸಂಜೆ ಕಾಣುತ್ತವೆ. ಶುಕ್ರ ಇರುವ ಮೀನರಾಶಿಯನ್ನು ಪಕ್ಕದ ಚೌಕ ಪೆಗಸಸ್(ನಕುಲ) ಸಹಾಯದಿಂದ ಗುರುತಿಸಬಹುದು. ಪಕ್ಕದ ಕ್ಷೀಣ ತ್ರಿಕೋಣ ಮೇಷ. ವೃಷಭವನ್ನು ತಿಳಿಯಲು ಗುರು ಮತ್ತು ಶನಿ ಗ್ರಹಗಳನ್ನು ಗುರುತಿಸಿದರೆ ಸಾಕು. ಮಾರ್ಚ್ ೨೮ರಂದು ಚಂದ್ರ ಅವುಗಳೊಡನೆ ಗುಂಪುಗೂಡಿದಾಗ ಛಾಯಾಗ್ರಾಹಕರಿಗೆ ಒಳ್ಳೆಯ ಅವಕಾಶ ಸಿಗುತ್ತದೆ.

ನೆತ್ತಿಯ ಮೇಲೆ ಕಾಣುವ ಮಿಥುನ ಮತ್ತು ಸಿಂಹ ರಾಶಿಗಳ ಸಹಾಯದಿಂದ ಮಧ್ಯದ ಕ್ಷೀಣ ಕಟಕರಾಶಿಯನ್ನು ಗುರುತಿಸಬಹುದು. ದುರ್ಬೀನಿನ ಸಹಾಯದಿಂದ ಈ ನಕ್ಷತ್ರಪುಂಜದ ಒಂದು ನಕ್ಷತ್ರಗುಚ್ಛ ''ಪ್ರೆಸಿಪಿ''ಯನ್ನು ನೋಡಬಹುದು. ಒಮ್ಮೆ ಗುರುತಿಸಿದ ಮೇಲೆ ಇದು ಬರಿಗಣ್ಣಿಗೂ ಕಾಣುತ್ತದೆ ಎಂದು ಅರಿವಾಗುತ್ತದೆ. ಸಿಂಹರಾಶಿಯ ನಕ್ಷತ್ರಗಳಲ್ಲಿ ಸಿಂಹದ ಚಿತ್ರವನ್ನು ಕಲ್ಪಿಸಿಕೊಂಡರೆ ಅದರ ಬಾಲದ ಭಾಗದಲ್ಲಿರುವ ನಕ್ಷತ್ರ ಉತ್ತರ ಫಲ್ಗುಣಿ (ದೆನೆಬೊಲ ಎಂಬುದು ಪಾಶ್ಚಾತ್ಯ ಹೆಸರು). ಹುಣ್ಣಿಮೆ ೯ರ ರಾತ್ರಿ (ಹೋಳಿಹಬ್ಬದ ಕಿಚ್ಚಿನಲ್ಲಿ ಚಂದ್ರನ ಬೆಳಕು ನಾಚಬಹುದು) ಚಂದ್ರನ ಸಮೀಪ ಈ ನಕ್ಷತ್ರ ಕಾಣುತ್ತದೆ. ಆದ್ದರಿಂದ ಈ ತಿಂಗಳ ಹೆಸರು ಫಾಲ್ಗುಣ ಎಂದಾಗಿದೆ.

'ಹೊಸತು'ವಿನ ಆರಂಭದ ಸಂಚಿಕೆಗಳೊಂದರಲ್ಲಿ ಮಂಗಳಗ್ರಹವನ್ನು ಗುರುತಿಸುವ ಉಪಾಯವನ್ನು ಸೂಚಿಸಿದ್ದೆ. ''ಯಾವುದು ಗ್ರಹ ಯಾವುದು ನಕ್ಷತ್ರ'' ಎಂದು ತಲೆಬರಹ ಕೊಟ್ಟ ನೆನಪು. Ares ಎಂಬುದು ಮಂಗಳ ಗ್ರಹದ ಹೆಸರು. Antaresಎಂಬುದು Aresನ ಪ್ರತಿಸ್ಪರ್ಧಿಯ ಹೆಸರು. ಈ ನಕ್ಷತ್ರಕ್ಕೆ ನಮ್ಮಲ್ಲಿ ಜ್ಯೇಷ್ಠಾ ಎಂಬ ಹೆಸರಿದೆ. ಬಣ್ಣ ಹಾಗೂ ಪ್ರಕಾಶದಲ್ಲಿ ಸ್ಪರ್ಧೆ ನಡೆಯುತ್ತಲೇ ಇರುತ್ತದೆ. ಇವೆರಡನ್ನೂ ಪಕ್ಕಪಕ್ಕದಲ್ಲೇ ಕಾಣುವ ಅವಕಾಶ ಬೆಳಗಿನ ಝಾವ ಪುನಃ ಒದಗಿಬಂದಿದೆ. ಚೇಳಿನ ಆಕಾರದ ವೃಶ್ಚಿಕ ರಾಶಿಯನ್ನು ಗುರುತಿಸುವುದು ಸುಲಭ. ಅದರಲ್ಲಿ ಎರಡು ಕೆಂಪು ಚುಕ್ಕಿಗಳಿವೆ. ಮಿನುಗದೇ ಇರುವ ಹೆಚ್ಚು ಪ್ರಕಾಶಮಾನವಾದ ಚುಕ್ಕೆಯೇ ಮಂಗಳ. ಇನ್ನೊಂದು ಜ್ಯೇಷ್ಠಾ. ತಿಂಗಳ ಕೊನೆಯ ಹೊತ್ತಿಗೆ ಮಂಗಳ ಒಫಿಯೂಕಸ್ ಪುಂಜವನ್ನು ಪ್ರವೇಶಿಸುತ್ತದೆ.

[ವಿದ್ಯಾರ್ಥಿಗಳಿಗೆ ಒಂದು ಚಿಕ್ಕ ಲೆಕ್ಕ : ಪುನಃ ಮಂಗಳ ಹೀಗೆ ಜ್ಯೇಷ್ಠಾದ ಸಮೀಪ ಯಾವಾಗ ಹಾದುಹೋಗುತ್ತದೆ ಎಂದು ಲೆಕ್ಕ ಹಾಕಬಲ್ಲಿರಾ ? ಮಂಗಳದ ''ವರ್ಷದ'' ಅವಧಿ ೬೮೭ ದಿನಗಳು ]

ಬುಧಗ್ರಹ ತಿಂಗಳ ಆರಂಭದಲ್ಲಿ ಬೆಳಗಿನ ಝಾವ ಕಾಣುತ್ತದೆ. ೨೨ರಂದು ಬಾಲಚಂದ್ರನಿಂದ ೧ ಡಿಗ್ರಿ ದಕ್ಷಿಣದಲ್ಲಿ ಕಾಣಬಹುದು.

ಸಿರಿಸ್ ಎಂಬ ಕ್ಷುದ್ರಗ್ರಹ ದುರ್ಬೀನಿಗೆ ಕಾಣುವಷ್ಟು ಪ್ರಕಾಶಮಾನವಾಗಿದೆ. ೧೮ರಂದು ಇದನ್ನು ಗುರುತಿಸಲು ಚಂದ್ರನ ಸಹಾಯ ಪಡೆಯಬಹುದು. ಧನುರಾಶಿಯಲ್ಲಿ ಚಂದ್ರನಿಂದ ಒಂದು ಡಿಗ್ರಿ ಪೂರ್ವಕ್ಕೆ ಕಾಣುತ್ತದೆ.

ಮಾರ್ಚ್ ಮೊದಲವಾರದಲ್ಲಿ ಬೆಳಗಿನ ಝಾವ ಗಂಟೆಗೆ ಐದು - ಹತ್ತು ಉಲ್ಕೆಗಳು ಕಾಣಬಹುದು. ಕನ್ಯಾರಾಶಿಯಿಂದ ಹೊರಡುವಂತೆ ಕಾಣುವ ಎರಡು - ಮೂರು ದುರ್ಬಲ ಉಲ್ಕಾವೃಷ್ಟಿಗಳನ್ನು ಗುರುತಿಸಲಾಗಿದೆ.

ಬಿ. ಎಸ್. ಶೈಲಜಾ
ಜವಹರಲಾಲ್ ನೆಹರೂ ತಾರಾಲಯ
ಶ್ರೀ ಟಿ. ಚೌಡಯ್ಯ ರಸ್ತೆ, ಹೈಗ್ರೌಂಡ್ಸ್
ಬೆಂಗಳೂರು - ೫೬೦ ೦೦೧

# ಮನಸ್ಸಿದ್ದರೆ ಮಾರ್ಗ-ಸಾಲು ಮರಗಳು

*ಗಿಡ ಮರ ನೆಡಿ, ಹಸಿರು ಮಾನವನ ಉಸಿರು ಎಂಬ ಘೋಷಣೆ ಫಲಕ ಬರೆದರೆ ಕೆಲಸವಾಗದು. ಸಾಲು ಮರದ ಸಸಿಗಳನ್ನು ವರ್ಷಕ್ಕೊಮ್ಮೆ ನೆಟ್ಟು ಕವಚ ತೊಡಿಸಿ ಹೋದರಷ್ಟೇ ಸಾಲದು. ಆಯಾ ಊರಿನವರ ಕಾಳಜಿ, ಪರಿಶ್ರಮವಿದ್ದರೆ ಈ ಕಾರ್ಯಕ್ರಮ ಹೆಚ್ಚು ಅರ್ಥಪೂರ್ಣ. ಅಂಥ ಪ್ರಗತಿಶೀಲ ಕಾರ್ಯಕ್ರಮ ಇಂದು ಬೆಳ್ತಂಗಡಿ ತಾಲ್ಲೂಕಿನ ೮೬ ಗ್ರಾಮಗಳಲ್ಲಿ ಸಮರೋಪಾದಿಯಲ್ಲಿ ಸಾಗುತ್ತಿದೆ. ಇಂಥ ಮಾದರಿ ಚಳವಳಿಯನ್ನು ರಾಜ್ಯದಾದ್ಯಂತ ಸ್ವಯಂಸೇವಾ ಸಂಸ್ಥೆಗಳು ಜಾರಿಗೊಳಿಸಿಯಾವೆ?*



*ರಸ್ತೆಯಂಚಿನಲ್ಲಿ ಸಾಲು ಮರಗಳು*

ಎರಡು ಸಾವಿರ ವರ್ಷದ ಹಿಂದೆ ಅಶೋಕನು ಕಳಿಂಗ ಯುದ್ಧವೆಸಗಿದ ಪಾಪ ಪ್ರಾಯಶ್ಚಿತ್ತಕ್ಕೆ ಧರ್ಮಗುರುಗಳ ಅನುಜ್ಞೆಯಂತೆ ಸಾಲು ಮರ ನೆಡಿಸಿದನೆಂಬ ಮಾತು ಇತಿಹಾಸದ ಪುಸ್ತಕಗಳಲ್ಲಿ ಪ್ರಸಿದ್ಧವಾಗಿದೆ. ನೂರು ವರ್ಷದ ಹಿಂದೆ ಮೈಸೂರರಸರು ಹಿಪ್ಪೆ, ಹುಣಸೆ, ಮಾವು ಮುಂತಾದ ಉಪಕಾರಿ ಮರಗಳನ್ನು ಹುಣಸೂರು, ನಂಜನಗೂಡು ರಸ್ತೆಗಳಲ್ಲಿ ನೆಡಿಸಿದ್ದನ್ನು ನಾವಿಂದು ಕಾಣುತ್ತೇವೆ. ಮರಗಳನ್ನು ಮಕ್ಕಳಂತೆ ಪ್ರೀತಿಸುವ ಸಾಲುಮರದ ತಿಮ್ಮಕ್ಕನ ದೃಷ್ಟಾಂತ ಇಂದು ಜನಜನಿತ. ಮುಂದಿನ ಪೀಳಿಗೆಗಾಗಿ ನಾವಿಂದು ಏನು ಮಾಡಬಹುದು ಎಂಬ ಪ್ರಶ್ನೆಗೆ ಮಾದರಿ ಉತ್ತರ ಎಂಬಂತೆ ನಮ್ಮ ನಾಡಿನ ಮೂಲೆಯೊಂದರಲ್ಲಿ ಮೌನ ಕ್ರಾಂತಿ ನಡೆಯುತ್ತಿದೆ.

ಶ್ರೀಕ್ಷೇತ್ರ ಧರ್ಮಸ್ಥಳ ಗ್ರಾಮೀಣ ಅಭಿವೃದ್ಧಿ ಸಂಸ್ಥೆಯು ಬೆಳ್ತಂಗಡಿ ತಾಲ್ಲೂಕಿನ ೮೬ ಗ್ರಾಮಗಳಲ್ಲಿ ತನ್ನ ಕಾರ್ಯ ವ್ಯಾಪ್ತಿ ಹಬ್ಬಿಸಿಕೊಂಡಿದೆ. ಗ್ರಾಮಾಂತರ ಪ್ರದೇಶಗಳ ಪ್ರಧಾನ ರಸ್ತೆಯ ಇಕ್ಕೆಲಗಳಲ್ಲಿ ಎರಡು ಸಾಲುಗಳಲ್ಲಿ ಉಪಕಾರಿ ಮರಗಳ ನೆಡುತೋಪು ಬೆಳೆಸುವ ಮಾದರಿ ಪ್ರಶಂಸಾರ್ಹ. ಆಯಾ ಗ್ರಾಮದ ಜನರನ್ನೇ ಸದಸ್ಯರನ್ನಾಗಿ ಹೊಂದಿರುವ ಸಂಸ್ಥೆಯು ಹಲವು ರೀತಿಯಲ್ಲಿ ಮಾದರಿ. ಸದಸ್ಯರು ಸಣ್ಣ ಉಳಿತಾಯದ ಹಣ ಹಂಚಿಕೊಂಡು ಪರಸ್ಪರ ಬೆಳೆಯುವ ಯೋಜನೆ ಅನನ್ಯವಾಗಿದೆ. ನಗರಕ್ಕೆ ಯುವಕರ ದಂಡು ವಲಸೆ ಹೋಗುವ ಇಂದಿನ ದಿನಗಳಲ್ಲಿ ಕೃಷಿ ಕೆಲಸಕ್ಕೆ ಶ್ರಮಿಕ ಕಾರ್ಮಿಕರ ತೀವ್ರ ಕೊರತೆ ಇದೆ. ಸಂಸ್ಥೆಯು ಅದನ್ನು ಮನಗಂಡು ಗ್ರಾಮೀಣ ಸದಸ್ಯರು ಶ್ರಮ ವಿನಿಮಯಗೊಳಿಸುವ ವಿನೂತನ ವಿಧಾನ ಆರಂಭಿಸಿದೆ. ಇದು ಇಂದು ಅತ್ಯಂತ ಜನಪ್ರಿಯ ಹಾಗೂ ಮಾದರಿ ವಿಧಾನ ಎನಿಸಿದೆ.

*ಮರಗಳ ರಕ್ಷಣೆಗೆ ತಂತಿ ಬೇಲಿ*

ಹಸಿರು ಪಟ್ಟಿ, ನೆಡುತೋಪು, ಸಾಮಾಜಿಕ ಅರಣ್ಯ ಬೆಳೆಸುವಲ್ಲಿ ಸಂಸ್ಥೆಯು ಸ್ಥಳೀಯ ಸದಸ್ಯರ ಮುಖಂಡ 'ಪ್ರಗತಿ ಬಂಧು' ವನ್ನು ಗುರುತಿಸಿ ಸ್ಥಳೀಯರ ಸಹಕಾರ ಕೋರುತ್ತದೆ. ಗಿಡ ನೆಡಲು ಕುಣಿ ತೋಡಿಸಿ ನೆಡಿಸುವ ಜವಾಬ್ದಾರಿಯನ್ನು ಪ್ರಗತಿ ಬಂಧು ನಿರ್ವಹಿಸುತ್ತಾನೆ. ಆಯಾ ಮಂಡಲ ಪಂಚಾಯಿತಿಯಿಂದ ಬೇಲಿ ಮತ್ತು ಕುಣಿ ತೋಡುವ ಕೆಲಸದ ಕೂಲಿ ಸಂದಾಯವಾಗುತ್ತದೆ. ಅರಣ್ಯ ಇಲಾಖೆಯಿಂದ ಉಪಕಾರಿ ಮರಗಳ ಉತ್ತಮ ತಳಿಯ ಸಸಿ ವಿತರಣೆಯಾಗುತ್ತದೆ.

ಸಂಸ್ಥೆಯ ಪ್ರತಿನಿಧಿಗಳು ನೆಡುತೋಪು, ಹಸಿರು ಪಟ್ಟಿಯ ವಿಸ್ತರಣೆ, ಮೇಲುಸ್ತುವಾರಿಯ ಸಮಸ್ತ ಜವಾಬ್ದಾರಿ ನಿರ್ವಹಿಸುತ್ತಾರೆ. ಗ್ರಾಮ ಗ್ರಾಮಗಳಲ್ಲಿ ಪರಿಸರದ ಮೌನ ಕ್ರಾಂತಿ ಪಸರಿಸುತ್ತಿದೆ.

ಮುರುಗಲ, ಹುಣಿಸೆ, ಹಿಪ್ಪೆ, ಹೆಬ್ಬಲಸು, ಹಲಸು, ಮಾವು, ಕದಂಬ ಮುಂತಾದ ಬಹೂಪಯೋಗಿ ವೃಕ್ಷ ಸಾಲುಗಳು ಬೆಳ್ತಂಗಡಿ ತಾಲ್ಲೂಕಿನ ಪುಟ್ಟ ಪುಟ್ಟ ಗ್ರಾಮಗಳ ರಸ್ತೆಯ ಇಕ್ಕೆಲಗಳಲ್ಲಿ ಕಂಗೊಳಿಸುತ್ತಿವೆ. ಅಪರೂಪಕ್ಕೆ ಮಾಂಜಿಯಂ ವೃಕ್ಷಾರೋಪಣ ಸಹ ನಡೆದಿದೆ. ಆಲಂಕಾರಿಕ ವಿದೇಶೀ ತಳಿಗಳಿಗಿಲ್ಲ ಅವಕಾಶ. ಇನ್ನು ಕೇವಲ ಎರಡು ದಶಕಗಳಲ್ಲಿ ಈ ಮರಗಳು ಹೆಮ್ಮರಗಳಾಗುತ್ತವೆ. ಹೂ, ಹಣ್ಣು, ಕಾಯಿ, ನೆರಳು, ಪಕ್ಷಿ, ಪಶುಗಳಿಗೆ ಆಸರೆಯಾಗುತ್ತವೆ. ನೀರು, ನೆರಳಿಗೆ ನೆರವಾಗುತ್ತವೆ. ಮಾರ್ಗ ಬದಿಯ ಈ ಮರಸಾಲು ಕಂಡಾಗ ಗಾದೆ ನೆನಪಾಗುತ್ತದೆ: ಮನಸ್ಸಿದ್ದರೆ ಮಾರ್ಗ ಖಂಡಿತ.

**ಡಾ|| ಸತ್ಯನಾರಾಯಣ ಭಟ್ ಪಿ.**
೫ನೇ ರಸ್ತೆ ಕೊನೆ, ವೆಂಕಟಪ್ಪ ಬಡಾವಣೆ
ಸಂಜಯ ನಗರ, ಬೆಂಗಳೂರು - ೫೬೦ ೦೯೪.

# ನಾಗಾರಾಜ್ಯದಲ್ಲಿ

**ಎಂ. ವೆಂಕಟಸ್ವಾಮಿ**

**ಎಚ್ ಎಮ್ ಟಿ ಬಹುಮಾನಿತ ಲೇಖನ**




ಭಾರತೀಯ ಭೂ ಸರ್ವೇಕ್ಷಣ ವಿಭಾಗದ ಲಖನೌ ಕಛೇರಿಯಲ್ಲಿ ಐದು ವರ್ಷಗಳ ಕಾಲ ಕಾರ್ಯ ನಿರ್ವಹಿಸಿದ ನನಗೆ ನಾಗಾಲ್ಯಾಂಡಿಗೆ ವರ್ಗವಾಗಿತ್ತು. ಭೂ ವಿಜ್ಞಾನಿಯಾದ ನಾನು, ನನ್ನ ಪತ್ನಿ ಸುಶೀಲ ಮತ್ತು ನಾಲ್ಕೂವರೆ ವರ್ಷದ ಮಗ ಕ್ರಾಂತಿಯ ಜೊತೆಗೆ ಲಖನೌದಿಂದ ನಾಗಾಲ್ಯಾಂಡಿನ ಕಡೆಗೆ ಸಾಮಾನುಗಳ ಸಮೇತ ರೈಲಿನಲ್ಲಿ ಹೊರಟೆ. ಲಖನೌದಲ್ಲಿ ಸಹೋದ್ಯೋಗಿಗಳಿಂದ ಬೀಳ್ಕೊಂಡಿದ್ದೆವು. ಗೋರಖ್‌ಪುರ, ಪಟ್ನ, ಕಟಿಯಾರ್ ಮತ್ತು ಸಿಲಿಗುರಿ ಮುಖಾಂತರ ಗೌಹಾಟಿ ತಲುಪಬೇಕಿದ್ದ ರೈಲು ಪಶ್ಚಿಮ ಬಂಗಾಳದ ಸಿಲಿಗುರಿ ದಾಟಿ ಬೆಳಗಿನ ಜಾವ ಅಸ್ಸಾಂ ತಪ್ಪಲುಗಳ ಮಧ್ಯ ಆಹ್ಲಾದಕರವಾಗಿ ಚಲಿಸುತ್ತಿದೆ. ಆಗಸ್ಟ್ ತಿಂಗಳಲ್ಲೂ ಉಲ್ಲಾಸ ಬರಿಸುವ ತಂಗಾಳಿ ಬೀಸುತ್ತಿದೆ. ಎಲ್ಲಿ ನೋಡಿದರೂ ಹಸಿರು ತಪ್ಪಲುಗಳು, ಗದ್ದೆ ತೋಟಗಳು, ಅಡಿಕೆ, ತೆಂಗು, ಬಿದಿರು ಮೆಳೆಗಳು, ಬಿಳಿಮೋಡಗಳ ಕೆಳಗೆ ಹಾರಾಡುತ್ತಿರುವ ಪಕ್ಷಿಗಳು.

ಎರಡನೆ ದಿನ ಮಧ್ಯಾಹ್ನ ಗೌಹಾಟಿ ನಿಲ್ದಾಣದಲ್ಲಿ ಇಳಿದು ರೈಲ್ವೆ ಪ್ಲಾಟ್‌ಫಾರ್ಮ್‌ನಲ್ಲಿ ತಟ್ಟೆ ಊಟ ಮಾಡಿ, ಅಲ್ಲಿಂದ ೨೫೦ ಕಿಲೋಮೀಟರುಗಳ ದೂರವಿರುವ ದಿಮಾಪುರಕ್ಕೆ ಹೋಗಲು ಸಾಮಾನುಗಳ ಸಮೇತ ಮತ್ತೆ ತೀನ್‌ಸುಖಿಯ ರೈಲಿನಲ್ಲಿ ಕುಳಿತುಕೊಂಡೆವು. ಗೌಹಾಟಿಯಿಂದ ದಿಮಾಪುರಕ್ಕೆ ಐದಾರು ಗಂಟೆಗಳ ದಾರಿಯಿದ್ದು ಹೆಚ್ಚೆಂದರೆ ರಾತ್ರಿ ಒಂಭತ್ತು ಗಂಟೆಗಳಲ್ಲಿ ದಿಮಾಪುರ ತಲುಪಬೇಕಿತ್ತು. ಆದರೆ ರಾತ್ರಿ ಒಂಭತ್ತು ಗಂಟೆಯಾದರೂ 'ಲುಮಾಡಿಂಗ್' ನಿಲ್ದಾಣವೇ ಬರಲಿಲ್ಲ. ಸುಶೀಲ ಮತ್ತು ಕ್ರಾಂತಿ ಇನ್ನೆಷ್ಟು ದೂರ....? ಇನ್ನೆಷ್ಟು ದೂರ......? ಎಂದು ಕೇಳುತ್ತಲೇ ಇದ್ದಾರೆ. ಪಕ್ಕದಲ್ಲಿ ಕುಳಿತಿರುವವರನ್ನು ಕೇಳಿದರೆ ಇನ್ನೂ ಬಹಳ ದೂರವಿದೆ ಎನ್ನುತ್ತಿದ್ದಾರೆ.

ತಂಪಾದ ಗಾಳಿಯ ಜೊತೆಗೆ ಜೀರುಂಡೆಗಳ ಸದ್ದು, ಎಲ್ಲೋ ಕತ್ತಲು ತುಂಬಿರುವ ಕಾಡಿನ ಒಳಕ್ಕೆ ಹೋಗುವಂತಹ ಅನುಭವ.

ರಾತ್ರಿ ಹನ್ನೆರಡು ಗಂಟೆ. ದಿಮಾಪುರದ ಹತ್ತಿರವಿದ್ದ 'ದೀಪು' ನಿಲ್ದಾಣ ಬಂದಿದ್ದೆ ಸುಶೀಲಳನ್ನು ತಯಾರಾಗಿರುವಂತೆ ಎಬ್ಬಿಸಿದೆ. 'ನಾನು ತಯಾರಾಗೇ ಇದ್ದೇನೆ' ಎಂದು ಹಾಗೇ ಬಿದ್ದುಕೊಂಡಳು. ಎಲ್ಲಾ ಸಾಮಾನುಗಳು ಪ್ಯಾಕ್ ಮಾಡಿದ ಹಾಗೇ ಇವೆ. ಸುಶೀಲ, ಕ್ರಾಂತಿಯನ್ನು ಇಳಿಸಿಕೊಂಡರೆ ಸಾಕು, ಮಿಕ್ಕ ವಿಷಯಗಳನ್ನು ನಾನೇ ನಿಭಾಯಿಸಿಬಿಡುತ್ತೇನೆ ಎಂದುಕೊಂಡು ಹಾಗೇ ಕುಳಿತಿದ್ದೇನೆ.

ರಾತ್ರಿ ಹನ್ನೆರಡೂವರೆ ಗಂಟೆಗೆ ದಿಮಾಪುರ ನಿಲ್ದಾಣ ಬಂದಿತು. ಭಾರಿ ಜನಸಂದಣಿ. ಸುಶೀಲಳು ಕ್ರಾಂತಿಯನ್ನು ನಡೆಸಿಕೊಂಡು ಒಂದು ಸೂಟುಕೇಸಿನ ಜೊತೆಗೆ ಕೆಳಕ್ಕೆ ಇಳಿದುಕೊಂಡಳು. ಜನ ಬಾಗಿಲಿಗೆ ಅಡ್ಡಗಟ್ಟಿ ನಿಂತಿದ್ದಾರೆ. ನನ್ನ ಹಿಂದೆ ನಿಂತಿದ್ದ ಒಬ್ಬ ವ್ಯಕ್ತಿ 'ಇಲ್ಲೇನು ನಿಂತಿದ್ದೀರ.....? ಇದು ಮೊದಲನೆ ತರಗತಿ ಬೋಗಿ, ಮುಂದಕ್ಕೋಗಿ' ಎಂದು ಗದರಿದ. ಸುಮಾರು ಜನ ಅಲ್ಲಿಂದ ಸ್ಥಳ ಖಾಲಿ ಮಾಡಿದರು. ಸಾಮಾನುಗಳನ್ನೆಲ್ಲಾ ಕೆಲವೇ ಕ್ಷಣಗಳಲ್ಲಿ ಇಳಿಸಿಕೊಂಡಿದ್ದಾಯಿತು. ಅಂತೂ ದಿಮಾಪುರ ತಲುಪಿದ್ದೇನೋ ಆಯಿತು. ಆದರೆ ಆ ರಾತ್ರಿ ಸಾಮಾನುಗಳನ್ನೆಲ್ಲ ಹಾಕಿಕೊಂಡು ಎಲ್ಲಿಗೆ ಹೋಗುವುದು......? ಊಟ ಬೇರೆ ಮಾಡಿರಲಿಲ್ಲ. ಸಾಮಾನುಗಳನ್ನೆಲ್ಲ ಒಂದು ಕಡೆ ಇಟ್ಟು ಸುಶೀಲಳನ್ನು ಅಲ್ಲೇ ಕೂರಿಸಿ ನಿಲ್ದಾಣವನ್ನು ಒಂದು ಸುತ್ತು ಹಾಕಿದೆ, ಕಛೇರಿಯಿಂದ ಯಾರಾದರೂ ಬಂದಿರಬಹುದೆಂದು. ಯಾರೂ ಕಾಣಿಸಲಿಲ್ಲ. ನಮ್ಮಲ್ಲಿದ್ದ ಕೆಲವು ಸಾಮಾನುಗಳನ್ನು ಕ್ಲೋಕ್ ರೂಮಿನಲ್ಲಿಟ್ಟು ಬೇರೆ ದಾರಿ ಕಾಣದೆ ಮೂವರೂ ನಿರೀಕ್ಷಕರ ಕೊಠಡಿಗೆ ಬಂದೆವು.

ಆ ಕೊಠಡಿಗೆ ಕಾವಲುಗಾರನೊಬ್ಬನಿದ್ದು, ಸ್ವಲ್ಪ ಸಮಾಧಾನದಿಂದ ಒಳಕ್ಕೆ ಹೋದೆವು. ಸುಮಾರು ಹದಿನೈದು ಜನ ವಿಚಿತ್ರ ರೀತಿಯಲ್ಲಿ ಕುಳಿತು, ಮಲಗಿ, ಕೈಕಾಲುಗಳನ್ನು ಚೆಲ್ಲಿದ್ದಾರೆ. ಅದರಲ್ಲಿ ಹೆಂಗಸರು ಕೆಲವರಿದ್ದರು. ಎಲ್ಲಾ ದರ್ಜೆಯ ಪ್ರಯಾಣಿಕರಿಗೂ ಒಂದೇ ಕೊಠಡಿ. ಎದುರಿಗೆ ಅಸ್ಸಾಂ ರೈಫಲ್ಸ್‌ನ ಜವಾನರಿಬ್ಬರು ಕುಳಿತಿದ್ದಾರೆ.

ಖಾಲಿ ಇದ್ದ ಒಂದು ಮೂಲೆಯಲ್ಲಿ ಸ್ವಲ್ಪ ಜಾಗ ಮಾಡಿಕೊಂಡು ಹೋಲ್ಡಾಲ್ ಬಿಚ್ಚಿ ಇಬ್ಬರನ್ನೂ ಮಲಗಿಸಿದೆ. ಸುಶೀಲ ಮಲಗುವುದಕ್ಕೆ ಮುಂಚೆ ಮಾಂಗಲ್ಯ ಸರವನ್ನು ಬಿಚ್ಚಿಕೊಟ್ಟು ಭದ್ರ ಎಂದು ಎಚ್ಚರಿಕೆ ನೀಡಿ ಮಲಗಿಕೊಂಡಳು. ಲಖನೌದಿಂದ ದಿಮಾಪುರ ತಲುಪುವವರೆಗೆ ಸರವನ್ನು ಸೀರೆ ಸೆರಗಿನ ಒಳಗೆ ಅಡಿಗಿಸಿಟ್ಟುಕೊಂಡೇ ಬಂದಿದ್ದಳು! ನಾನು ಸ್ನಾನಗೃಹದ ಒಳಕ್ಕೆ ರಹಸ್ಯವಾಗಿ ಹೋಗಿ ಸರವನ್ನು ಪ್ಯಾಂಟಿನ ಬ್ಯಾಂಕ್ ಪಾಕೆಟ್ ಒಳಕ್ಕೆ ಹಾಕಿಕೊಂಡು ಹೊರಕ್ಕೆ ಬಂದು ಹೋಲ್ಡಾಲಿನ ಒಂದು ಮೂಲೆಯಲ್ಲಿ ಕುಳಿತು ಜಾಗರಣೆ ಪ್ರಾರಂಭಿಸಿದೆ.

ಒಂದು ರೀತಿಯಲ್ಲಿ ಉಸಿರುಕಟ್ಟಿದಂತಹ ವಾತಾವರಣ, ಯಾವಾಗ ಬೆಳಗಾಗುವುದೊ ಎಂದು ಕಾಯುತ್ತಾ ಕುಳಿತಿದ್ದೇನೆ. ವಿದ್ಯುತ್ ದೀಪ ಉರಿಯುತ್ತಲೇ ಇದೆ. ಪಕ್ಕದಲ್ಲೇ ಮಲಗಿದ್ದ ದಂಪತಿಗಳು ಬಹುಶಃ ಬಿಹಾರದವರಿರಬಹುದು. ಅವರ ಮಧ್ಯದಲ್ಲಿ ಒಬ್ಬ ಹುಡುಗನು ಕೂಡ ಮಲಗಿದ್ದಾನೆ. ಯವುದೋ ಕೂಲಿ ಕೆಲಸವನ್ನು ಅರಸಿ ಬಂದಿರಬೇಕು. ಇಲ್ಲ, ಈಗಾಗಲೆ ಎಲ್ಲೊ ಕೂಲಿ ಕೆಲಸ ಮಾಡುತ್ತಿರಬಹುದು.

ಆ ಬಿಹಾರಿ ಸುತ್ತಿಕೊಂಡಿದ್ದ ದೇಶಿ ಪಂಚೆ ಪಕ್ಕಕ್ಕೆ ಹೋಗಿ ಪಟ್ಟಾ ಪಟ್ಟಿಯ ನಿಕ್ಕರ್ ಒಳಗಿಂದ ಮರ್ಮಾಂಗ ಪೂರ್ತಿ ಹೊರಕ್ಕೆ ಬಂದಿದೆ. ಸದ್ಯಕ್ಕೆ ಹೆಂಗಸರ್ಯಾರೂ ಇನ್ನೂ ಎದ್ದಿಲ್ಲ. ನನಗೆ ಏನು ಮಾಡಬೇಕೊ ಅರ್ಥವಾಗದೆ ಪಕ್ಕಕ್ಕೆ ತಿರುಗಿಕೊಂಡೆ. ಒಂದಿಬ್ಬರು ಗಂಡಸರು ಮತ್ತು ಅಸ್ಸಾಂ ರೈಫಲ್ಸ್‌ನ ಒಬ್ಬ ಜವಾನ ನೋಡಿಯೂ ನೋಡದಂತೆ ಕುಳಿತಿದ್ದಾರೆ. ಸುಮಾರು ಹೊತ್ತು ಬಿಹಾರಿ ಹಾಗೆ ಮಲಗಿದ್ದ. ನನ್ನಿಂದ ನೋಡಲಾಗದೆ, ಯಾರೂ ನೋಡದೆ ಇದ್ದಾಗ ಕಾಲಿನಲ್ಲಿ ಒಮ್ಮೆ ಮೃದುವಾಗಿ ಒದ್ದೆ. ಏನೂ ಪ್ರಯೋಜನವಾಗಲಿಲ್ಲ. ಗಂಡ ಹೆಂಡತಿ ಇಬ್ಬರೂ ಆಳವಾದ ನಿದ್ದೆಯಲ್ಲಿದ್ದಾರೆ. ಒಂದಷ್ಟು ಜನ ಗಂಡಸರು ಆಗಲೆ ಸ್ನಾನಗೃಹದ ಒಳಕ್ಕೆ ಹೋಗಿ ತಮ್ಮ ದಿನನಿತ್ಯದ ಕಾರ್ಯಗಳನ್ನು ಮುಗಿಸಿ ಬರುತ್ತಿದ್ದಾರೆ. ಇನ್ನೇನು ಬೆಳಕು



*ದಿಮಾಪುರದ ಒಂದು ನಾಗಾ ಮಕ್ಕಳ ಶಾಲೆ*



ಸ್ವಾತಂತ್ರ್ಯ ದಿನಾಚರಣೆ

ಕೂಡ ಮೂಡುವುದರಲ್ಲಿದೆ. ಒಳಕ್ಕೆ ಹೋಗುತ್ತಿದ್ದವರಿಗೂ ಹೊರಕ್ಕೆ ಬರುತ್ತಿದ್ದವರಿಗೂ ಎಲ್ಲರಿಗೂ ದರ್ಶನ ನಡೆಯುತ್ತಲೇ ಇದೆ.

ಕೊನೆಯದಾಗಿ ಒಬ್ಬ ದೃಢಕಾಯ ಮುದುಕ ಎದ್ದುಬಂದು ಸುತ್ತಲು ಒಮ್ಮೆ ನೋಡಿ, ಬೂಟು ಕಾಲಿನಲ್ಲಿ ಜೋರಾಗಿ ಒದ್ದು ''ಉಠಾ ಸಾಲಾ ಆರಾಮಿ !! ಹಾಗೇನಾ ನಿದ್ದೆ ಮಾಡೂದು'' ಎಂದು ಗದರಿದರು. ಕಕ್ಕಾಬಿಕ್ಕಿಯಾದ ಆ ಬಿಹಾರಿ ಕಣ್ಣುಜ್ಜಿಕೊಂಡು ಎದ್ದು ಕುಳಿತ. ನನಗಂತೂ ನಗು ತಡೆಯಲಾಗದೆ ಸ್ವಲ್ಪ ಹೊತ್ತು ಹೊರಕ್ಕೆ ಬಂದು ಸುಧಾರಿಸಿಕೊಂಡೆ.

ಬೆಳಕು ಮೂಡುತ್ತಿದ್ದಂತೆ ಸುಶೀಲಳನ್ನು ಎಬ್ಬಿಸಿದೆ. ಎದ್ದ ತಕ್ಷಣವೆ ಮಾಂಗಲ್ಯ ಕೊಡಿ ಎಂದು ಕೈ ನೀಡಿದಳು. ಪ್ಯಾಂಟ್ ಪಾಕೆಟ್ ಒಳಕ್ಕೆ ಬೆರಳುಗಳನ್ನು ಬಿಟ್ಟು ನೋಡುತ್ತೇನೆ. ಖಾಲಿ! ಮೈ ಒಳಕ್ಕೆ ಒಮ್ಮೆಲೆ ಚಳಿ ಹೊಕ್ಕಿದಂತಾಯಿತು. ಕೆಲವು ಕ್ಷಣಗಳು ನನ್ನಲ್ಲಿನ ವಿದ್ಯುತ್ ನಿಂತುಹೋಯಿತು. ಎಲ್ಲಾ ಕಡೆಯೂ ಹುಡುಕಿ ನೋಡಿದೆ ಇಲ್ಲ, ಸುಶೀಲ ಅಳುವುದಕ್ಕೆ ಶುರು ಮಾಡಿಯೇಬಿಟ್ಟಳು. ಏನು ಏನು.....? ಎಂದು ಒಂದಿಬ್ಬರು ಕೇಳಿದಾಗ ವಿಷಯ ತಿಳಿಸಿದೆ. ಇನ್ನೇನು ಮಾಡಬೇಕು, ಕುಳಿತಿದ್ದ ಹೋಲ್ಡಾಲ್ ಮತ್ತು ಅದರಲ್ಲಿದ್ದ ಬಟ್ಟೆಗಳನ್ನು ಹೊರಕ್ಕೆ ಹಾಕಿ ಹುಡುಕಿದೆ, ಸಿಗಲಿಲ್ಲ. ಕ್ರಾಂತಿಯನ್ನು ಎಬ್ಬಿಸಿ ಮಿಕ್ಕ ಬಟ್ಟೆಗಳನ್ನೆಲ್ಲ ಹೊರಕ್ಕೆ ಹಾಕಿದೆ. ಸರ ಹೋಲ್ಡಾಲಿನ ತಳದಲ್ಲಿದೆ. ಅದು ಹೇಗೆ ಹೋಯಿತೋ ಅಲ್ಲಿಗೆ ! ಕೊನೆಗೂ ಸಿಕ್ಕಿತು. ಸುಶೀಲ ಅಬ್ಬ ಎಂದು ದೀರ್ಘ ಶ್ವಾಸವನ್ನು ಎಳೆದುಕೊಂಡು ಕೊರಳಿಗೆ ಹಾಕಿಕೊಂಡಳು. ದಿಮಾಪುರದಲ್ಲಿ ಮೊದಲ ದಿನವೇ ನಮಗೆ ಜಂಘಾಬಲ ಉಡುಗಿತ್ತು.

ರೈಲ್ವೆ ನಿಲ್ದಾಣದಿಂದ ಲಖನೌದಲ್ಲಿ ಜೊತೆಗೆ ಕೆಲಸ ಮಾಡುತ್ತಿದ್ದ ಸಹೋದ್ಯೋಗಿ ಚಂದ್ರಮಾಧವ್ ಮನೆ ತಲುಪಿ ಸುಶೀಲ ಮತ್ತು ಕ್ರಾಂತಿಯನ್ನು ಅವರ ಮನೆಯಲ್ಲಿ ಬಿಟ್ಟು ಕಛೇರಿ ತಲುಪಿ ರಿಪೋರ್ಟ್ ಮಾಡಿಕೊಂಡೆ. ಅನಂತರ ಸಾಮಾನುಗಳನ್ನೆಲ್ಲಾ ಜೀಪಿನಲ್ಲಿ ತಂದು ಚಂದ್ರಮಾಧವ್ ಮೊದಲೆ ನಮಗಾಗಿ ಹಿಡಿದಿದ್ದ ಬಾಡಿಗೆ ಮನೆಗೆ ತುಂಬಿದೆ. ಆ ರಾತ್ರಿ ಊಟವನ್ನು ಅವರ ಮನೆಯಲ್ಲೆ ಮುಗಿಸಿ ನಮ್ಮ ಮನೆಗೆ ಬಂದು ಮಲಗಿಕೊಂಡೆವು.

**ಭೂಮಿ ಗುಡುಗಿದಾಗ**

ದೀರ್ಘ ಪ್ರಯಾಣ ಮತ್ತು ಜಾಗರಣೆಗಳಿಂದ ಬೇಸತ್ತಿದ್ದ ನಾವು ಆ ರಾತ್ರಿ ಚಂದ್ರಮಾಧವ್ ಅವರ ಮನೆಯಲ್ಲೇ ಗಡದ್ದಾಗಿ ಊಟಮಾಡಿ ಬಂದು ಹೊಸ ಮನೆಯಲ್ಲಿ ಮಲಗಿಬಿಟ್ಟೆವು. ರಾತ್ರಿ ಬೇಗನೆ ಮಲಗಿದ್ದರಿಂದ ಬೆಳಗ್ಗೆ ಬೇಗನೆ ಎದ್ದು ಸುಶೀಲ ಮನೆ ಗುಡಿಸುತ್ತಿದ್ದಾಳೆ. ನಾನು ಲುಂಗಿ ಕಟ್ಟಿಕೊಂಡು ಹೊರಗೆ ಬಾಗಿಲಲ್ಲಿ ನಿಂತು, ಬರುವ ಹೋಗುವ ವಾಹನಗಳನ್ನು ನೊಡುತ್ತಿದ್ದೇನೆ. ಕ್ರಾಂತಿ ಮಂಚದ ಮೇಲೆ ಮಲಗಿದ್ದಾನೆ.

ಸಮಯ ಸರಿಯಾಗಿ ಆರು ಗಂಟೆ ಏಳು ನಿಮಿಷಗಳಾಗಿದೆ. ಸಣ್ಣದಾಗಿ ಶುರುವಾದ ಶಬ್ದ ಬರುಬರುತ್ತಾ ಜೋರಾಯಿತು. ''ಕ್ರಾಂತಿ, ವಿಮಾನ ನೋಡು ಬಾರೋ'' ಎಂದು ಜೋರಾಗಿ ಕೂಗಿದೆ. ವಿಮಾನ ಹೋಗುವ ಸದ್ದಾದರೆ ಸಾಕು, ಕ್ರಾಂತಿ ನಿದ್ದೆ ಮಾಡುತ್ತಿದ್ದರೂ ಎದ್ದು ಓಡಿ ಬಂದುಬಿಡುತ್ತಿದ್ದ.

ಕೆಲವೇ ಕ್ಷಣಗಳಲ್ಲಿ ಸದ್ದು ವಿಮಾನದ್ದಲ್ಲ ಎಂದು ತಿಳಿದುಹೋಯಿತು. ಹತ್ತಾರು ವಿಮಾನಗಳು ಒಮ್ಮೆಲೇ ಹಾರಿಬಂದಂತಹ ಸದ್ದು. ಕಿವಿಗಳು ಒಡೆದು ಹೋಗುವಂತಹ ಭಯಂಕರ ಶಬ್ದ. ಒಳಕ್ಕೆ ಓಡುತ್ತಾ ಸುಶೀಲಳನ್ನು ''ಹೊರಕ್ಕೆ ಓಡು ಓಡು'' ಎನ್ನುತ್ತಾ ಕ್ರಾಂತಿಯನ್ನು ಎತ್ತಿ ಭುಜದ ಮೇಲೆ ಹಾಕಿಕೊಂಡು ಎರಡೂ ಗೋಡೆಗಳ ಮಧ್ಯದಿಂದ ಇನ್ನೇನು ಹೊರ ಬಾಗಿಲನ್ನು ದಾಟಬೇಕಿತ್ತು.

ಭೂಕಂಪನದಿಂದ ಬಾಗಿಲು ಸುಮಾರು ೩೫ ಡಿಗ್ರಿಗಳವರೆಗೂ ಉಯ್ಯಾಲೆಯಂತೆ ಆಡತೊಡಗಿತು. ಒಂದು ಕೈಯಲ್ಲಿ ಕ್ರಾಂತಿಯನ್ನು ಇನ್ನೊಂದು ಕೈಯಿಂದ ಗೋಡೆಯನ್ನು ಹಿಡಿದುಕೊಂಡು ಓಡಲಾಗದೆ ಹಾಗೆಯೇ ನಿಂತುಬಿಟ್ಟೆ. ಸುಶೀಲ ಹಿಂದಿನಿಂದ ನನ್ನನ್ನು ಹಿಡಿದುಕೊಂಡಿದ್ದಳು. ನೇರವಾಗಿರಬೇಕಾಗಿದ್ದ ಬಾಗಿಲು ಉಯ್ಯಾಲೆಯಂತೆ ಸುಮಾರು ನೂರು ಸೆಕೆಂಡುಗಳ ಕಾಲ ಗೋಡೆಯ ಗಡಿಯಾರದ ಲಂಬಕ ಆಡಿದಂತೆ ಆಡಿಬಿಟ್ಟಿತ್ತು.

ಭಯಂಕರ ಸದ್ದಿನ ಜೊತೆಗೆ ಭೂಮಿಯ ಕಂಪನ ನಿಂತಿದ್ದೆ ಹೊರಕ್ಕೆ ಓಡಿಬಿಟ್ಟೆವು. ಆಗಲೇ ರಸ್ತೆಗಳ ಮೇಲೆಲ್ಲಾ ಹೆಂಗಸರು, ಮಕ್ಕಳು, ಮುದುಕರು ಚೀರಾಡುತ್ತಾ ದಿಕ್ಕು ತೋಚದೆ ಓಡುತ್ತಿದ್ದಾರೆ. ನಮ್ಮ ಮನೆಯ ಮಾಲಿಕ ಏನೂ ಆಗುವುದಿಲ್ಲ, ಇನ್ನೂ ಈ ಕಡೆ ಬಂದು ಬಿಡಿ ಎಂದು ಕಟ್ಟಡದಿಂದ ದೂರಕ್ಕೆ ನಿಲ್ಲುವಂತೆ ಹೇಳಿದ.

ಇದು ಭೂಕಂಪನವೆಂದು ನಿಮಗಾಗಲೇ ತಿಳಿದಿರಬೇಕು. ಮೈ ಗಡಗಡನೆ ನಡುಗುತ್ತಿತ್ತು. ಒಂದರ್ಧ ಗಂಟೆ, ಜನರು ಮನೆಗಳ ಒಳಕ್ಕೆ ಹೋಗುವ ಧೈರ್ಯ ಮಾಡಲಿಲ್ಲ. ಆಮೇಲೆ ಒಬ್ಬೊಬ್ಬರಾಗಿ ಒಳಕ್ಕೆ ಹೋದರು. ಸುಶೀಲ ಒಳಕ್ಕೆ ಹೋಗಲೋ ಬೇಡವೋ ಎಂದು ಅನುಮಾನಪಡುತ್ತಿದ್ದಳು. ಕ್ರಾಂತಿ ''ಡ್ಯಾಡಿ, ನಾವು ನಿದ್ದೆ ಮಾಡುತ್ತಿದ್ದಾಗ ಭೂಕಂಪನ ಬಂದು ಮನೆಯೆಲ್ಲಾ ಬಿದ್ದುಹೋದರೆ ಏನು ಮಾಡುವುದು !'' ಎಂದು ಚಿಂತಿಸತೊಡಗಿದ.

ಸಣ್ಣಪುಟ್ಟ ಮನೆಗಳು ಸುಮಾರು ಬಿದ್ದುಹೋಗಿದ್ದವು. ನಾಗಾಲ್ಯಾಂಡಿನಲ್ಲಿ ಮುಖ್ಯವಾಗಿ ಎರಡು ರೀತಿಯ ಮನೆಗಳಿವೆ. ಒಂದು: ಬಿದಿರು ಮರಗಳನ್ನು ಉಪಯೋಗಿಸಿ ಕಟ್ಟಿರುವ ಹೆಚ್ಚು ಮನೆಗಳು. ಎರಡು:ಮಾಮೂಲಿ ಸಿಮೆಂಟ್ ಕಟ್ಟಡಗಳು. ಬಿದಿರು ಉಪಯೋಗಿಸಿ ಕಟ್ಟಿರುವ ಮನೆಗಳು ಭೂಮಿ ಎಷ್ಟೇ ಕಂಪನಗೊಂಡರೂ ಕಾಗದಗಳಂತೆ ಹಾಗೇ ನಿಂತಿರುತ್ತವೆ. ಹಾಗಾಗಿ ಹೆಚ್ಚು ಮನೆಗಳು ಬೀಳಲಿಲ್ಲ.

ಆದರೆ ಇತ್ತೀಚಿನ ದಿನಗಳಲ್ಲಿ ಇದೊಂದು ಭಯಂಕರ ಭೂಕಂಪನವಾಗಿತ್ತು. ರಿಕ್ಟರ್ ಮಾಪನದಲ್ಲಿ ೫.೩ ಪಾಯಿಂಟುಗಳಷ್ಟಾಗಿತ್ತು. ಸಾಮಾನ್ಯವಾಗಿ ೫ . ೨ ಪಾಯಿಂಟುಗಳಷ್ಟು ಭೂಕಂಪನವಾದರೆ ಸಾಕು, ಅಪಾರ ಪ್ರಾಣಹಾನಿಯ ಜೊತೆಗೆ ಹೇರಳ ಸಂಪತ್ತು ಹಾಳಾಗಿ ಕಲ್ಲು ಕಟ್ಟಡಗಳೂ ಕುಸಿದುಬಿಡಬೇಕು. ಆದರೆ ಅದೇನು ಆಶ್ಚರ್ಯವೋ ಹಾಗಾಗಿರಲಿಲ್ಲ. ಉತ್ತರ ಪೂರ್ವ ಹಿಮಾಲಯ ಹೆಚ್ಚಾಗಿ ಟೊಳ್ಳು ಮತ್ತು ಸಡಿಲವಾದ ಶಿಲಾಪದರುಗಳನ್ನು ಹೊಂದಿದ್ದು ಭೂಕಂಪನವಾಗುವ ಸಮಯದಲ್ಲಿ ಒಳಗಿಂದ ಬಿಡುಗಡೆ ಆಗುವ ಶಕ್ತಿಯನ್ನು ಈ ಶಿಲಾಪದರುಗಳು ಒಂದು ರೀತಿಯಲ್ಲಿ ಶಾಕ್ ಅಬ್ಸಾರ್‌ಬರ್‌ಗಳಂತೆ ಹೀರಿಕೊಳ್ಳುವುದರಿಂದ ಹೆಚ್ಚು ಪ್ರಾಣಹಾನಿ ಮತ್ತು ಹೇರಳ ಸಂಪತ್ತು ಹಾಳಾಗುವುದನ್ನು ತಡೆಗಟ್ಟುತ್ತದೆ ಎನ್ನುತ್ತಾರೆ ಭೂ ವಿಜ್ಞಾನಿಗಳು. ಈ ಭೂಕಂಪನದ ಅನುಭವದ ಮೇಲೆ ನಾನು ಬರೆದ 'ಭೂಮಿ ಗುಡುಗಿದಾಗ' ಎನ್ನುವ ಲೇಖನ 'ಸುದ್ದಿ ಸಂಗಾತಿ' ಪತ್ರಿಕೆಯಲ್ಲಿ ಪ್ರಕಟವಾಗಿತ್ತು.

೧೯೮೮ನೇ ವರ್ಷದ ಆಗಸ್ಟ್ ತಿಂಗಳು ಐದನೆ ತಾರೀಖು ಸಂಭವಿಸಿದ ಈ ಭೂಕಂಪನ ನಂತರ ಮುಂದೆ ಕೆಲವು ದಿನಗಳಲ್ಲಿ ಇನ್ನೊಂದು ಮಹಾ ಭೂಕಂಪ ಬರಲಿದೆ ಎನ್ನುವ ಎಚ್ಚರಿಕೆ ಎಂಬಂತೆ ಭೂಮಿ ಅಲ್ಲಲ್ಲಿ ಸ್ವಲ್ಪ ಹೊಗೆಯನ್ನು ಬಿಟ್ಟು ಬುಸುಗುಡುವುದನ್ನು ಗಮನಿಸಿದ ಭೂ ವಿಜ್ಞಾನಿಗಳು ಎಚ್ಚರಿಕೆಯನ್ನೇನೋ ನೀಡಿದ್ದರು. ಆದರೆ ಸರಿಯಾಗಿ ಎಲ್ಲಿ ಯಾವಾಗ ಎಂದು ಹೇಳಲಾಗಲಿಲ್ಲ.

ಮುಂದೆ ಕೆಲವೇ ದಿನಗಳಲ್ಲಿ ಅಂದರೆ ೧೯೮೮ನೆ ವರ್ಷದ ಸೆಪ್ಟೆಂಬರ್ ತಿಂಗಳು ೨೧ನೇ ತಾರೀಖು ಮುಂಜಾನೆ ಬಿಹಾರ್ (ದರ್ಭಾಂಗಾ) -ನೇಪಾಳದ ಗಡಿಯಲ್ಲಿ ಮಲಗಿದ್ದವರು ಏನಾಗುತ್ತಿದೆ ಎಂದು ಕಣ್ಣುಜ್ಜಿಕೊಳ್ಳುವುದರೊಳಗೆ ಅವರ ಮನೆ ಮಠಗಳನ್ನೆಲ್ಲ ಹೊತ್ತು ನಿಂತಿದ್ದ ಬೆಟ್ಟಗುಡ್ಡಗಳೇ ಅವರ ಮೇಲೆ ಎರಗಿಬಿಟ್ಟವು. ಈ ಪ್ರದೇಶ ಹಿಮಾಲಯ ಮತ್ತು ಗಂಗಾ ಬಯಲಿನ ನಡುವಿನ ಪ್ರದೇಶವಾಗಿತ್ತು.

ನೂರಾರು ಜನ ಸತ್ತು ಸಾವಿರಾರು ಜನ ಅಂಗವಿಕಲರಾದರು. ಕೋಟ್ಯಾಂತರ

ರೂಪಾಯಿಗಳ ಆಸ್ತಿ ಹಾಳಾಯಿತು. ಇಷ್ಟಕ್ಕೂ ಇದು ರಿಕ್ಟರ್ ಮಾಪನದಲ್ಲಿ ೫.೧ ರಿಂದ ೫.೨ರ ಮಧ್ಯದ ಭೂಕಂಪನವಾಗಿತ್ತು.

**ಹಿಡಿಂಬಾಪುರ**

ದಿಮಾಪುರವು ಮೂಲದಲ್ಲಿ ಭೀಮನ ಪ್ರೇಯಸಿ ಹಿಡಿಂಬಾ ಇದ್ದ ಸ್ಥಳವಾಗಿದ್ದು, ಬರುಬರುತ್ತಾ ಹಿಡಿಂಬಾಪುರ, ಡಿಂಬಾಪುರವಾಗಿ ನಂತರ ದಿಮಾಪುರ ಆಯಿತಂತೆ. ಊರಿನ ದಕ್ಷಿಣ ಪೂರ್ವಕ್ಕೆ ಉತ್ತರ ಈಶಾನ್ಯದ ತಪ್ಪಲುಗಳ ಕೆಳಗೆ ಈಗಲೂ ಕೆಲವು ಶಿಥಿಲಗೊಂಡ ಕುರುಹುಗಳಿದ್ದು, ಅವೆಲ್ಲಾ ಮಹಾಭಾರತದ ಪ್ರತೀಕಗಳೆಂದೇ ಹೇಳುತ್ತಾರೆ. ಪಾಂಡವರು ಸ್ನಾನ ಮಾಡುತ್ತಿದ್ದ ದೊಡ್ಡ ದೊಡ್ಡ ಕೊಳಗಳು, ಚದುರಂಗಮಣೆ, ಕಲ್ಲಿನಲ್ಲಿ ಕೆತ್ತಿರುವ ದೊಡ್ಡ ದೊಡ್ಡ ಚದುರಂಗ ಕಾಯಿಗಳೂ ಸಹ ಇವೆ. ಈ ಚದುರಂಗ ಕಾಯಿಗಳು ಒಂದೊಂದು ಆಳೆತ್ತರವಿದ್ದು, ಹತ್ತಡಿಗಳಿಗಿಂತ ಹೆಚ್ಚು ಸುತ್ತಳತೆಯನ್ನು ಹೊಂದಿವೆ.

ಪಕ್ಕದ ಮಣಿಪುರ ರಾಜ್ಯದ ಸುಭದ್ರಾಳನ್ನು ಮಹಾಭಾರತದ ಅರ್ಜುನ ವರಿಸಿದ್ದನೆಂದು ಹೇಳುತ್ತಾರೆ. ರಾಧಾಕೃಷ್ಣರ ಬ್ಯಾಲೆ ಈಗಲೂ ಮಣಿಪುರದಲ್ಲಿ ಬಹಳ ಪ್ರಖ್ಯಾತ. ಈ ಹಿಡಿಂಬಾಪುರಕ್ಕೆ ಬಂದು ಒಂದು ವಾರವೇ ಆಗಿದ್ದರೂ ಮನೆಯಲ್ಲಿ ಅಡಿಗೆ ಇನ್ನೂ ಶುರು ಮಾಡಿರಲಿಲ್ಲ. ಅಲ್ಲಿನ ಸಹೋದ್ಯೋಗಿಗಳು ಮನೆಗೆ ಬಂದು, ಈ ದಿನ ನಮ್ಮ ಮನೆಗೆ, ನಾಳೆ ನಿಮ್ಮ ಮನೆಗೆ ಎಂದು ತಾವೇ ಫಿಕ್ಸ್ ಮಾಡಿಕೊಂಡು ಹೊರಟುಬಿಡುತ್ತಿದ್ದರು. ಎಲ್ಲರ ಮನೆಗಳಲ್ಲೂ ಭೋಜನದ ಒಂದು ಸುತ್ತು ಮುಗಿಯಿತು.

ಕಿಟ್ಟಿ ಔತಣಗಳು, ಹುಟ್ಟು ಹಬ್ಬಗಳು, ಬೀಳ್ಕೊಡುಗೆ ಸಮಾರಂಭಗಳು, ಹೊಸವರ್ಷದ ಔತಣಗಳು, ವಿಡಿಯೋ ಚಿತ್ರಗಳು, ಎಲೆಯೂಟಗಳು ಹೀಗೆ ಒಂದಲ್ಲಾ ಒಂದು ಚಟುವಟಿಕೆಗಳು ನಡೆಯುತ್ತಲೇ ಇದ್ದವು.

ಒಂದು ರಾತ್ರಿ ಯಥಾಪ್ರಕಾರವಾಗಿ ಮಲಗಿ ನಿದ್ದೆ ಮಾಡುತ್ತಿದ್ದೇವೆ. ಆಗಸ್ಟ್ ತಿಂಗಳಾದರೂ ಸೆಕೆ ಇನ್ನೂ ಪೂರ್ತಿ ಕಮ್ಮಿಯಾಗದ ಕಾರಣ ಕಿಟಕಿಗಳು ತೆಗೆದೇ ಇವೆ. ರಾತ್ರಿ ಸುಮಾರು ಮೂರು ಗಂಟೆ ಇರಬಹುದು: ಕ್ರಾಂತಿ ನೀರು ಕೇಳಿದ. ದೀಪದ ಸ್ವಿಚ್ ಹಾಕಿ ನೀರು ಕುಡಿಸಿದೆ. ಮತ್ತೆ ಅವನು ನಿದ್ದೆ ಮಾಡುವವರೆಗೂ ದೀಪವನ್ನು ಆರಿಸಲು ಬಿಡುತ್ತಿರಲಿಲ್ಲವಾದ್ದರಿಂದ ದೀಪವನ್ನು ಹಾಗೇ ಬಿಟ್ಟು ಸೊಳ್ಳೆ ಪರದೆಯ ಒಳಗೆ ಕಣ್ಣುಮುಚ್ಚಿ ಮಲಗಿದ್ದೆ.

ಏನೋ.... ಸರ ಸರ ಸದ್ದು. ಅರೆನಿದ್ದೆ, ಅರೆ ಎಚ್ಚರದ ಮಧ್ಯೆ ಒಲ್ಲದ ಮನಸ್ಸಿನಿಂದ ಕಣ್ಣು ತೆರೆದು ನೋಡುತ್ತೇನೆ. ಪರದೆಯ ಪಕ್ಕದಲ್ಲೇ ಒಂದು ದಪ್ಪದಾದ ಬಿದಿರು ಮರ ಚಲಿಸುತ್ತಿದೆ!

ಅವಕ್ಕಾದ ನನ್ನ ಹೃದಯ ಒಮ್ಮೆಲೇ ನಿಂತಂತಾಯಿತು. ಉದ್ದವಾದ ಬಿದಿರು ಮರ ಕಿಟಕಿಯಿಂದ ಒಳತೂರಿ ಗೋಡೆಯಲ್ಲಿ ನೇತಾಕಿದ್ದ ವ್ಯಾನಿಟಿ ಚೀಲವನ್ನು ಅಪಹರಿಸಲು ಪ್ರಯತ್ನಿಸುತ್ತಿದೆ. ಒಮ್ಮೆಲೇ ಹೌಹಾರಿದ ನಾನು.... ಏಯ್.... ಎಂದು ಸದ್ದು ಮಾಡಿ ಎರಡೂ ಕೈಗಳಿಂದ ಬಿದಿರು ಮರವನ್ನು ದೂರ ತಳ್ಳಿದೆ. ವ್ಯಾನಿಟಿ ಚೀಲ ದೊಪ್ಪನೆ ಕೆಳಕ್ಕೆ ಬೀಳುವುದರ ಜೊತೆಗೆ ಬಿದಿರುಮರ ಸರಕ್ಕನೆ ಹಿಂದಕ್ಕೆ ಸರಿಯಿತು.

ನಾನು ಕೂಗಿದ ಸದ್ದು ಎಷ್ಟು ಜೋರಾಗಿತ್ತೆಂದರೆ ಪಕ್ಕದ ಮನೆಯಲ್ಲಿ ಮಲಗಿದ್ದವರೂ ಮತ್ತು ಸುಶೀಲ ಒಮ್ಮೆಲೇ ಎಚ್ಚರಗೊಂಡಿದ್ದರು. ನನಗೆ ಕೆಲವು ಕ್ಷಣ ಮಾತುಗಳು ಬರದೆ ಹೃದಯ ಗಂಟಲಲ್ಲೇ ಸಿಕ್ಕಿಕೊಂಡಂತಾಯಿತು. ಬೆಳಿಗ್ಗೆ ಎದ್ದು ನೋಡಿದಾಗ ಆ ಕಳ್ಳನ ಹೆಜ್ಜೆ ಗುರುತುಗಳು ಕಾಣಿಸಿದವು. ಆ ದಿನದಿಂದ ಕಿಟಕಿಗಳನ್ನು ತೆರೆದುಕೊಂಡು ಮಲಗುವುದನ್ನು ಬಿಟ್ಟುಬಿಟ್ಟೆವು.

ಒಂದು ಭಾನುವಾರ ಬೆಳಿಗ್ಗೆ ನಾವು ಮೂವರು ಸೈಕಲ್ ರಿಕ್ಷಾದಲ್ಲಿ ಕುಳಿತುಕೊಂಡು ದಿಮಾಪುರದ ಮುಖ್ಯ ರಸ್ತೆ, ಸರ್ಕ್ಯುಲರ್ ರಸ್ತೆಯಲ್ಲಿ ಹೋಗುತ್ತಿದ್ದೇವೆ. ರಸ್ತೆಯ ಪಕ್ಕದಲ್ಲೇ ಸುಮಾರು ೫೦-೬೦ ನಾಯಿಗಳು ಬಿದ್ದಿವೆ. ಸುತ್ತಲೂ ಒಂದಷ್ಟು ಜನ, ಮಾರುತಿ ಕಾರುಗಳು ಮತ್ತು ದ್ವಿಚಕ್ರ ವಾಹನಗಳೂ ನಿಂತಿವೆ. ಇದೇನಿರಬಹುದು ಎಂದು ನೋಡುನೋಡುತ್ತಿದ್ದಂತೆ ಹತ್ತಿರ ಬಂದಿದ್ದೆವು. ಎಲ್ಲಾ ನಾಯಿಗಳೂ ಸತ್ತುಬಿದ್ದಿವೆ.



*ನಾಗಾಗಳ ಒಂದು ನೃತ್ಯ*

ಅಲ್ಲಿದ್ದವರೆಲ್ಲ ನೂರು, ಇನ್ನೂರು ನೋಟುಗಳನ್ನು ಕೊಟ್ಟು ನಾಯಿಗಳನ್ನು ತಮ್ಮ ವಾಹನಗಳಲ್ಲಿ ಹಾಕಿಕೊಂಡು ಹೋಗುತ್ತಿದ್ದಾರೆ!

ಸ್ವಲ್ಪ ಗಾಬರಿಯಾದ ನಾವು ನೇರವಾಗಿ ಆದಿನಾರಾಯಣರವರ ಮನೆಗೆ ಹೋಗಿ ವಿಷಯ ತಿಳಿಸಿದೆವು. ಶ್ರೀಮತಿ ಮತ್ತು ಶ್ರೀ ಆದಿನಾರಾಯಣ ಅವರು ಬಿದ್ದು ಬಿದ್ದು ನಗುತ್ತ ಸುಮಾರು ವಿಷಯಗಳನ್ನು ನಮಗೆ ತಿಳಿಸಿ ಇನ್ನಷ್ಟು ಗಾಬರಿಪಡಿಸಿದರು. ನಂತರದ ದಿನಗಳಲ್ಲಿ ಅವರು ತಿಳಿಸಿದ್ದ ವಿಷಯಗಳನ್ನು ನೇರವಾಗಿ ನೋಡಿ ನಮಗೂ ಸಾಕಾಗಿಹೋಯಿತು.

ನಾಗಾಗಳಿಗೆ ನಂಬರ್ ಒನ್ ಪ್ರಿಯವಾದ ಮಾಂಸವೆಂದರೆ ನಾಯಿ; ನಂತರ ಮಂಗ, ಹಂದಿ ಇತ್ಯಾದಿ. ಇವುಗಳ ಜೊತೆಗೆ ಭೂಮಿಯ ಮೇಲೆ ಸಿಗುವ ಎಲ್ಲಾ ಪ್ರಾಣಿಗಳೂ ಅವರಿಗೆ ಪ್ರಿಯವೇ.

ಒಮ್ಮೆ 'ತ್ಯುಯಿನ್ ಸಾಂಗ್' ಜಿಲ್ಲೆಯ ಹಳ್ಳಿಯವನನ್ನ ನೀವು ಏನೇನು ತಿನ್ನುತ್ತೀರ ಎಂದು ಪ್ರಶ್ನಿಸಿದಾಗ, ''ನಾಗಾ ಮನುಷ್ಯ ತಿನ್ನದೆ ಇರುವ ವಸ್ತುಗಳೆಂದರೆ ಎರಡೇ ಎರಡು: ಒಂದು ಅವನ ಮೂತ್ರ, ಎರಡು ಮಲ'' ಎಂದಿದ್ದ.

ಅವನು ಹೇಳಿದ್ದರಲ್ಲಿ ಸತ್ಯಾಂಶವೂ ಇದ್ದಿತೇನೋ! ನಾಗಾಲ್ಯಾಂಡಿನ ರಾಜಧಾನಿ ಕೋಹಿಮಾ ನಗರದ ನಾಗಾಸಂತೆಯನ್ನು ನೋಡಲೆಂದೇ ಹೋಗಿದ್ದೆವು. ಆ ಸಂತೆಯಲ್ಲಿ ಸಿಗದೆ ಇರುವ ಪ್ರಾಣಿಗಳೇ ಇಲ್ಲವೆನ್ನಬಹುದು.

ನಾಯಿಗಳು ಹೊಲಿಗೆ ಮಾಡಿದ ಗೋಣಿ ಚೀಲಗಳಲ್ಲಿ ಮುಖಗಳನ್ನು ಹೊರಕ್ಕೆ ಚಾಚಿ ಮನುಷ್ಯರಂತೆ ಕುಳಿತುಕೊಂಡಿದ್ದರೆ, ಕಪ್ಪೆಗಳನ್ನು ತರಕಾರಿಯ ಕುಪ್ಪೆಗಳಂತೆ ದಾರಗಳಲ್ಲಿ ಕಟ್ಟಿಡಲಾಗಿದೆ. ಬಸವನ ಹುಳುಗಳನ್ನು ಬಿದಿರು ಸೇರುಗಳಲ್ಲಿ ಅಳತೆ ಮಾಡುತ್ತಿದ್ದರೆ, ಹಸಿರು, ಹಳದಿ ಬಣ್ಣದ ಕಂಬಳಿ ಹುಳುಗಳನ್ನು ತಕ್ಕಡಿಯಲ್ಲಿ ತೂಕ ಹಾಕುತ್ತಿದ್ದಾರೆ. ಮಿಡತೆ ಇನ್ನಿತರ ಹಾರುವ ಪ್ರಾಣಿಗಳನ್ನು ಪ್ಲಾಸ್ಟಿಕ್ ಚೀಲಗಳಲ್ಲಿ ಕಟ್ಟಿಟ್ಟಿದ್ದಾರೆ. ಹಾವುಗಳು ಮತ್ತು ಮಂಗಗಳು ಮಾತ್ರ ಹುಡುಕಿದರೂ ಸಿಗಲಿಲ್ಲ. ಕಾರಣ ಅವು ಸಂತೆ ತಲುಪುವುದಕ್ಕಿಂತ ಮುಂಚೆಯೇ ದಾರಿಯಲ್ಲೇ ವ್ಯಾಪಾರ ಆಗಿಬಿಡುತ್ತಿದ್ದವಂತೆ.

ನಾಗಾ ಮನೆಗಳಿಗೆ ಯಾರಾದರೂ ಮುಖ್ಯ ಅತಿಥಿಗಳು ಬಂದರೆ ನಾಯಿ ಮತ್ತು ಮಂಗಗಳ ತಲೆಗಳನ್ನು ವಿಶೇಷವಾಗಿ ತಯಾರಿ ಮಾಡಿ ಭಕ್ಷಿಸಲು ಇಡುವುದು ಗೌರವದ ಪ್ರತೀಕ. ನಾಯಿ ಮತ್ತು ಮಂಗಗಳ ಮಾಂಸವನ್ನು ತಿಂದರೆ ಮೈ ಒಂದು ರೀತಿ ಹಗುರವಾಗಿ ಹಾಗೇ ಹಾರಾಡಿದಂತಾಗಿ ಮೈಯೆಲ್ಲ ಪುಳಕಗೊಳ್ಳುತ್ತದೆ, ಎನ್ನುತ್ತಿದ್ದ ನನ್ನ ಜೀಪಿನ ಚಾಲಕ ಟೊಂಗ್‌ಪಾಂಗ್. ವರ್ಣಿಸುವ ಸಮಯದಲ್ಲಿ ಅವನ ಮುಖವನ್ನು ನೋಡಬೇಕು, ಅದೇನು ನಿರೀಕ್ಷೆ, ಅದೇನು ಉಲ್ಲಾಸ!

**ಎಂ. ವೆಂಕಟಸ್ವಾಮಿ**

೪೨೭, ೧೩ನೇ ಮುಖ್ಯರಸ್ತೆ, ಎಂ. ಸಿ. ಬಡಾವಣೆ, ವಿಜಯನಗರ, ಬೆಂಗಳೂರು - ೫೬೦ ೦೪೦

**ಕಡಲಾಚೆಯ ಕಾಂಗರೂ ನಾಡಿನಲ್ಲಿ** (ಪ್ರವಾಸ)



*ರಘು ನರ್ಕಳ*

**ಪುಟ : 253** **ಬೆಲೆ : ರೂ. 135**

**ಲಕ್ಷ್ಮೀಛಾಯಾ ಪ್ರಕಾಶನ,** 4, ಶ್ರೀರಾಮ್ ನಿವಾಸ, ಗೋವಂಡಿ, ಮುಂಬಯಿ - 400 088

*ಇದು ಲೇಖಕರ ಆಸ್ಟ್ರೇಲಿಯಾ ಪ್ರವಾಸ ಕಥನ. ಸುಮಾರು ಆರು ತಿಂಗಳ ತಮ್ಮ ಅಲ್ಲಿನ ವಾಸ್ತವ್ಯದ ಅವಧಿಯಲ್ಲಿ ಅಲ್ಲಿನ ಜನರ ಆಚಾರ ವಿಚಾರ, ಸಾಮಾಜಿಕ-ಸಂಸ್ಕೃತಿಗಳ ನೇರ ಮಾಹಿತಿ ಪಡೆದು ಆಸಕ್ತಿಯಿಂದ ಅಧ್ಯಯನ ಮಾಡಿದ್ದರಿಂದ ಕಾಂಗರೂಗಳ ನಾಡಿನ ಸಮಗ್ರ ದರ್ಶನವನ್ನೂ ಈ ಕೃತಿ ಮಾಡಿಸುತ್ತದೆ. ಲೇಖಕರು ಎರಡು ಸಲ ಆ ರಾಷ್ಟ್ರವನ್ನು ಸಂದರ್ಶಿಸಿದ್ದು ಹಿಂದಿನ ಭೇಟಿಯ ಕಾಲದ ''ಸಿಡ್ನಿ ಒಲಿಂಪಿಕ್ಸ್'' ಬಗ್ಗೆಯೂ ವಿವರಣೆ ಇದೆ.*

**ಯಶೋಧರಾ**



*ಹಿಂದಿ ಮೂಲ : ಮೈಥಿಲೀ ಶರಣ ಗುಪ್ತ , ಅನು : ಶಶಿಕಲಾ ಸುಬ್ಬಣ್ಣ*

**ಪುಟ : 140** **ಬೆಲೆ : ರೂ. 60**

**ಸಂವಹನ,** 12/1ಎ, ಈವನಿಂಗ್ ಬಜಾರ್ ಹಿಂಭಾಗ, ಶಿವರಾಂ ಪೇಟೆ, ಮೈಸೂರು - 570 001

*ಜಗವೆಲ್ಲ ಮಲಗಿದ್ದಾಗ ಅರ್ಧರಾತ್ರಿಯಲ್ಲೆದ್ದು, ನಿದ್ರಿಸುತ್ತಿದ್ದ ಮಡದಿ-ಮಗುವನ್ನು ತೊರೆದು ಲೋಕೋದ್ಧಾರಕ್ಕಾಗಿ ನಡೆದ ಗೌತಮ ಬುದ್ಧನ ಪತ್ನಿ ಯಶೋಧರೆಯ ಮನಸ್ಸಿನ ಬೇಗುದಿ-ಚಿರವಿರಹ ಚಿತ್ರಿಸುವ ಗೀತಕಾವ್ಯ. ಸುಂದರ ಕನಸುಗಳೊಂದಿಗೆ ಬಾಳಲು ಬಂದ ಹೆಣ್ಣೊಬ್ಬಳ ಆಶಾಸೌಧ ಕುಸಿದಾಗ, ಆತನ ಪ್ರಸಿದ್ಧಿಯೊಂದಿಗೆ ಮಾತ್ರ ತನ್ನ ಹೆಜ್ಜೆಗಳನ್ನು ಗುರುತಿಸಿಕೊಳ್ಳಬೇಕಾದ ಅನಿವಾರ್ಯತೆಯೊಂದಿಗೆ ಓರ್ವ ಹೆಣ್ಣಿನ ಮೂಕ ವೇದನೆ ಪರಿಣಾಮಕಾರಿಯಾಗಿ ಮೂಡಿದೆ.*

**ಈಸಬೇಕು ಇದ್ದು ಜಯಿಸಬೇಕು**



*ವಿದ್ವಾನ್ ವಿ. ನಂಜುಂಡಸ್ವಾಮಿ*

**ಪುಟ : 260** **ಬೆಲೆ : ರೂ. 180**

**ಅಕ್ಷತ ಪ್ರಕಾಶನ,** 240, ತ್ಯಾಗಮಾರ್ಗ, ಸಿದ್ಧಾರ್ಥ ಬಡಾವಣೆ, ಮೈಸೂರು - 570 011

*ಸಂಗೀತ ಕ್ಷೇತ್ರದಲ್ಲಿ ದೊಡ್ಡ ವಿದ್ವಾಂಸರಾಗಿರುವ ವಿ. ನಂಜುಂಡಸ್ವಾಮಿ ಪ್ರಾಚೀನ ವಾಗ್ಗೇಯಕಾರರ ಕೃತಿಗಳನ್ನು ಸಂಗೀತಕ್ಕೆ ಅಳವಡಿಸಿ ಹಾಡಿದ್ದಾರೆ. ಇಲ್ಲಿ ಅವರು ಪ್ರತಿಯೊಂದು ಸಂಗೀತ ಕಛೇರಿಯಲ್ಲಿ ಹಾಡಿದ ಸಾಹಿತ್ಯದ ಭಾವಾರ್ಥ, ಸಂಗೀತ ಲಕ್ಷಣಗಳನ್ನೂ, ರಾಗ-ತಾಳ-ಭಾವ ಇವುಗಳ ಮೇಳದಿಂದ ಸುಶ್ರಾವ್ಯ ದನಿಯಾಗಿ ಶ್ರೋತೃಗಳನ್ನು ತಲೆದೂಗುವಂತೆ ಮಾಡುವ ಸಂಗೀತದ ಬಗೆಯನ್ನೂ ಅಮೋಘವಾಗಿ ವಿವರಿಸಿದ್ದಾರೆ. ಸಂಗೀತ ಪ್ರೇಮಿ, ವಿದ್ಯಾರ್ಥಿಗಳಿಗೆ ಕೈಪಿಡಿ.*

**ನೆಲದ ನುಡಿ** (ಲೇಖನಗಳು)



*ಬೂವನಹಳ್ಳಿ ನಾಗರಾಜ್*

**ಪುಟ : 96** **ಬೆಲೆ : ರೂ. 50**

**ಭುವನ ಪ್ರಕಾಶನ,** ನಂ. 5555, ಮಹಡಿ, 4ನೇ ಕ್ರಾಸ್, ಸಿದ್ಧಗಂಗಾ ಬಡಾವಣೆ, ತುಮಕೂರು - 572 102

*ಇಲ್ಲಿನ ಹನ್ನೊಂದು ಲೇಖನಗಳು ಇಂದಿನ ಹದಗೆಟ್ಟ ಸಾಮಾಜಿಕ ಪರಿಸ್ಥಿತಿಯ ಚಿತ್ರಣವನ್ನು ಎಳೆ ಎಳೆಯಾಗಿ ಬಿಡಿಸಿಡುತ್ತವೆ. ಮಾತಿಗೂ ಕೃತಿಗೂ ಅಂತರ ಹೆಚ್ಚುತ್ತಿರುವ ದಿನಗಳಲ್ಲಿ ಅನೇಕ ಮೌಲಿಕ ಶಬ್ದಗಳು ಅರ್ಥವನ್ನೇ ಕಳೆದುಕೊಳ್ಳುವ ಅಪಾಯದ ಬಗ್ಗೆ ಅರಿವು ಮೂಡಿಸುತ್ತವೆ. ಲೇಖಕರು ಹಳ್ಳಿ ಮತ್ತು ನಗರ ಜೀವನದ ಸಂದರ್ಭದಲ್ಲಿ ತಮಗಾದ ಅನುಭವಗಳನ್ನು ಓದುಗರೊಂದಿಗೆ ಹಂಚಿಕೊಂಡಿದ್ದಾರೆ.*

**ಐವತ್ತೊಂದು ಕತೆಗಳು**



*ಯಶವಂತ ಚಿತ್ತಾಲ*

**ಪುಟ : 736** **ಬೆಲೆ : ರೂ. 295**

**ಗೀತಾ ಬುಕ್ ಹೌಸ್,** ಕೆ. ಆರ್. ವೃತ್ತ , ಮೈಸೂರು-570 001

*ತಮ್ಮ ಅಮೂಲ್ಯ ಕೃತಿಗಳಿಗೆ ಪ್ರತಿಷ್ಠಿತ ಪ್ರಶಸ್ತಿಗಳನ್ನು ಗಳಿಸಿದ ಸಾಹಿತಿ ಯಶವಂತ ಚಿತ್ತಾಲರ ಕೃತಿಗಳಲ್ಲಿ ಅತ್ಯುನ್ನತ ಮಟ್ಟಕ್ಕೆ ಏರಬಹುದಾದ ವ್ಯಕ್ತಿತ್ವದ ಚೇತನವೊಂದರ ಹುಡುಕಾಟವಿದೆ. ಇದು ಅವರ ಐವತ್ತು ವರ್ಷಗಳ ಸುದೀರ್ಘ ಸಾಹಿತ್ಯ ರಚನೆಯಿಂದ ಸಂಗ್ರಹಿಸಿದ ಎಲ್ಲ ಕಥೆಗಳ ಬೃಹತ್ ಸಂಕಲನ. ಕತೆಗಳ ಮೂಲಕ ಎಲ್ಲ ಸ್ತರದ ಬದುಕಿನ ಬವಣೆಗೆ ಧ್ವನಿ ನೀಡಿದ್ದಾರೆ. ಕಥಾಸಂಕಲನಗಳಿಗೆ ಬರೆದ ಮುನ್ನುಡಿ-ಪ್ರತಿಕ್ರಿಯೆಗಳನ್ನೂ ಅನುಬಂಧದಲ್ಲಿ ನೀಡಲಾಗಿದೆ.*

**ಇದು ಧರೆಯ ಬವಣೆ** (ಕವನ ಸಂಕಲನ)

*ಎಸ್. ತಮ್ಮಾಜಿರಾವ್*

**ಪುಟ : 64** **ಬೆಲೆ : ರೂ. 50**

**ಷಡಕ್ಷರಿ ಪ್ರಕಾಶನ,** 1125, ಶ್ರೀ ಯಾಜ್ಞವಲ್ಕ್ಯ, ಕಂಚಾಗಟ್ಟ ರಸ್ತೆ , ತಿಪಟೂರು - 572 202

*ನಾವು ಮನುಷ್ಯರು ಈ ಧರೆಗೆ ಬಂದಾಗಿನಿಂದ ಸುಖದತ್ತ ಮಾತ್ರ ಮುಖ ಮಾಡಿ ಅದನ್ನು ಪಡೆಯಲು ಇನ್ನಿಲ್ಲದ ಸಾಹಸ ಮಾಡುತ್ತೇವೆ. ಮಾನವತೆಯನ್ನೇ ಮರೆಯುತ್ತೇವೆ. ಪ್ರಕೃತಿಯೊಡನೆ ಮನುಷ್ಯನ ಸಂಬಂಧಗಳೆಲ್ಲ ವ್ಯಾಪಾರೀಕರಣಗೊಂಡಿರುವ ಈ ಧರೆಯ ಮೇಲೆ ಮನುಷ್ಯನ ಜೊತೆಯಲ್ಲೇ ಎಲ್ಲ ಜೀವಿಗಳ ಬವಣೆಯೇನು ? ಚಿಗುರುತ್ತಲೇ ಮುದುಡಿಕೊಳ್ಳುವ ಮನುಷ್ಯ ಸಂಬಂಧಗಳು ಇಲ್ಲಿನ ಕಾವ್ಯದ ವಸ್ತು.*

**ತುಳು ನಾಡಿನ ಜನಪದ ಆಟಗಳು**



*ಡಾ॥ ಗಣನಾಥ ಎಕ್ಕಾರು*

**ಪುಟ : 400** **ಬೆಲೆ : ರೂ. 195**

**ಜ್ಞಾನೋದಯ ಪ್ರಕಾಶನ,** ಬಸವೇಶ್ವರ ನಗರ, ಮೂರನೇ ಹಂತ, ನಾಲ್ಕನೇ ಬ್ಲಾಕ್, 133, ಶಾರದಾ ಕಾಲೋನಿ, ಬೆಂ-79

*ಮನೋರಂಜನೆ ಮತ್ತು ಮನೋವಿಕಾಸಗಳೇ ಧ್ಯೇಯವಾಗಿರುವ ಮಾನವನೊಂದಿಗೇ ಬೆಳೆದುಬಂದ ಅನೇಕ ಗ್ರಾಮೀಣ-ಜನಪದ ಕ್ರೀಡೆಗಳನ್ನು ಇಲ್ಲಿ ಪರಿಚಯಿಸಲಾಗಿದೆ. ಜೊತೆಯಲ್ಲೇ ಆಯಾ ಪ್ರದೇಶದ ಜನರ ಸಂಸ್ಕೃತಿ ಜೀವನ ವಿಧಾನದೊಂದಿಗೆ ತಳುಕು ಹಾಕಿಕೊಂಡಿರುವ ಅನೇಕ ನಂಬಿಕೆಗಳನ್ನೂ ಆಟಗಳೊಂದಿಗೆ ಸಮೀಕರಿಸಿ ಅಧ್ಯಯನ ಮಾಡಲಾಗಿದೆ. ಪ್ರೋತ್ಸಾಹವಿಲ್ಲದೆ ಮೂಲೆಗುಂಪಾಗುತ್ತಿರುವ ಅನೇಕ ಗ್ರಾಮೀಣ ಆಟಗಳನ್ನು ಪರಿಚಯಿಸುವ ಪ್ರಯತ್ನ.*

**ಪ್ರೀತಿಯ ಹಾದಿಯಲ್ಲಿ** (ಕಥಾ ಸಂಕಲನ)



*ಅಬ್ದುಲ್ ಖಾದರ್ ಸೌದಾಗರ್ ಅನು : ನೂರ್‌ಜಹಾನ್*

**ಪುಟ : 134** **ಬೆಲೆ : ರೂ. 25**

**ಆಶಾ ಪ್ರಕಾಶನ,** 11ನೇ ವಾರ್ಡ್, ಹೊಸ ಸಿದ್ದಲಿಂಗಪ್ಪ ಚೌಕಿ, ಹೊಸಪೇಟೆ - 583 201.

*ಉರ್ದು ಮೂಲದ ತಾವು ಓದಿದ ಹನ್ನೊಂದು ಕತೆಗಳನ್ನು ಕನ್ನಡಕ್ಕೆ ಪರಿಚಯಿಸಿದವರು ಶ್ರೀಮತಿ ನೂರ್ ಜಹಾನ್. ಮುಸ್ಲಿಂ ಮಹಿಳೆಯರ ನೋವಿನ ದನಿಯೊಂದಿಗೆ ಪ್ರಾರಂಭವಾದ ಕತೆಗಳು ತನ್ನತನವನ್ನು ಪರಿಚಯಿಸುತ್ತಾ ಸಾಮಾನ್ಯ ಜನರಿಗೆ ಉಳಿಗಾಲವಿಲ್ಲವೇನೋ ಎನ್ನುವಷ್ಟರಮಟ್ಟಿಗೆ ನಮ್ಮ ಮನಸ್ಸುಗಳನ್ನು ತಟ್ಟುತ್ತವೆ. ಎಲ್ಲ ವರ್ಗಗಳ ಜನರನ್ನೂ ಪ್ರತಿನಿಧಿಸುವ ಕತೆಗಳಿವೆ.*

- ಇಂದಿರಾ ಕುಮಾರಿ

# ಯೋಗಪ್ರವೇಶ-೧೯

ಜಿ. ರಾಮಕೃಷ್ಣ

ಹಿಂದೆಯೇ ಹೇಳಿದಂತೆ ಅರ್ಧ - ಮತ್ಸ್ಯೇಂದ್ರಾಸನವನ್ನು ಯಾವುದಾದರೂ ಕಾರಣದಿಂದ ಮಾಡಲಾಗದಿದ್ದವರು ಅದಕ್ಕೆ ಪರ್ಯಾಯವಾಗಿ ವಕ್ರಾಸನವನ್ನು ಮಾಡಬಹುದು. ಅದನ್ನು ಮಾಡಿ ಅದಕ್ಕೆ ಪೂರಕವಾಗಿಯೂ ಇದನ್ನು ಮಾಡಲಡ್ಡಿಯಿಲ್ಲ. ವಕ್ರಾಸನವು ಶಾಸ್ತ್ರ ಗ್ರಂಥಗಳಲ್ಲಿ ಹೇಳಿರುವಂತಹ ಆಸನವಲ್ಲ. ಅದನ್ನು ದೈಹಿಕ ಪಟುತ್ವಕ್ಕೆ ಅನುಕೂಲವಾಗುವಂತೆ ರೂಪಿಸಿದವರು ಸ್ವಾಮಿ ಕುವಲಯಾನಂದ. ಸಾಂಪ್ರದಾಯಿಕ ಗ್ರಂಥಗಳಲ್ಲಿ ಹೇಳಿಲ್ಲದಿರುವುದನ್ನು ಯೋಗಾಸನವೆಂದು ಸ್ವೀಕರಿಸಲು ಮಾನಸಿಕವಾಗಿ ಸಿದ್ಧವಿಲ್ಲದಿರುವವರು ಇದನ್ನು ಮಾಡಬೇಕಾಗಿಲ್ಲ. ಬದಲಾಗಿ, ಮತ್ಸ್ಯೇಂದ್ರಾಸನವನ್ನೇ ಮಾಡಲು ಸಾಮರ್ಥ್ಯ ಪಡೆದುಕೊಳ್ಳಬಹುದು. ಇಲ್ಲವಾದರೆ ಶರೀರದ ಯಾವುದೋ ಭಾಗವನ್ನು


◂ ವಕ್ರಾಸನ

ವಕ್ರವನ್ನಾಗಿಸಿ ಅದರಿಂದಲೂ ತೃಪ್ತಿ ಪಡೆಯಬಹುದು. ಆದರೆ ಹಾಗೆ ಮಾಡುವಾಗ ಯಾವ ಅಂಗಾಂಗಕ್ಕೂ ಬಾಧೆಯಾಗದಂತೆ ನೋಡಿಕೊಳ್ಳಬೇಕೆಂಬುದು ಮುಖ್ಯ.

ಬೆನ್ನುಹುರಿಯು ಬಗ್ಗುವಂತೆ ಮಾಡುವ ವಿಧಾನ ಇದಾದ್ದರಿಂದ ಇದಕ್ಕೆ ವಕ್ರಾಸನವೆಂಬ ಹೆಸರು ನೀಡಲಾಗಿದೆ. ಅರ್ಧ-ಮತ್ಸ್ಯೇಂದ್ರಾಸನದಿಂದ ಶರೀರಕ್ಕೆ ಲಭಿಸಬಹುದಾದ ಸೌಖ್ಯಗಳು ಬಹುಮಟ್ಟಿಗೆ ಈ ಆಸನದಿಂದಲೂ ಲಭಿಸುತ್ತವೆ. ಕಾಲುಗಳನ್ನು ಮುಂದಕ್ಕೆ ಚಾಚಿ ಅವನ್ನು ಜೊತೆಯಾಗಿರಿಸಿಕೊಳ್ಳುವುದು ಈ ಆಸನದ ಮೊದಲ ಹಂತ. ಆಮೇಲೆ ಒಂದು ಮಂಡಿಯನ್ನು (ಎಡಗಡೆಯದು ಎಂದಿಟ್ಟುಕೊಳ್ಳೋಣ) ಮಡಿಚಿ ಅದು ಇನ್ನೊಂದು ಮಂಡಿಯ ಬಳಿ (ಅಂದರೆ, ಪಕ್ಕದಲ್ಲಿ) ನಿಲ್ಲುವಂತೆ ಮಾಡಬೇಕು. ಪಾದವು ಆ ಇನ್ನೊಂದು ಮಂಡಿ ಚಿಪ್ಪಿನ ಮಗ್ಗುಲಲ್ಲಿರುತ್ತದೆ. ಶರೀರವನ್ನು ನೆಟ್ಟಗಿರಿಸಬೇಕು, ಹಿಂದಕ್ಕೆ ಬಾಗಿಸಬಾರದು. ಹಾಗಿರುವಾಗ ಎಡಗೈಯನ್ನು ಬೆನ್ನ ಹಿಂದಕ್ಕೆ ಆದಷ್ಟು ಹತ್ತಿರದಲ್ಲಿರುವಂತೆ (ಬೆನ್ನುಹುರಿಯ ಸ್ಥಾನದಿಂದ ಒಂಭತ್ತು ಅಂಗುಲದ ದೂರವನ್ನು ಮೀರದಂತೆ) ಭದ್ರವಾಗಿ ಊರಿ ಶರೀರಕ್ಕೆ ಆಸರೆ ಒದಗಿಸಬಹುದು; ಶರೀರವನ್ನು ಹೆಚ್ಚಾಗಿ ತಿರುಗುವಂತೆ ಮಾಡಬಾರದು. ಈಗ ಬಲಗೈಯನ್ನು ಭೂಮಿಗೆ ಲಂಬವಾಗಿ ನಿಂತಿರುವ ಮಂಡಿಯನ್ನು ಬಳಸಿ ಹಸ್ತವನ್ನು ನೆಲದ ಮೇಲಿಡಿ. ಹೀಗೆ ಮಾಡುವಾಗ ಎಡಮಂಡಿಯನ್ನು ಬಲಗಡೆಗೆ ಸ್ವಲ್ಪ ತಳ್ಳಿ ಹಿಡಿದಂತಾಗುತ್ತದೆ. ಈಗ ಶರೀರವನ್ನು ಎಡಗಡೆಗೆ ಸಾಧ್ಯವಾದಷ್ಟು ಮಟ್ಟಿಗೆ ತಿರುಗಿಸಿ. ಭದ್ರವಾಗಿ ಊರಲಾಗಿರುವ ಮಂಡಿಯು ಸಡಿಲಗೊಳ್ಳಬಾರದು; ಅದರಿಂದ ಬಲಗೈಗೆ ಒಳ್ಳೆಯ ಊರುಗೋಲು ಸಿಕ್ಕಿದಂತಾಗುತ್ತದೆ. ಮುಖವನ್ನು ಸಹ ಎಡಗಡೆಗೆ ತಿರುಗಿಸಿ ಎಡಭುಜದ ಮೇಲೆ ಗಲ್ಲವು ಬಂದಿರುವಂತೆ ಮಾಡುವುದು ಈಗ ಸುಲಭ. ಇಷ್ಟು ಮಾಡಿದರೆ ಬೆನ್ನುಹುರಿಯು ತಿರಿಚಿರುತ್ತದೆ.

ಇದೇ ಕ್ರಮವನ್ನು ಇನ್ನೊಂದು ಕಡೆಯೂ ಅನುಸರಿಸಿ (ಅಂದರೆ, ಬಲ ಮಂಡಿಯನ್ನು ಮಡಿಚಿ) ಬೆನ್ನುಹುರಿಗೆ ಮೊದಲಿದ್ದುದಕ್ಕೆ ವಿರುದ್ಧ ದಿಕ್ಕಿನಲ್ಲಿ ತಿರಿಚುವಿಕೆಯ ಲಾಭವನ್ನು ತಂದುಕೊಡಬಹುದು. ಎರಡೂ ಕಡೆಯ ತಿರಿಚುವಿಕೆ ಸೇರಿ ಒಟ್ಟು ಮೂರು ನಿಮಿಷಗಳನ್ನು ಮೀರಬಾರದು. ಯಥಾಪ್ರಕಾರ ಎಲ್ಲ ಕ್ರಿಯೆಗಳಲ್ಲೂ ನಿಧಾನ ಗತಿ ಇರಬೇಕಾದ್ದು ಅವಶ್ಯಕ.

ದಪ್ಪ ಹೊಟ್ಟೆಯವರಿಗೆ ಈ ಆಸನ ಮಾಡುವಾಗ ಒಂದು ತೊಂದರೆ ಇರುತ್ತದೆ. ಮಂಡಿಯನ್ನು ಬಳಸುವಂತೆ ಕೈಯನ್ನು ಹಿಡಿದು ಮಂಡಿಗೆ ಊರುಗೋಲು ಒದಗಿಸಲು ಅವರಿಗೆ ಕಷ್ಟವೆನಿಸುವುದು ಸಹಜ. ಅಂತಹವರು ಆ ಕೈಯನ್ನು ಮಂಡಿಯ ಹಿಂದಕ್ಕೆ ಯಾವ ಭಾಗದಲ್ಲಿಯಾದರೂ ಇರಿಸಿ ಅಭ್ಯಾಸ ಮಾಡಬಹುದು; ಕೈಯನ್ನು ನೆಲದ ಮೇಲೆ ಊರಿಯೇ ತೀರಬೇಕೆಂಬ ನಿರ್ಬಂಧವೇನೂ ಇರಬೇಕಾಗಿಲ್ಲ.

ಅರ್ಧ- ಮತ್ಸ್ಯೇಂದ್ರಾಸನವನ್ನು ಮಾಡಬಲ್ಲವರು ಮೊದಲು ವಕ್ರಾಸನವನ್ನು ಮಾಡಿ ಆಮೇಲೆ ಅರ್ಧ- ಮತ್ಸ್ಯೇಂದ್ರಾಸನ ಮಾಡುವುದು ರೂಢಿಯಲ್ಲಿದೆ. ಅವೆರಡರಲ್ಲಿ ಒಂದನ್ನು ಮಾತ್ರ ಮಾಡುವುದರಲ್ಲಿ ಸಂಕೋಚ ಪಡಬೇಕಾದ ಅಂಶವೇನೂ ಇಲ್ಲ. ಅಂದರೆ, ಅರ್ಧ- ಮತ್ಸ್ಯೇಂದ್ರಾಸನ ಮಾಡಲಾಗದವರು ಕೀಳರಿಮೆ ಬೆಳೆಸಿಕೊಳ್ಳಬೇಕಾಗಿಲ್ಲ. ಶರೀರ ಧರ್ಮವನ್ನು ಧಿಕ್ಕರಿಸಿ ಬಲವಂತವಾಗಿ ಕೆಲವು ಆಸನಗಳನ್ನು ಮಾಡಲೇಬೇಕೆಂದು ಹೊರಡುವುದು ಶರೀರಕ್ಕೆ ಬಾಧಕವಾಗುವ ಸಂಭವವಿರುತ್ತದೆ. ಅದೇ ರೀತಿ, ಈ ಆಸನಗಳ ನಂತರ ಮಾಡಬೇಕಾದ ಪಶ್ಚಿಮತಾನ ಆಸನದ ಬಗೆಗೂ ಎಚ್ಚರದಿಂದಿರುವುದು ಒಳ್ಳೆಯದು. ಈ ಆಸನವನ್ನು ಕೆಲವರು ಪಶ್ಚಿಮೋತ್ತಾನಾಸನವೆಂದು ಏಕೆ ಕರೆಯುತ್ತಾರೋ ತಿಳಿಯದು. ಮೂಲತಃ ಇಲ್ಲಿ 'ಪಶ್ಚಿಮ' ಎಂದರೆ ಶರೀರದ ಹಿಂಭಾಗವನ್ನು ಸೂಚಿಸುವ ಪದವೆಂದು ಗ್ರಹಿಸಬೇಕು. 'ತಾನ' ಎಂದರೆ 'ಎಳೆಯುವುದು' ಎಂಬರ್ಥದಲ್ಲಿ ಬಳಕೆಯಾಗಿದೆ. ಹಠಪ್ರದೀಪಿಕೆಯಲ್ಲಿ ಈ ಆಸನದ ವಿವರಣೆ ಹೀಗಿದೆ :


ಪಶ್ಚಿಮತಾನಾಸನ

ಪ್ರಸಾರ್ಯ ಪಾದೌ ಭುವಿ ದಂಡರೂಪೌ
ದೋರ್ಭ್ಯಾಂ ಪದಾಗ್ರದ್ವಿತಯಂ ಗೃಹೀತ್ವಾ ।
ಜಾನೂಪರಿ ನ್ಯಸ್ತಲಲಾಟದೇಶೋ ವಸೇದಿದಂ
ಪಶ್ಚಿಮತಾನಮಾಹುಃ ॥ (೧. ೨೮)

ಶರೀರದ ಹಿಂಭಾಗದ ಎಲ್ಲ ಮಾಂಸಖಂಡಗಳನ್ನೂ ಎಳೆಯುವಂತೆ ಮಾಡುವ ಆಸನ ಇದು. ಬೆನ್ನುಹುರಿಯುದ್ದಕ್ಕೂ ಯಾವುದೋ ಶಕ್ತಿಯು ಸಂಚರಿಸಿದಂತಾಗುತ್ತದೆ ಎಂಬರ್ಥದಲ್ಲೂ ಈ ಆಸನದ


ವಕ್ರಾಸನ ▸

ಹೆಸರನ್ನು ವ್ಯಾಖ್ಯಾನಿಸುವ ಸಂಪ್ರದಾಯ ಸಹ ಇದೆ. ಈ ಆಸನದ ಸಂದರ್ಭದಲ್ಲಿ ಗಮನಿಸಬೇಕಾದ ಒಂದು ಅಂಶವೆಂದರೆ ಮೊದಲಿಗೇ ಬಲಾತ್ಕಾರದಿಂದ ಈ ಆಸನವನ್ನು ಪೂರ್ಣರೂಪದಲ್ಲಿ ಮಾಡಹೊರಟು ಶರೀರಕ್ಕೆ ಬಾಧೆ ತಂದುಕೊಳ್ಳಬಾರದು, ಎಂಬುದು. ಹಠಪ್ರದೀಪಿಕೆಯ ಸೂಚನೆಯಂತೆ ಎರಡೂ ಕಾಲುಗಳನ್ನು ನೆಲದ ಮೇಲೆ ಚಾಚಿ ಆಯಾಭಾಗದ ಕೈಗಳಿಂದ ಕಾಲುಗಳ ಉಂಗುಷ್ಠಗಳನ್ನು ಹಿಡಿದುಕೊಳ್ಳಬೇಕು ಮತ್ತು ಹಣೆಯನ್ನು ಮಂಡಿಗಳ ಮೇಲಿರಿಸಬೇಕು. ಹೀಗೆ ಮಾಡುವಾಗ ಮಂಡಿಗಳ ಕೆಳಭಾಗವು ಭೂಮಿಯಿಂದ ಮೇಲೇಳಬಾರದೆಂದು ಸಹ ಸ್ವಾತ್ಮಾರಾಮನು ತನ್ನ ವ್ಯಾಖ್ಯಾನದಲ್ಲಿ ತಿಳಿಸಿದ್ದಾನೆ (ಯಥಾಜಾನ್ವಧೋ ಭಾಗಸ್ಯ ಭೂಮೇರುತ್ಥಾನಂ ನ ಸ್ಯಾತ್ ತಥಾ ಗೃಹೀತ್ವಾ). ಈ ಆಸನದಿಂದ ಪ್ರಾಣವಾಯುವು ಪಶ್ಚಿಮಾಭಿಮುಖವಾಗಿ, ಅಂದರೆ ಸುಷುಮ್ನಾ ಮಾರ್ಗದಲ್ಲಿ, ಹರಿಯಲು ಅನುಕೂಲ ಮಾಡಿಕೊಡುತ್ತದೆಂದು ಸಹ ಸ್ವಾತ್ಮಾರಾಮನು ಹೇಳುತ್ತಾನೆ. ಶರೀರಶಾಸ್ತ್ರದ ದೃಷ್ಟಿಯಿಂದ ಈ ಕಲ್ಪನೆಯ ಅರ್ಥವೇನೆಂದು ವಿವರಿಸಲು ಪ್ರಸ್ತುತ ಲೇಖಕನು ಅಸಮರ್ಥನಾಗಿದ್ದಾನೆಂದಷ್ಟೇ ಇಲ್ಲಿ ಹೇಳಬಹುದಾದ್ದು.

ಬೇರೆ ಯಾವ ಆಸನವನ್ನು ಮಾಡುವಾಗಲೂ ಇರಬೇಕಾದ ನಿಧಾನ ಗತಿಯು ಇದರಲ್ಲೂ ಇರಬೇಕಾದರೂ ಒಂದೆರಡು ವಿಶೇಷಾಂಶಗಳನ್ನು ಗಮನಿಸಬಹುದು. ಮಾಂಸಖಂಡಗಳು ಬಿಗಿಯಾಗಿ ಇರುವವರಿಗೆ ಈ ಆಸನದ ಪೂರ್ಣಾವಸ್ಥೆ ಲಭಿಸಲು

ಕೆಲಕಾಲ ಹಿಡಿಯುತ್ತದೆ. ಅದರಿಂದ ಅಸಹನೆ ತಾಳಿ ಬಲವಂತವಾಗಿ ಬೆನ್ನು ಬಗ್ಗಿಸಲು ತೊಡಗಿದರೆ ಕಾಲುಗಳಿಗೆ ಹಾಗೂ ಸೊಂಟಕ್ಕೆ ತೊಂದರೆಯುಂಟಾಗುವ ಸಂಭವವಿರುತ್ತದೆ. ಆಸನದ ಪೂರ್ಣಾವಸ್ಥೆ ತಲುಪುವ ದಿಕ್ಕಿನಲ್ಲಿ ಕ್ರಮೇಣ ಮುಂದುವರಿಯುವುದು ಅಗತ್ಯ. ಆಸನದಲ್ಲಿ ಸ್ಥಿರತ್ವ ಮತ್ತು ಸುಖತ್ವಗಳು ಇರಬೇಕೆಂಬ ಪತಂಜಲಿಯ ಮಾತನ್ನು ಈ ಆಸನದ ಸಂದರ್ಭದಲ್ಲಿ ಸರ್ವಥಾ ಮರೆಯಬಾರದು. ಸ್ವಾತ್ಮಾರಾಮನ ಸೂಚನೆಯಂತೆ ನಡೆಯಲು ಕೆಲವು ಕ್ರಮಗಳನ್ನು ಒಂದೊಂದಾಗಿ ಅಭ್ಯಾಸ ಮಾಡುವುದು ಸೂಕ್ತವೆನಿಸುತ್ತದೆ.

ಪೂರ್ಣಾವಸ್ಥೆಯಲ್ಲಿ ಭುಜದಿಂದ ಉಂಗುಷ್ಠದವರೆಗಿನ ದೂರವು ಕೈಗಳ ಉದ್ದಕ್ಕಿಂತ ಕಡಿಮೆಯಾಗಿಬಿಡುತ್ತದಾದ್ದರಿಂದ ಮೊಣಕೈಗಳನ್ನು ನೆಲದ ಮೇಲೆ ಊರಬೇಕಾಗಬಹುದು. ಮಂಡಿಗಳನ್ನು ನೆಲದಿಂದ ಮೇಲಕ್ಕೆತ್ತಿದರೆ ಹಿಂಭಾಗದ ಬಗ್ಗುವಿಕೆಗೆ ಆಸ್ಪದವಿರುವುದಿಲ್ಲವಾದ್ದರಿಂದ ಆಸನದ ಉದ್ದೇಶ ಸಫಲವಾಗುವುದಿಲ್ಲ. ಬಿಗಿಯ ಮಾಂಸಖಂಡಗಳನ್ನು ಹೊಂದಿರುವವರಿಗೆ ಕೈಗಳಿಂದ ಉಂಗುಷ್ಠಗಳನ್ನು ಹಿಡಿಯಲು ಸಾಧ್ಯವಾಗಲಾರದು; ಅಂತೆಯೇ ಸ್ಥೂಲಕಾಯದವರಿಗೆ ಕೂಡ. ಆದ್ದರಿಂದಲೇ ಪೂರ್ಣಾವಸ್ಥೆಯ ದಿಕ್ಕಿನಲ್ಲಿ ಕ್ರಮೇಣ ಮುಂದುವರಿಯಬೇಕಾಗುತ್ತದೆಂದು ಸೂಚಿಸಿದ್ದು. ಯಾರಿಗೆ ಉಂಗುಷ್ಠಗಳು ಸಿಗುವುದಿಲ್ಲವೋ ಅವರು ಕಾಲುಗಳನ್ನೋ, ಮಂಡಿಗಳನ್ನೋ, ತೊಡೆಗಳನ್ನೋ ಹಿಡಿದು ಶರೀರವನ್ನು ಮುಂದಕ್ಕೆ ಬಗ್ಗಿಸಿ ಅದೇ ಅವಸ್ಥೆಯಲ್ಲಿ ಕೆಲಕಾಲ ಉಳಿಯಬೇಕು. ಆಮೇಲೆ ಕ್ರಮೇಣ ಇನ್ನೂ ಸ್ವಲ್ಪ ಮುಂದಕ್ಕೆ ಕೈಗಳನ್ನು ಚಾಚಲು ಸಾಧ್ಯವಾಗುತ್ತದೆ. ಮಂಡಿಗಳನ್ನು ಮೇಲಕ್ಕೆತ್ತುವುದಂತೂ ಪೂರ್ತಿಯಾಗಿ ನಿಷಿದ್ಧ. ಕ್ರಮೇಣ ಬೆನ್ನುಹುರಿ ಹಾಗೂ ತೊಡೆಯ ಮಾಂಸಖಂಡಗಳು ಸಹಕರಿಸುವುದರಲ್ಲಿ ಅನುಮಾನವಿಲ್ಲ. ಒಂದು ತಿಂಗಳ ಅಭ್ಯಾಸದ ನಂತರವೇ ಪೂರ್ಣಾವಸ್ಥೆ ಸಾಧ್ಯವಾಗುತ್ತದೆಂದಾದರೂ ನೊಂದುಕೊಳ್ಳುವ ಅಗತ್ಯ ವಿಲ್ಲ. ಆದರೆ ಪ್ರತಿನಿತ್ಯ ಎರಡು-ಮೂರು ನಿಮಿಷಗಳ ಕಾಲ ಈ ಆಸನಕ್ಕೆ ಮೀಸಲಿಟ್ಟರೆ ಮಾತ್ರ ಇಂತಹ ಬೆಳವಣಿಗೆ ಸಾಧ್ಯ. ಪೂರ್ಣಾವಸ್ಥೆಯಲ್ಲಿ ಒಂದು ನಿಮಿಷ ಉಳಿದರೂ ಸಾಕು. ಬೇರೆಯವರ ಸಹಾಯ ಪಡೆದು ಬಲವಂತವಾಗಿ ಬೆನ್ನು ಬಗ್ಗಿಸುವುದನ್ನಂತೂ ಖಂಡಿತ ಯೋಚಿಸಕೂಡದು.


◀ ಪಶ್ಚಿಮತಾನಾಸನ

ಈ ಆಸನದಿಂದ ಹೊಟ್ಟೆಗೆ ಒಳ್ಳೆಯ ವ್ಯಾಯಾಮ ಒದಗುತ್ತದೆ; ಏಕೆಂದರೆ, ಅಲ್ಲಿಯ ಮಾಂಸಖಂಡಗಳು ಸಾಕಷ್ಟು ಸಂಕುಚಿತಗೊಳ್ಳುತ್ತವೆ. ಕಿಬ್ಬೊಟ್ಟೆಗೂ ಈ ಆಸನವು ವ್ಯಾಯಾಮ ಒದಗಿಸುತ್ತದೆ. ಈ ಭಾಗದಲ್ಲಿ ರಕ್ತ ಸಂಚಾರ ವಿಪುಲವಾಗಿ ವೃದ್ಧಿಯಾಗುತ್ತದೆ. ಯೋಗಾಭ್ಯಾಸದಲ್ಲಿ ನಿಷ್ಣಾತರಾದವರಿಗೆ ಈ ಆಸನದಲ್ಲಿ ಅನಾಹತ ಧ್ವನಿ ಕೇಳಿಸುತ್ತದಂತೆ. ಅದು ಅತಿಸೂಕ್ಷ್ಮವಾದ ಧ್ವನಿ. ಅಭ್ಯಾಸ-ಪ್ರಯತ್ನಗಳಿಂದ ಈ ಆಸನವನ್ನು ಸಿದ್ಧಿಸಿಕೊಂಡು ಆ ಧ್ವನಿಯನ್ನು ಕೇಳುತ್ತಿರುವುದಾಗಿ ಭ್ರಮಿಸುವವರಿಗೇನೂ ಕೊರತೆಯಿಲ್ಲ. ಆ ಧ್ವನಿ ಕೇಳಿಸಲಿ, ಬಿಡಲಿ, ಈ ಆಸನವು ಮಲಬದ್ಧತೆಯ ನಿವಾರಣೆಗೆ ಅನುಕೂಲ ಮಾಡಿಕೊಡುತ್ತದೆ ಮತ್ತು ಶುಕ್ರವು ನಿಸ್ತೇಜವಾಗಿರುವವರಿಗೆ ಸ್ವಲ್ಪಮಟ್ಟಿನ ಉತ್ತೇಜನ ನೀಡಲು ಸಮರ್ಥವಾಗಿದೆ. ದೀರ್ಘಕಾಲ ಈ ಆಸನದ ಪೂರ್ಣಾವಸ್ಥೆಯಲ್ಲಿ ಉಳಿಯುವುದು ಒಳ್ಳೆಯದಲ್ಲವೆಂದು ಹೇಳುತ್ತಾರೆ. ಮೂರು ನಿಮಿಷದ ಗಡುವು ಆರೋಗ್ಯಕರವಾದ್ದು. ಹಾಗೆ ದೀರ್ಘಕಾಲ ಈ ಆಸನದಲ್ಲಿ ಉಳಿಯಬಯಸುವವರು ಆಸನಾವಸ್ಥೆಯಲ್ಲಿಯೇ ಬಾರಿಬಾರಿಗೆ ಉಡ್ಡೀಯಾನವೆಂಬ ಕ್ರಿಯೆಯಲ್ಲಿ ತೊಡಗಬೇಕು. ಅದನ್ನು ಹೇಗೆ ಮಾಡಬಹುದೆಂಬುದನ್ನು ಮುಂದೆ ವಿವರಿಸಲಾಗುತ್ತದೆ.

❑❑❑

# ಗಂಜಿ ಮತ್ತು ಆತ್ಮ

ರಾತ್ರಿ ಊಟ ಮಾಡದಿದ್ದಾಗ ''ಊಟ ಮಾಡದೆ ಮಲಗಬಾರದು. ಊಟ ಮಾಡದಿದ್ದರೆ ಆತ್ಮ ರಾತ್ರಿ ಹೊಲೇರ ಮನೆ ಗಂಜಿ ಕುಡೀಲಿಕ್ಕೆ ಹೋಗುತ್ತೆ'' ಅಂತ ಹಿರೇರು ಹೇಳುತ್ತಿದ್ದರು.

ಬ್ರಾಹ್ಮಣರು ಶೂದ್ರರನ್ನು ಮುಟ್ಟಿಸಿಕೊಳ್ಳದಿದ್ದ ಕಾಲ, ಅಂದರೆ ಬಹಳ ಹಿಂದಲ್ಲ, ೧೯೬೦ ರ ದಶಕದಲ್ಲಿ ನನ್ನ ಕುಟುಂಬದಲ್ಲಿ ಅನೇಕ ವಿಚಿತ್ರಗಳಿದ್ದವು. ಸ್ನಾನ ಮಾಡಿ ಜಪ ಮಾಡುತ್ತಿದ್ದ ನನ್ನ ತಂದೆಯ ತಂಗಿ-ಗಂಗತ್ತೆಮ್ಮನನ್ನು ನಾವು ಯಾರೇ ಮುಟ್ಟಿದರೂ ಮೈಲಿಗೆಯಾಯಿತು ಎಂದು ಮತ್ತೊಂದು ಸ್ನಾನ ಮಾಡಿ ಪುನಃ ಜಪ ಮಾಡಲು ಕೂರುತ್ತಿದ್ದಳು. ಅವಳಿಗೆ ಮನೆಯವರೇ ಅಸ್ಪೃಶ್ಯರು. ನನ್ನ ತಂದೆ ದೇವರಪೂಜೆ ಮಾಡುತ್ತಿದ್ದರಾದರೂ 'ಹುಚ್ಚು ಮಡಿ'ಯ ಮನುಷ್ಯರಾಗಿರಲಿಲ್ಲ. ಅಣ್ಣ ಶ್ರೀಪಾದ ಅಸ್ಪೃಶ್ಯತೆ ವಿರುದ್ಧ ಮಾತಾಡುತ್ತಿದ್ದ. ನಮ್ಮ ಮೈಯಲ್ಲಿ ಹರಿಯುವ ರಕ್ತ, ಅವರ ಮೈಯಲ್ಲಿ ಹರಿಯುವ ರಕ್ತ ಎರಡೂ ಕೆಂಪೇ ಅಲ್ಲವೇ? ನಾವೇಕೆ ಅವರನ್ನು ಮುಟ್ಟಬಾರದು? ಮುಟ್ಟಿದರೆ ತಪ್ಪೇನಿಲ್ಲ ಎನ್ನುತ್ತಿದ್ದ. ಅವನು ಓದಲು ಸಾಗರ, ಮೈಸೂರುಗಳಲ್ಲಿದ್ದಾಗ ಮನೆಗೆ ಎಲ್ಲಾ ಜಾತಿಯ ಜನರೂ ಬರುತ್ತಿದ್ದರು. ಒಟ್ಟಿಗೇ ಊಟ ನಡೆಯುತ್ತಿತ್ತು.

೧೯೬೭ರಲ್ಲಿ ನನ್ನನ್ನು ಒಂದನೇ ತರಗತಿಗೆ ಸೇರಿಸಿದರು. ನಮ್ಮೂರಿನ ದಲಿತರು, ಶೂದ್ರರು, ಗೌಡರು, ಬ್ರಾಹ್ಮಣರು ಎಲ್ಲರೂ ಒಟ್ಟಿಗೇ ಓದಿದೆವು. ದಲಿತರ ಮೇಲೆ ದಬ್ಬಾಳಿಕೆ, ಶೋಷಣೆ ಇದಾವುದನ್ನೂ ಗಮನಾರ್ಹವಾಗಿ ಕಂಡಿಲ್ಲ. ಆಗ ಮನಸ್ಸಿಗೆ ತುಂಬಾ ಕಿರಿಕಿರಿಯಾದ ಸಂಗತಿ ಅಂದರೆ ಪಕ್ಕದ ಹಳ್ಳಿಯಲ್ಲಿ ದಲಿತರು ತೋಟದಲ್ಲಿ ಕದ್ದರೆಂದು ವಿದ್ಯುತ್ ಮುಟ್ಟಿಸಿದ್ದು ಸುದ್ದಿಯಾಗಿತ್ತು. ಇದನ್ನು ಬಿಟ್ಟರೆ ಕಣ್ಣಿಗೆ ಕಾಣುವಂತಹ ಘಟನೆ ನಡೆಯದಿದ್ದರೂ ಮೇಲು, ಕೀಳೆಂಬ ಹೊಗೆ ಒಳಗೊಳಗೇ ಗಮೆಯುತ್ತಿದ್ದದ್ದು ಅತ್ಮಕ್ಕೆ ತಿಳಿಯುತ್ತಿತ್ತು.

ಅಸ್ಪೃಶ್ಯತೆ, ಬಾಲ್ಯದಿಂದಲೂ ನನ್ನನ್ನು ಕಾಡಿದೆ. 'ಅಸ್ಪೃಶ್ಯತೆಯು ದೇವರಿಗೆ ಬಗೆಯುವ ದ್ರೋಹ' ಎಂಬ ಗಾಂಧೀಜಿಯವರ ಮಾತು ನಮ್ಮ ಧರ್ಮದ ಅನಿಷ್ಟ ಪದ್ಧತಿಯೊಂದರ ವಿರುದ್ಧ ಸಾರಿದ ಸಮರದಂತಿದೆ. ಊರಿಗೆ ಬಂದಾಗ ಹರಿಜನರ ಮನೆಯಲ್ಲೇ ಅವರು ತಂಗುತ್ತಿದ್ದುದು ಅವರ ನಡವಳಿಕೆಯ ವಿಶೇಷವಾಗಿದೆ. ಬಸ್ಸು, ರೈಲು, ಸಾರ್ವಜನಿಕ ಶಿಕ್ಷಣ ಮುಂತಾದವುಗಳಿಂದ ಅಸ್ಪೃಶ್ಯತೆ ಆಚರಣೆಯಲ್ಲಿ ಕಡಿಮೆಯಾಗುತ್ತ ಬಂದಿದೆ. ಆದರೆ ಮನದಾಳದಲ್ಲಿ......? ಖಾಸಗೀ ಜೀವನ ಯಥಾ ಸ್ಥಿತಿಯಲ್ಲೇ ಮುಂದುವರೆದಿದೆ.

ಹಿಂದೂ ಮುಸ್ಲಿಮರಲ್ಲಿ ಸಾಮರಸ್ಯ ಉಂಟಾಗ ಬೇಕಾದರೆ ಪ್ರತಿಯೊಬ್ಬ ಹಿಂದೂ ಅಥವಾ ಮುಸ್ಲಿಂ ಒತ್ತಾಯಪೂರ್ವಕವಾಗಿಯಾದರೂ ಅನ್ಯ ಧರ್ಮದ ಒಬ್ಬರಲ್ಲಿ ಸ್ನೇಹ ವಿಶ್ವಾಸ ಗಳಿಸಬೇಕು. ಮನೆಗೆ ಹೋಗುವುದು, ಟೀ ಕುಡಿಯುವುದು - ಇವೆಲ್ಲ ಪರಸ್ಪರರನ್ನು ಅರಿತುಕೊಳ್ಳಲು ಅವಕಾಶ ಕಲ್ಪಿಸುತ್ತವೆ. ಜಾತಿ ಜಾತಿಯ ನಡುವೆಯೂ ಅಂತರ ಕಡಿಮೆ ಮಾಡಿಕೊಳ್ಳಬೇಕೆಂದರೆ ಈ ಸೂತ್ರ ಅನುಸರಿಸುವುದು ಅಗತ್ಯ. ಅನ್ಯ ಜಾತಿಯವರೊಡನೆ ಹೆಚ್ಚು ಹೊತ್ತು ಕಳೆಯುವುದರಿಂದ ಅವರ ಆಚಾರ, ವಿಚಾರ, ದುಃಖ, ಸಂತಸ ಎಲ್ಲಾ ಅರ್ಥವಾಗಲು ಸಾಧ್ಯ. ಶಾಲೆಯಲ್ಲಿ ಎಲ್ಲರೊಡನೆ ಓದಿದೆವಾದರೂ ಮನೆಗೆ ಬಂದೊಡನೆ ನಮ್ಮ ಜಾತಿಯ ಮಿತಿಯೊಳಗೇ ಇರತೊಡಗುತ್ತೇವೆ. ಮನೆಯ ಹಿರಿಯರೂ ಕೂಡ ವಿಶಾಲ ಮನೋಭಾವನೆ ಬೆಳೆಸದಿದ್ದರೆ ಮತ್ತೊಂದು ಜಾತಿಯ ವಿರುದ್ಧ ಕತ್ತಿ ಮಸೆಯುವ ಕ್ರಿಯೆಯಲ್ಲಿ ತೊಡಗುತ್ತೇವೆ.

ಜಾತಿ ಮೀರಿ ಮನುಷ್ಯ ಪ್ರೀತಿ ಬೆಳೆಸಿಕೊಳ್ಳಬೇಕು ಎಂದು ಹವಣಿಸಿದಾಗಲೆಲ್ಲ ನನಗೆ ಆತ್ಮ ಗಂಜಿ ಕುಡಿಯಲು ಹೊಲೇರ ಮನೆಗೆ ಹೋಗುತ್ತೆ ಅನ್ನುವ ಹಿರಿಯರ ಮಾತು ನೆನಪಾಗುತ್ತದೆ. ಈ ಮಾತಿಗೆ ಎರಡು ಮುಖಗಳಿರುವುದನ್ನು ಗಮನಿಸಿ. ಬ್ರಾಹ್ಮಣ ಮತ್ತು ಹೊಲೆಯರ ನಡುವೆ ಕುಡಿಯುವ, ತಿನ್ನುವ ಆತ್ಮೀಯ ಸಂಬಂಧವಿಲ್ಲ. ಬ್ರಾಹ್ಮಣರು ಹೊಲೆಯರ ಮನೆಯಲ್ಲಿ ಕುಡಿಯುವುದಾಗಲೀ, ತಿನ್ನುವುದಾಗಲೀ ನಿಷಿದ್ಧವೆಂದು ತಿಳಿದವರು. ಇಂಥವರ ಮನೆಯಲ್ಲಿ ಮಗು ರಾತ್ರಿ, ಊಟ ಮಾಡದಿದ್ದಾಗ ಆತ್ಮ ಹೊಲೆಯರ ಮನೆಗೆ ಗಂಜಿ ಕುಡಿಯಲು ಹೋಗುತ್ತ ಅಂದಾಗ ಹೋಗಬಾರದವರ ಮನೆಗೆ ಹೋಗುತ್ತೆ ಎಂಬ ಭಯ ಹುಟ್ಟಿಸುವುದು ಕಾರಣವಾದರೂ ಆತ್ಮಕ್ಕೆ ಜಾತಿಯ ಗೆರೆಗಳಿಲ್ಲ, ಎಲ್ಲಾದರೂ ಸರಿ ಹಸಿವು ತೀರಿಸಿಕೊಳ್ಳಲು ಗಂಜಿ ಕುಡಿಯುತ್ತದೆ ಅನ್ನುವ ಗೆರೆ ದಾಟುವ ಸೂಚನೆಗಳೂ ಉಂಟು.

ಬಂದಗದ್ದೆ ರಾಧಾಕೃಷ್ಣ
ಕೆಳದಿ - ೫೭೭ ೪೦೧, ಶಿವಮೊಗ್ಗ

# ವಿಶ್ವಭಾರತಿ ಶರಣು

''ವಿಶ್ವಭಾರತಿ ಶರಣು, ಕಿರುತೀರ್ಥವಲ್ತು!'' ಎಂಬುದು ಕನ್ನಡ ನವೋದಯದ ಆಚಾರ್ಯ 'ಶ್ರೀ' ಯವರ ಒಳ್ನುಡಿ. ಪ್ರಾಯಶಃ ಅದಕ್ಕೆ ಪ್ರೇರಣೆ, ''ಆ ನೋ ಭದ್ರಾಃ ಕ್ರತವೋ ಯಂತು ವಿಶ್ವತಃ'' (ಉದಾತ್ತವಾದ ಆಲೋಚನೆಗಳು ಎಲ್ಲ ಕಡೆಗಳಿಂದಲೂ ಬರಲಿ) ಎಂಬ ಋಗ್ವೇದ ಸೂಕ್ತಿ. ಜನತೆಯ ಮನಸ್ಸು ಎಲ್ಲ ವಿಷಯಗಳಲ್ಲೂ ಸಂಕುಚಿತವಾಗುತ್ತಿರುವ ಇಂದಿನ ದಿನಗಳಲ್ಲಿ ಈ ಮಾತುಗಳು ಮಾರ್ಗ ತೋರಬೇಕು. ಸದ್ಯಕ್ಕೆ ನಾವು ಜ್ಞಾನದ ಬಗೆಗಷ್ಟೇ ಯೋಚಿಸಬಹುದು.

ಇಂದು ಜ್ಞಾನ, ವಿಜ್ಞಾನಗಳು ಹಿಂದಿಲ್ಲದಂತೆ ಬೆಳೆದಿವೆ, ಬೆಳೆಯುತ್ತಿವೆ; ಅವುಗಳ ದಿಗಂತಗಳು ವಿಸ್ತಾರಗೊಂಡಿವೆ. ಸರ್ವಜ್ಞನಾಗುವುದು ಈ ಹೊತ್ತು ಯಾರಿಗೂ ಸಾಧ್ಯವಿಲ್ಲ. ಎಂತಲೇ ಇದು ತಜ್ಞತೆಯ (ಸ್ಪೆಷಲೈಜೇಷನ್) ಕಾಲ. ಆದರೂ ನಾವು ಕೂಪ ಮಂಡೂಕಗಳಾಗಬಾರದು; ಸಮುದ್ರ ನಮ್ಮ ಗಮ್ಯ ಮತ್ತು ಆದರ್ಶವಾಗಬೇಕು.

"Jack of all trades, Master of none!" ಎಂಬ ವ್ಯಂಗ್ಯೋಕ್ತಿಯೊಂದಿದೆ. ಅದರ ಪೂರ್ವಾರ್ಧಕ್ಕೆ ತಕ್ಕವರಾಗುವುದು ತಪ್ಪೇನಲ್ಲ; ಆದರೆ "Master of none!" ಆಗುವುದೂ ಮುಖ್ಯ!

ಮ್ಯಾಥ್ಯೂ ಅರ್ನಾಲ್ಡ್ ವಿಮರ್ಶೆಯನ್ನು ಕುರಿತು ಹೀಗೆಂದಿದ್ದಾನೆ: ''ಜಗತ್ತಿನಲ್ಲಿ ಜ್ಞಾನವೂ ಚಿಂತಿತವೂ ಆದ ಅತ್ಯುತ್ತಮವಾದುದನ್ನು ಕಲಿಯುವ ಮತ್ತು ಹರಡುವ ನಿರ್ಲಿಪ್ತ ಪ್ರಯತ್ನ!'' ಬಹುಶಃ ಇಂದು ವಿಮರ್ಶೆಯ ಲಕ್ಷಣೀಕರಣನನ್ನಾಗಿ ಆ ವ್ಯಕ್ತಿಯನ್ನು ಯಾರೂ ಒಪ್ಪಲಾರರು. ಆದರೆ ಅದು ವಾಸ್ತವವಾಗಿ ವಿದ್ಯೆಯ, ಜ್ಞಾನದ ಲಕ್ಷಣ. ಜ್ಞಾನ ಎನ್ನುವುದು ಅಸಂಖ್ಯ ಪುಷ್ಪಗಳಿಂದ ಮಕರಂದವನ್ನು ಸಂಗ್ರಹಿಸಿ, ತನ್ಮೂಲಕ ಸಿದ್ಧಗೊಳಿಸಿದ ಜೇನು. ಅದರಿಂದ ತುಷ್ಟಿ ಮತ್ತು ಪುಷ್ಟಿ.

'ಯೂನಿವರ್ಸಿಟಿ' ಎಂಬುದಕ್ಕೆ ಸಂವಾದಿಯಾಗಿ 'ವಿಶ್ವವಿದ್ಯಾನಿಲಯ' ಎಂಬ ಮಾತನ್ನು ನಾವಿಂದು ಬಳಸುತ್ತಿದ್ದೇವೆ. ಆದರೆ 'ವಿಶ್ವವಿದ್ಯಾಸಮುದಯ' ಎಂಬ ಮಾತು ಬಹಳ ಹಳೆಯದು. ಸರ್ವೋದಯಕ್ಕೆ ಆ 'ಸಮುದಯ' ಕಾರಣವಾಗಬೇಕು.

'ಮನುಜ ಮತ, ವಿಶ್ವಪಥ'ದ ಆದರ್ಶ ರಾಷ್ಟ್ರಕವಿ ಕುವೆಂಪು ಅವರದು. ಮನುಷ್ಯ ಮತಾಂಧನಾಗಿ, ಅವಿದ್ಯೆಯ ಅಂಧಕಾರದಲ್ಲಿ ಸಿಲುಕದೆ, ಮತಿಯನ್ನು ಮುಂದಿಟ್ಟುಕೊಂಡು ಮುಂದುವರಿದು, ಜ್ಞಾನದ ಬೆಳಕನ್ನು ಕಾಣಬೇಕು (ವಿದ್ಯೆಯ ಅಧಿದೇವತೆ ಸರಸ್ವತಿ ಅಥವಾ ಭಾರತಿ. 'ಭಾ' ಎಂದರೆ ಬೆಳಕು). ಸೂರ್ಯನ ಪ್ರಕಾಶ ಎಲ್ಲ ಗಡಿಗಳನ್ನೂ ಮೀರಿದ್ದು; ಅಂತೆಯೆ, ಜ್ಞಾನಜ್ಯೋತಿ.

ನಾವು ಎಷ್ಟೋ ಸಲ ಕಾಲುದಾರಿ, ಕಿರುದಾರಿಗಳಲ್ಲಿ ತೊಳಲುತ್ತೇವೆ. ಆದರೆ ನಿಜವಾದ ಜ್ಞಾನ 'ವಿಶ್ವಪಥ' ಪ್ರಯಾಣದಿಂದ ಪ್ರಾಪ್ತವಾಗುತ್ತದೆ. ''ಶ್ರದ್ಧಾವಾನ್ ಲಭತೇ ಜ್ಞಾನಂ'' (ಶ್ರದ್ಧಾಳು ಜ್ಞಾನವನ್ನು ಪಡೆಯುತ್ತಾನೆ) ಎನ್ನುತ್ತದೆ, ಭಗವದ್ಗೀತೆ. ವಿದ್ಯೆಯ ಅಥವಾ ಜ್ಞಾನದ ಸಂಪಾದನೆಗೆ ಶ್ರದ್ಧೆಯೂ ಬೇಕು, ವಿಶ್ವವಿಶಾಲ ದೃಷ್ಟಿಯೂ ಬೇಕು. ಅಂಥ ಪವಿತ್ರವಾದ, ಉದ್ಧಾರಕವಾದ ವಿಶ್ವವಿದ್ಯೆಗೆ ಅನ್ವಯಿಸುತ್ತದೆ, 'ಶ್ರೀ' ಯವರ ಈ ನುಡಿ:

''ಅನೃತಮೆನೆ ವಿದ್ಯೆಯೆ, ಅವಿದ್ಯೆಯಲ್ತು!''

ಡಾ. ಸಿ. ಪಿ. ಕೃಷ್ಣಕುಮಾರ್
೨ನೇ ಮುಖ್ಯ ರಸ್ತೆ, ವಿನಾಯಕನಗರ, ಮೈಸೂರು - ೫೭೦ ೦೧೨

RNI Regn. No. KARKAN/1999/614 REGD. CPMG / KA / BG – 7 / 2001 Licenced to post without prepayment. Licence No. WPP(CO)-14




# ಮೈಸೂರು ಸ್ಯಾಂಡಲ್ ಆರೈಕೆ ...ಮಾತೃಪಾಲನೆ ತರುವಾಯ ಇದೇ ಪ್ರಶಸ್ತ



AN ISO 9002 COMPANY

## Mysore Sandal Baby Soap

ನಿಮ್ಮ ಮುದ್ದಿನ ಮಗುವಿಗಾಗಿಯೇ ವಿಶೇಷ ಆಸಕ್ತಿಯಿಂದ ಸೃಷ್ಟಿಸಲಾಗಿದೆ. ಅತಿ ಪರಿಶುದ್ಧ ಸಾಮಗ್ರಿಗಳಿಂದ ತಯಾರಾದದ್ದು - ಸೌಮ್ಯವಾದ ಶ್ರೀಗಂಧ ತೈಲ, ಪುಷ್ಟಿದಾಯಕ ಬಾದಾಮಿ ಎಣ್ಣೆ, ಮೃದುವಾದ ಗ್ಲಿಸರೀನ್ ಹಾಗೂ ಮತ್ತಿತರ ತೇವಾಂಶದಾಯಕ ಅಂಶಗಳಿಂದ ಕೂಡಿದ್ದು, ನಿಮ್ಮ ಮಗುವಿನ ಚರ್ಮವನ್ನು ಮೃದುವಾಗಿ, ಹೊಳಪುಳ್ಳದ್ದಾಗಿ ಹಾಗೂ ಸೋಂಕಿನಿಂದ ದೂರವಾಗಿ ಇಡುತ್ತದೆ.




## Mysore Sandal Baby Powder

ಅತ್ಯಂತ ಉತ್ತಮವಾದ ಘಟಕಾಂಶಗಳಿಂದ ತಯಾರಾದದ್ದು - ನಿಮ್ಮ ಮಗುವಿನ ಮೃದುವಾದ ಚರ್ಮದ ಸ್ತರಗಳಲ್ಲಿನ ಬೆವರನ್ನು ಹೀರಲು ನೆರವಾಗುವ ಶ್ರೀಗಂಧ ಹಾಗೂ ಬಾದಾಮಿ ಇವುಗಳನ್ನು ಹೊಂದಿದೆ. ಇದರಿಂದ ಚರ್ಮ ಕೆಂಪುಗಟ್ಟುವ ಸಂದರ್ಭಗಳು ಕಡಿಮೆ - ಅಲ್ಲದೆ ನಿಮ್ಮ ಮಗುವಿನ ಚರ್ಮವನ್ನು ಇಡೀ ದಿನ ಶುಷ್ಕವಾಗಿ ಹಾಗೂ ಪರಿಮಳಯುಕ್ತವಾಗಿಡುತ್ತದೆ.






ಹಾಗೂ ನಮ್ಮ ಆನ್-ಲೈನ್ ಸ್ಟೋರ್‌ನಲ್ಲಿ
**www.mysoresandal.com**
ವಿಸ್ತಾರ ಶ್ರೇಣಿಯಲ್ಲಿ ದೊರೆಯುವ ಉತ್ಪನ್ನಗಳನ್ನು ಖರೀದಿಸಿ




**ಕರ್ನಾಟಕ ಸಾಬೂನು ಮತ್ತು ಮಾರ್ಜಕ ನಿಯಮಿತ**
ಪೋ.ಪೆ.ನಂ.5531, ಬೆಂಗಳೂರು - ಪುಣೆ ಹೆದ್ದಾರಿ, ರಾಜಾಜಿನಗರ,
ಬೆಂಗಳೂರು - 560 055 ದೂರವಾಣಿ : 337 1106, 337 6922, 337 0469
ಫ್ಯಾಕ್ಸ್ : 080337 0498, ಈಮೇಲ್ : sandal@giasbg01.vsnl.net.in
ಶಾಖೆಗಳು : • ಕಲ್ಕತ್ತ • ಚೆನ್ನೈ • ಕಾನ್ಪುರ್ • ಮುಂಬೈ • ನವದೆಹಲಿ • ಹೈದರಾಬಾದ್

CANCO • BLR • KSDL • 1107 • 2000

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore-560 058 and Published ... Publications (P) Ltd., Embassy Centre, Crescent Road, P. B. 5159, Bangalore-560 001. Chief Editor : Dr. G. Ramakrishna